# ಚಿಕಿತ್ಸಾತತ್ತ್ವದೀಪಿಕಾ

ಆಯುರ್ವೇದ ವಿದ್ವಾನ್

**ಮೋಟಗಾನಹಳ್ಳಿ ಮಹಾದೇವಶಾಸ್ತ್ರೀ, ಎಲ್.ಎ.ಎಮ್.ಎಸ್.**

೧೯೫೫

ನ ಹಿ ಜೀವಿತದಾನಾದ್ಧಿ ದಾನಮನ್ಯದ್ವಿಶಿಷ್ಯತೇ ।

—(ಚರಕಃ)

# ಚಿಕಿತ್ಸಾತತ್ತ್ವದೀಪಿಕಾ

ಆಯುರ್ವೇದ ವಿದ್ವಾನ್

**ಮೋಟಗಾನಹಳ್ಳಿ ಮಹಾದೇವಶಾಸ್ತ್ರೀ, ಎಲ್.ಎ.ಎಮ್.ಎಸ್.**

*Lecturer, Govt Ayurvedic and Unani College, Mysore*

*(Author, Aushadhikalpana & Member, Boards of Examiners in Indian Medicine, Mysore and Madras)*

*With a foreword by*
*Vaidyaratna Capt. G Srinivasa Murti,*
*B.A., B.L., M.B. & C.M.*

ಬೆಲೆ: ರೂ. ೫ ಅಂಚೆ ವೆಚ್ಚ ಪ್ರತ್ಯೇಕ

# PREFACE

I am very happy to comply with the request of Ayurveda Vidwan Dr. M Mahadeva Sastry, L A M S., to write a preface to his excellently written book in Kannada entitled "Chikitsa Tatwa Deepika". It is just the type of text-book which is urgently needed for the students in modern teaching institutions of Ayurveda. The Ayurvedic Text-books now in common use like Ashtanga Hridaya Charaka and Sushruta, though wonderfully and incomparably excellent so far as basic principles and rationale of treatment are concerned have to be suitably edited for the use of the students of the medern schools and colleges of Ayurveda For example, in a subject like Medicine (Kaya Chikistsa, about which the present work is concerned) the ancient text-books give a large number of *Kashayams* under treatment of each disease, many of which are not now generally prescribed by the teachers and other practitioners. On the other hand, a number of medicines not included in those text-books like *Bhasmas*, *Sinduras*, *Rasa* preparations etc, but taken from separate *Rasa* treatises and local usages (Sampradayams) are in common use by the generality of successful practitioners of to-day including our teachers of Ayurvedic Institutions. The result is that, in actual practice there have been both additions to and subtractions from the texts of our ancient text-books on Medicine. The students find that they are taught by the teachers of medicine certain things not generally used in actual practice of to-day but are not taught things actually used by successful practitioners including their own teachers themselves.

This divorce of theory from practice has to be urgently rectified in our modern teaching institutions of Ayurveda where the text-books used for under-graduate study should give, in clear, comprehensive and yet concise manner, mainly such teachings as are needed by the general practitioners in their actual day-to-day practice. They are to be written preferably in Kannada, for the excellent reasons given in the author's introduction. Such of the students as are interested to know of higher things and in original Samskrit can study such things for themselves later on or at post-graduate centres for higher study. The present text-book admirably fulfills the requirements of under-graduate study referred to above. The scientific correlation of Nidana with Chikitsa given under each disease and the incorporation of authoritative Samskrit Verses where indicated are other welcome features of this exceedingly well written text-book, which, I hope, will be widely used for under-graduate study of Ayurvedic Teaching Institutions in the Kannada Country Most heartily, I congratulate the author on the production of this model text-book, and I fervently hope that this model will be followed in giving us similar text-books on other divisions of Ashtanga Chikitsa or Therapeutics.

Adyar, Madras
25-4-55

**G. Srinivasa Murti**

# ಗ್ರಂಥಕರ್ತರ ನುಡಿ

ಚಿಕಿತ್ಸಾ ಶಾಸ್ತ್ರವನ್ನು ಗೌ|| ಆಯುರ್ವೇದ ಮತ್ತು ಯುನಾನಿ ಕಾಲೇಜಿನ ಕೊನೆಯ ವರ್ಷದ ವಿದ್ಯಾರ್ಥಿಗಳಿಗೆ ನಾನು ನಾಲ್ಕಾರು ವರ್ಷಗಳಿಂದ ಪಾಠ ಹೇಳುತ್ತಿರುತ್ತಲೂ, ಮದ್ರಾಸು ಮತ್ತು ಮೈಸೂರು ಆಯುರ್ವೇದ ಪರೀಕ್ಷೆಗಳಲ್ಲಿ ಪರೀಕ್ಷಕನಾಗಿಯೂ, ಕನ್ನಡದಲ್ಲಿ ಈ ಬಗೆಯ ಚಿಕಿತ್ಸಾಗ್ರಂಥದ ಆವಶ್ಯಕತೆಯನ್ನು ಕಂಡು, ವಿದ್ಯಾರ್ಥಿಗಳಿಂದಲೂ, ವೈದ್ಯಬಾಂಧವರಿಂದಲೂ ಗ್ರಂಥವನ್ನು ಬರೆಯಲು ಪ್ರೇರಿಸಲ್ಪಟ್ಟವನಾಗಿ ಈ ಉದ್ಯಮಕ್ಕೆ ಶಾಸ್ತ್ರಸೇವಾ ದೃಷ್ಟಿಯಿಂದ ಕೈಹಚ್ಚಿರುತ್ತೇನೆ.

ಹಿಂದಿನ ಕಾಲದ ಗ್ರಂಥಗಳಲ್ಲಿರುವ ಚಿಕಿತ್ಸಾ ವಿಷಯಗಳನ್ನು ಒಟ್ಟುಗೂಡಿಸಿ ವಾಗ್ಭಟಾಚಾರ್ಯರು ಅಷ್ಟಾಂಗಹೃದಯವೆಂಬ ಗ್ರಂಥವನ್ನು ರಚಿಸಿ ಲೋಕಕ್ಕೆ ಉಪಕಾರ ಮಾಡಿದರು. ಇದೂ ಸಹ ಹಿಂದಿನ ಗ್ರಂಥಗಳಂತೆ ಸಂಸ್ಕೃತದಲ್ಲಿದೆ. ಈಗಿನ ಪರಿಸ್ಥಿತಿಯಲ್ಲಿ ಆಯುರ್ವೇದ ವಿದ್ಯಾರ್ಥಿಗಳಿಗೂ, ಚಿಕಿತ್ಸರುಗಳಿಗೂ ಸಂಸ್ಕೃತಭಾಷಾ ಸೌಲಭ್ಯಗಳು ಇಲ್ಲದಿರುವುದರಿಂದಲೂ, ವಿದ್ಯಾರ್ಥಿದೆಶೆಯಲ್ಲಿ ಪ್ರಾಚೀನಗ್ರಂಥಗಳಲ್ಲಿ ಅಲ್ಲಲ್ಲಿ ಇದಕವಾಗಿರುವ ಎಲ್ಲ ವಿಷಯಗಳನ್ನೂ ಪ್ರತ್ಯೇಕವಾಗಿ ಓದಲು ಅನಾನುಕೂಲಗಳಿರುವುದರಿಂದಲೂ ಇವೆಲ್ಲವನ್ನೂ ಕ್ರೋಢೀಕರಿಸಿ ಕನ್ನಡಭಾಷೆಯಲ್ಲಿ ಪ್ರಕಟಿಸಲಾಗಿದೆ ಈ ಗ್ರಂಥವನ್ನು ಬರೆಯುವಾಗ ವಿದ್ಯಾರ್ಥಿಗಳ ಮತ್ತು ಚಿಕಿತ್ಸರುಗಳ ತೊಂದರೆಗಳನ್ನು ಗಮನದಲ್ಲಿಟ್ಟು ಆದಷ್ಟು ಅವರ ತೊಡಕುಗಳನ್ನು ನಿವಾರಿಸಲು ಪ್ರಯತ್ನ ಮಾಡಿದ್ದೇನೆ. ಕ್ರಮಬದ್ಧವಾದ ಚಿಕಿತ್ಸೆಯನ್ನೇ ಅವಲಂಬಿಸಬೇಕೆಂಬ ಉದ್ದಿಶ್ಯದಿಂದ ಆಯಾ ಚಿಕಿತ್ಸೆಯ ಕೊನೆಯಲ್ಲಿ ಸಂಗ್ರಹಗಳನ್ನು ಬರೆದಿರುತ್ತೇನೆ. ನಿದಾನ ಮತ್ತು ಚಿಕಿತ್ಸೆಗಳನ್ನು ಚೆನ್ನಾಗಿ ತಿಳಿದುಕೊಂಡನಂತರ ಸಂಗ್ರಹರೂಪದಲ್ಲಿ ಕೊಟ್ಟಿರುವ ವಿಷಯಗಳನ್ನು ನೆನಪಿನಲ್ಲಿಟ್ಟರೆ ತಮ್ಮ ಕ್ರಮಗಳನ್ನು ಮರೆಯಲಾರರು. ಅಲ್ಲದೆ ಇವು ಕೇವಲ ಪುಸ್ತಕಪಾಠ ಮಾತ್ರವಾಗದೆ ಕಾರ್ಯತಃ ಪ್ರಯೋಗಮಾಡಿದಂತೆ ಆಗುವುವು. ಓದಿದ ವಿಷಯಗಳು ಎಲ್ಲಿಯವರೆಗೆ ಕಾರ್ಯಗತವಾಗುವುದಿಲ್ಲವೋ ಅಲ್ಲಿಯವರೆಗೆ ಅವು ನಿಷ್ಫಲವಾಗುವುವು. ಆದುದರಿಂದ ಇವನ್ನು ಚೆನ್ನಾಗಿ ಮನದಟ್ಟುವಂತೆ ಮಾಡಿ ಚಿಕಿತ್ಸೆಯು ಸಫಲವಾಗುವುದಕ್ಕೋಸ್ಕರ ಪುಸ್ತಕದ ಕಡೆಯ ಭಾಗದಲ್ಲಿ ನಿಶ್ಚಿತ ಫಲಗಳನ್ನು ಕೊಡುವ ಪ್ರಸಿದ್ಧ ಯೋಗಗಳ

ಸಂಗ್ರಹವನ್ನೂ ಕೊಟ್ಟಿರುತ್ತೇನೆ. ಈಗ ನಡೆದಿರುವ ಪ್ರಯತ್ನವು ಸರ್ವಥಾ ಪರಿಪೂರ್ಣವೆಂದಾಗಲೀ ನಿರ್ದೋಷವಾಗಿರುವುದೆಂದಾಗಲೀ ನಾನು ಭಾವಿಸಿಲ್ಲ. ವಿದ್ವಾಂಸರುಗಳೂ ಚಿಕಿತ್ಸಾತತ್ಪರರೂ ಆದವರು ಇದನ್ನು ಉತ್ತಮಗೊಳಿಸುವ ಎಲ್ಲಾ ಸಲಹೆಗಳನ್ನೂ ನೀಡಲೆಂದು ಪ್ರಾರ್ಥಿಸುತ್ತೇನೆ.

ನನ್ನಲ್ಲಿ ವಿಶ್ವಾಸವಿಟ್ಟು ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದುಕೊಟ್ಟು ಇದರ ಗೌರವವನ್ನು ಹೆಚ್ಚಿಸಿರುವ ವೈದ್ಯರತ್ನ ಕ್ಯಾಪ್ಟನ್ ಜಿ. ಶ್ರೀನಿವಾಸ ಮೂರ್ತಿ, B.A., B.L., M.B. & C.M.ರವರನ್ನು ಗೌರವಪೂರ್ವಕವಾಗಿ ವಂದಿಸುತ್ತೇನೆ. ಮುದ್ರಣಕ್ಕೆ ಮುಂಚಿತವಾಗಿ ಇದನ್ನು ಪರಿಷ್ಕರಿಸಿ, ಉತ್ತೇಜನ ಕೊಟ್ಟಿರುವ ಡಾ॥ ಎಂ. ಆರ್. ಗುರುಸ್ವಾಮಿ ಮೊದಲಿಯಾರ್, B.A., M.D.ರವರಿಗೂ, ನನ್ನ ಪೂಜ್ಯ ಗುರುಗಳಾದ ಭಿಷಕ್ಚೂಡಾಮಣಿ ಆಯುರ್ವೇದ ವಿದ್ವಾನ್ ಡಾ॥ ವೈ. ಲಕ್ಷ್ಮೀನರಸಿಂಹಶಾಸ್ತ್ರೀ, L M.P.ಗಳವರಿಗೂ ಮತ್ತು ನನ್ನ ಮಿತ್ರರಾದ ಭಿಷಗಾಚಾರ್ಯ ಡಾ॥ ಎನ್. ಲಕ್ಷ್ಮೀನಾರಾಯಣ M A., M.S. (Cal). L.M.F. (Bengal)ರವರಿಗೂ ನನ್ನ ವಂದನೆಗಳನ್ನು ಅರ್ಪಿಸುತ್ತೇನೆ. ಇದನ್ನು ಬರೆಯುವುದಕ್ಕೆ ಮುಖ್ಯವಾಗಿ ಚಿಕಿತ್ಸೆಯ ಪಾಠವನ್ನು ಹೇಳಲು ಮತ್ತು ಚಿಕಿತ್ಸಾಭಾಗದಲ್ಲಿ ಕೆಲಸ ಮಾಡಲು ಜವಾಬುದಾರಿಯನ್ನು ವಹಿಸಿ ಆಗಾಗ್ಗೆ ತಕ್ಕ ಸಲಹೆಗಳನ್ನು ಕೊಟ್ಟ ನಮ್ಮ ಕಾಲೇಜಿನ ಪ್ರಿನ್ಸಿಪಾಲರಾದ ಡಾ॥ ಸಿ. ದ್ವಾರಕನಾಥ್, L.I M., Z.T. (Hamburg) ರವರಿಗೆ ನನ್ನ ಅನಂತ ವಂದನೆಗಳು. ಇದನ್ನು ಸಿದ್ಧಗೊಳಿಸುವುದರಲ್ಲಿ ಬಹಳಮಟ್ಟಿಗೆ ಉಪಕರಿಸಿರುವ ನನ್ನ ಗುರುವರ್ಯರಾದ ಆಯುರ್ವೇದ ವಿದ್ವಾನ್ ಎನ್. ಎಲ್. ಭಟ್ಟಾಚಾರ್ಯರವರಿಗೆ ನಾನು ಚಿರಋಣಿಯಾಗಿದ್ದೇನೆ. ಅತ್ಯಲ್ಪ ಕಾಲದಲ್ಲೇ ಮುದ್ರಣಕಾರ್ಯವನ್ನು ನಡೆಸಿಕೊಟ್ಟ ಶ್ರೀಮಾನ್ ಆರ್. ಎನ್. ಹಬ್ಬು ಮತ್ತು ಅವರ ಸಿಬ್ಬಂದಿಯವರಿಗೆ ಕೃತಜ್ಞನಾಗಿದ್ದೇನೆ.

ಈ ನನ್ನ ಕೃತಿಯು ವಿದ್ಯಾರ್ಥಿಗಳಿಗೂ ವೈದ್ಯರಿಗೂ ಉಪಯೋಗವಾದರೆ ನನ್ನ ಶ್ರಮ ಸಾರ್ಥಕವೆಂದು ತಿಳಿಯುತ್ತೇನೆ.

ಮೈಸೂರು
ಮನ್ಮಥ ಸಂ॥ ವೈಶಾಖ ಶು॥ ಷಷ್ಠೀ
ತಾ॥ ೨೭–೪–೧೯೫೫

ಗ್ರಂಥಕರ್ತಾ

# ಪರಿವಿಡಿ

(ಯೋಗಸಂಗ್ರಹ)

# ಆಧಾರ ಗ್ರಂಥಗಳು

| | |
|---|---|
| ಅ.ಹೃ.ಸೂ. | ಅಷ್ಟಾಂಗ ಹೃದಯ ಸೂತ್ರಸ್ಥಾನ |
| ಅ.ಹೃ.ನಿ. | ,, ನಿದಾನ ,, |
| ಅ.ಹೃ.ಚಿ. | ,, ಚಿಕಿತ್ಸಾ ,, |
| ಅ.ಹೃ.ಉ. | ,, ಉತ್ತರ ,, |
| ಆ.ಕ. | ಆಯುರ್ವೇದ ಕಲ್ಪದ್ರುಮ |
| ಆ.ವಿ. | ಆಯುರ್ವೇದ ವಿಜ್ಞಾನ |
| ಚ.ಚಿ. | ಚರಕಸಂಹಿತಾ ಚಿಕಿತ್ಸಾಸ್ಥಾನ |
| ಭೈ.ರ. | ಭೈಷಜ್ಯ ರತ್ನಾವಳಿ |
| ಮಾ.ನಿ. | ಮಾಧವ ನಿದಾನ |
| ಯೋ.ರ. | ಯೋಗ ರತ್ನಾಕರ |
| ವೈ.ಚಿ. | ವೈದ್ಯ ಚಿಂತಾಮಣಿ |
| ಶಾ.ಸಂ. | ಶಾರ್ಙ್ಗಧರ ಸಂಹಿತಾ |
| ಸ.ಯೋ. | ಸಹಸ್ರಯೋಗ |
| ಸು.ನಿ. | ಸುಶ್ರುತ ನಿದಾನಸ್ಥಾನ |
| ಸು.ಚಿ. | ,, ಚಿಕಿತ್ಸಾ ,, |
| ಸು.ಉ. | ,, ಉತ್ತರ ತಂತ್ರ |

ಬಸವರಾಜೀಯಮ್, ವೈದ್ಯ ಜೀವನ, ವೈದ್ಯಸಾರಸಂಗ್ರಹ

ಈ ಗ್ರಂಥದಲ್ಲಿ ಹೇಳಿರುವ ಮಾನಗಳು ಮೈಸೂರು ದೇಶದಲ್ಲಿ ರೂಢಿಯಲ್ಲಿರುವ ಅಳತೆ ಮತ್ತು ತೂಕಗಳನ್ನು ಹೊಂದಿಕೊಂಡಿವೆ. ಔಷಧ ಪ್ರಮಾಣಗಳನ್ನು ವ್ಯವಹಾರಕ್ಕೆ ತಕ್ಕಂತೆ ಗ್ರೈನ್ ಮತ್ತು ಔನ್ಸ್‌ಗಳಿಗನುಸಾರವಾಗಿ ಹೇಳಲಾಗಿದೆ. ಮಾನಪರಿಭಾಷೆಯು ಮಾಗಧೀಯವಾಗಿಯೇ ಇದೆ.

# ಚಿಕಿತ್ಸಾತತ್ವದೀಪಿಕಾ

**ನಮಾಮಿ ಧನ್ವಂತರಿಮಾದಿದೇವಂ**
**ಸುರಾಸುರೈರ್ವಂದಿತಪಾದಪದ್ಮಮ್ ।**
**ಲೋಕೇ ಜರಾರುಗ್ಭಯಮೃತ್ಯುನಾಶಂ**
**ಧಾತಾರಮೀಶಂ ವಿವಿಧೌಷಧೀನಾಮ್ ॥**

## ಜ್ವರನಿದಾನ

ಮಿಥ್ಯಾಹಾರವಿಹಾರಗಳಿಂದ **ಆಮಾಶಯದಲ್ಲಿರುವ** ದೋಷಗಳು ಪ್ರಕೋಪವಾಗಿ ಕೋಷ್ಠಾಗ್ನಿಯನ್ನು ಅಲ್ಲಿಂದ ಹೊರ ಹೊರಡಿಸುವುವು. ಹೀಗೆ ಅಗ್ನಿಯು ತನ್ನ ಸ್ಥಾನವನ್ನು ಬಿಟ್ಟು ಧಾತುಗಳನ್ನು ಸೇರಿದಾಗ, ಶರೀರ, ಇಂದ್ರಿಯ ಮತ್ತು ಮನಸ್ಸುಗಳನ್ನು ಬಾಧಿಸುತ್ತದೆ ಈ ಅವಸ್ಥೆಗೆ ಜ್ವರವೆಂದು ಹೆಸರು. ಇದರಲ್ಲಿ ಸಾಮಾನ್ಯವಾಗಿ ಬೆವರು ತಡೆಯಲ್ಪಟ್ಟಿರುವುದು, ಶರೀರದ ತಾಪ ಹೆಚ್ಚಿರುವುದು ಮತ್ತು ಅಂಗಾಂಗಗಳೆಲ್ಲವೂ ನೋಯುತ್ತಿರುವುದು ಮುಖ್ಯ ಲಕ್ಷಣಗಳು. ಶಾರೀರಕ ಮತ್ತು ಮಾನಸಿಕಗಳೆಂದೂ, ದೋಷಜ ಮತ್ತು ಆಗಂತುಜಗಳೆಂದೂ, ಕಾಲಭೇದದಿಂದ ಪ್ರಾಕೃತ ಮತ್ತು ವೈಕೃತಗಳೆಂದೂ, ಸಾಮಾನ್ಯ ಮತ್ತು ವಿಷಮಗಳೆಂದೂ, ಪಾಕಭೇದದಿಂದ ಆಮ ಮತ್ತು ನಿರಾಮ ಗಳೆಂದೂ, ಸ್ಥಾನಭೇದದಿಂದ ಬಾಹ್ಯ ಮತ್ತು ಆಭ್ಯಂತರಿಕ ಮುಂತಾಗಿ ಜ್ವರ ವನ್ನು ವಿಂಗಡಿಸಬಹುದು.

ಸಾಮಾನ್ಯವಾಗಿ ದೋಷಭೇದಗಳಿಂದ ಪಾಕವಾಗುತ್ತಿರುವ ಎಲ್ಲಾ ರೋಗಗಳಲ್ಲೂ ಜ್ವರವು ಪ್ರಧಾನವಾಗಿರುವುದು. ಅಗ್ನಿಮಾಂದ್ಯವಿರುವಾಗ ಆಮದೋಷವುಂಟಾಗಿ ಅದು ಧಾತುಗಳನ್ನು ಸೇರಿದರೆ ದೋಷ ಅಥವಾ ಧಾತು ಗಳು ಪಾಕವಾಗುವವರೆಗೂ ವಿವಿಧ ಲಕ್ಷಣಗಳನ್ನು ವ್ಯಕ್ತಪಡಿಸುವುದು ದೋಷಪಾಕವಾದರೆ ಜ್ವರಮೋಕ್ಷವೂ ಧಾತುಪಾಕವಾದರೆ ಧಾತುಕ್ಷಯವೂ ಆಗುವುವು.

**ಜ್ವರದ ಪೂರ್ವರೂಪ**— ಶ್ರಮ, ಸಂಕಟ, ವೈವರ್ಣ್ಯ (ಶರೀರಛಾಯೆಯಲ್ಲಿ ಒದಲಾವಣೆ), ಆಹಾರದಲ್ಲಿ ಸರಿಯಾದ ರುಚಿಯಿಲ್ಲದಿರುವುದು, ಆಲಸ್ಯ, ಶೀತ-ಉಷ್ಣಗಳಲ್ಲಿ ಒಂದೊಂದು ಸಲ ಇಚ್ಛೆ ಮತ್ತು ದ್ವೇಷ, ಆಕಳಿಕೆ, ಅಂಗ ಮರ್ದ ಮುಂತಾದ ಲಕ್ಷಣಗಳು ಹುಟ್ಟಲಿರುವ ಜ್ವರವನ್ನು ಸೂಚಿಸುತ್ತವೆ.

**ರೂಪ**—ದೋಷ ನಿರ್ದಿಷ್ಟವಾದರೆ ಸ್ಪಷ್ಟವಾಗಿ ಆಯಾ ದೋಷಕ್ಕನುಸಾರವಾಗಿ ಲಕ್ಷಣಗಳು ಕಂಡುಬರುವುವು. ವಾತ, ಪಿತ್ತ, ಕಫ, ವಾತಪಿತ್ತ, ಶ್ಲೇಷ್ಮಪಿತ್ತ, ವಾತಶ್ಲೇಷ್ಮ ಮತ್ತು ಸನ್ನಿಪಾತಗಳಿಂದ ಏಳು ಬಗೆಯ ದೋಷ ಜ್ವರಗಳನ್ನು ತಿಳಿಯಬಹುದು. ಆಗಂತುವಿನಲ್ಲಿ ಆಮದೋಷವಿರುವುದಿಲ್ಲ. ಅಗ್ನಿ, ಕ್ಷತ, ಭಂಗ ಮುಂತಾದುವುಗಳಿಂದ ವ್ರಣ ಲಕ್ಷಣಗಳೂ, ಕಾಮ ಕ್ರೋಧಾದಿಗಳಿಂದ ಮಾನಸಿಕ ಲಕ್ಷಣಗಳೂ ಕಂಡುಬರುತ್ತವೆ.

| ದೋಷ | ಚಯ | ಪ್ರಕೋಪ | ಪ್ರಶಮ |
|---|---|---|---|
| ವಾತ | ಗ್ರೀಷ್ಮ | ವರ್ಷ | ಶರತ್ |
| ಪಿತ್ತ | ವರ್ಷ | ಶರತ್ | ಹೇಮಂತ |
| ಕಫ | ಶಿಶಿರ | ವಸಂತ | ಗ್ರೀಷ್ಮ |

**ಪ್ರಾಕೃತಜ್ವರಗಳು**—ವಾತಾದಿ ದೋಷಗಳು ಋತು ವ್ಯತ್ಯಾಸಗಳಿಂದ ಚಯ, ಪ್ರಕೋಪ ಮತ್ತು ಶಮನಗಳನ್ನು ಹೊಂದುತ್ತವೆ. ವರ್ಷದಲ್ಲಿ ವಾತವೂ, ಶರದೃತುವಿನಲ್ಲಿ ಪಿತ್ತವೂ, ವಸಂತದಲ್ಲಿ ಕಫವೂ ಪ್ರಕೋಪ ಹೊಂದುತ್ತವೆ. ಈ ಋತುಗಳಿಗನುಸಾರವಾಗಿ ಆಯಾ ಪ್ರಕುಪಿತ ದೋಷಗಳಿಂದ ಉಂಟಾಗುವ ಜ್ವರಗಳಿಗೆ ಪ್ರಾಕೃತಗಳೆಂದೂ, ಇತರ ದೋಷಗಳಿಂದುಂಟಾಗುವ ಜ್ವರಗಳಿಗೆ ವೈಕೃತಗಳೆಂದೂ ತಿಳಿಯಬೇಕು. ವಾತದಿಂದಾದ ಪ್ರಾಕೃತಿಕಜ್ವರ ಮತ್ತು ಉಳಿದ ದೋಷಗಳ ವೈಕೃತಜ್ವರಗಳು ಕಷ್ಟಸಾಧ್ಯ ಪ್ರಾಕೃತದಲ್ಲಿ ಋತುಚರ್ಯೆಯು ಜ್ವರಕ್ಕೂ ಹಿತವಾಗಿರುವುದರಿಂದ ಕಫ ಮತ್ತು ಪಿತ್ತಜ್ವರಗಳು ಸುಲಭಸಾಧ್ಯ. ವರ್ಷಋತುವಿನ ಚರ್ಯೆಯು ವಾತಜ್ವರಕ್ಕೆ ಅಪಥ್ಯವಾದುದರಿಂದ ಕಷ್ಟಸಾಧ್ಯ.

**ಆಮಜ್ವರ**—ಲಾಲಾಸ್ರಾವ, ಹೃಲ್ಲಾಸ, ಅರೋಚಕ, ತಂದ್ರಾ, ಆಲಸ್ಯ, ಮೈಭಾರ, ಹಸಿವಿಲ್ಲದಿರುವಿಕೆ, ಹೆಚ್ಚಾಗಿ ಮೂತ್ರವಿಸರ್ಜನೆಯಾಗುವಿಕೆ, ಜ್ವರದ ವೇಗವು ಒಂದೇ ರೀತಿಯಾಗಿ ಬಲವಾಗಿರುವಿಕೆ ಇವು ಆಮಜ್ವರದ ಲಕ್ಷಣಗಳು.

**ಪಚ್ಯಮಾನಜ್ವರ**—ಜ್ವರ ಮತ್ತು ಶ್ವಾಸವೇಗಗಳು ಹೆಚ್ಚಾಗಿರುವಿಕೆ, ಬಾಯಾರಿಕೆ, ಪ್ರಲಾಪ, ಮಲಪ್ರವೃತ್ತಿ ಮತ್ತು ಉತ್ಕ್ಲೇಶಗಳು, ದೋಷಗಳು ಪಾಕ ಹೊಂದುತ್ತಿರುವಿಕೆಯನ್ನು ತಿಳಿಸುತ್ತವೆ.

**ಪಕ್ವ ಅಥವಾ ನಿರಾಮಜ್ವರ**—ಹಸಿವುಂಟಾಗಿರುವಿಕೆ, ಮೈಕೃಶತ್ವ, ಅವಯುವಗಳು ಹಗುರವಾಗಿ ತೋರುವಿಕೆ, ಜ್ವರದ ವೇಗ ಕಡಿಮೆಯಾಗಿರುವಿಕೆ ಮತ್ತು ಸಕಾಲದಲ್ಲಿ ಮಲಮೂತ್ರಾದಿಗಳ ವಿಸರ್ಜನೆ ಇವು ನಿರಾಮದ ಲಕ್ಷಣಗಳು ಸಾಧಾರಣವಾಗಿ ಜ್ವರಾರಂಭವಾದ ಎಂಟನೆಯ ದಿನಕ್ಕೆ ಆಮದೋಷವು ಪಕ್ವ ವಾಗುವುದು.

**ವಿಷಮಜ್ವರ**—ದೋಷವು ಸಂಪೂರ್ಣವಾಗಿ ಪಾಕವಾಗದಿರುವಾಗ ಅಥವಾ ಜ್ವರವಿರುವಾಗಲೇ ಅಪಥ್ಯವಾದ ಆಹಾರ ಮತ್ತು ಚರ್ಯೆಗಳನ್ನು ಸೇವಿಸಿದರೆ ರಸಗತವಾದ ಆಮವು ರಸವೇ ಮೊದಲಾದ ಯಾವುದಾದರೊಂದು ಧಾತುವಿನಲ್ಲಿ ಸೇರಿಕೊಂಡು ನಿಯತಕಾಲದಲ್ಲಿ ಜ್ವರವನ್ನುಂಟುಮಾಡುತ್ತದೆ. ಈ ಜ್ವರಕ್ಕೆ ವಿಷಮಜ್ವರವೆಂದು ಹೆಸರು. ಇದು ಸಂತತ, ಸತತಕ, ಅನ್ಯೇ ದ್ಯುಷ್ಕ, ತೃತೀಯಕ ಮತ್ತು ಚತುರ್ಥಕಗಳೆಂದು ಐದು ರೀತಿ ದೋಷವು ಧಾತುವಿನಲ್ಲಿ ಪಾಕವಾಗುತ್ತಿರುವಾಗ ಆ ಧಾತುವಿನಲ್ಲಿ ಜ್ವರವಿರುವುದು; ಹೊರಗೆ ತೋರುವುದಿಲ್ಲ. ಪಾಕದ ಪರಿಣಾಮವಾಗಿ ಮಲವು ಕೋಷ್ಠ ಮಾರ್ಗಕ್ಕೆ ಬರುವಾಗ ಮಾತ್ರ ಜ್ವರವುಂಟಾಗುವುದು. ದೋಷ ಶೇಷವಿರುವ ವರೆಗೆ ವೇಳೆ ವೇಳೆಗೆ ಸರಿಯಾಗಿ ಜ್ವರ ಬರುವುದು. ಸಂತತವು ರಸವನ್ನು ಆಶ್ರ ಯಿಸಿರುವುದರಿಂದ ಜ್ವರವು ಸದಾ ಕಾಯುತ್ತಿರುವುದು. ಸತತವು ರಕ್ತಸ್ಥವಾದುದ ರಿಂದ ದಿನದಲ್ಲಿ ಎರಡಾವರ್ತಿ ಜ್ವರ ಬರುವುದು ಅನ್ಯೇದ್ಯುಷ್ಕವು ಮಾಂಸದಲ್ಲಿ ರುವುದರಿಂದ ದಿನಕ್ಕೊಂದಾವರ್ತಿಯೂ, ತೃತೀಯಕವು ಅಸ್ಥಿಗತವಾದುದರಿಂದ ದಿನ ಬಿಟ್ಟು ದಿನವೂ, ಚತುರ್ಥಕವು ಮಜ್ಜಗತವಾದುದರಿಂದ ಎರಡು ದಿನ ಬಿಟ್ಟು ಮೂರನೇ (ಜ್ವರ ಬಂದ ದಿನವನ್ನೂ ಸೇರಿಸಿ ನಾಲ್ಕನೇ) ದಿನವೂ ಬರುವುದು.

ಸನ್ನಿಪಾತದಲ್ಲಿ ಆಮದೋಷಗಳೆಲ್ಲಾ ಏಕಕಾಲದಲ್ಲಿ ಸೇರಿ ವಿಶೇಷ ವಾಗಿ ಶ್ರೋತ್ರಾದಿ ಇಂದ್ರಿಯಗಳನ್ನು ಬಾಧಿಸುವುದರಿಂದ ಮನಸ್ಸು, ಇಂದ್ರಿಯ ಮತ್ತು ಇಂದ್ರಿಯಾರ್ಥಗಳ ಸಂಯೋಗಗಳು ಹೆಚ್ಚು ಕಡಿಮೆಯಾಗು ವುವು. ಜ್ವರದ ವೇಗದಿಂದ ವಿವಿಧ ಲಕ್ಷಣಗಳು ಕಂಡುಬರುವುವು. ಒಂದು ಬಾರಿ ಮೈಯುರಿ ಮತ್ತೊಂದು ಬಾರಿ ಶೈತ್ಯ, ಅಸ್ಥಿಸಂಧಿಗಳಲ್ಲಿ ನೋವು, ಕಣ್ಣುಗಳಲ್ಲಿ ಕೊಳೆ ಮತ್ತು ಸ್ರಾವ, ರೆಪ್ಪೆಗಳ ಮೇಲೆ ಸ್ವಾಧೀನ ತಪ್ಪಿರುವುದು, ಕಿವಿಗಳಲ್ಲಿ ಶಬ್ದ ತೋರುವುದು, ಗಂಟಲಲ್ಲಿ ಮುಳ್ಳು ಚುಚ್ಚಿದಂತಾಗುವುದು, ತೂಕಡಿಕೆ, ಅಜ್ಞಾನ, ಪ್ರಲಾಪ, ಕಾಸ, ಶ್ವಾಸ, ತಲೆಸುತ್ತು, ನಾಲಿಗೆ ಬೆಂದಂತೆಯೂ ಒರಟಾ ಗಿಯೂ ಇರುವುದು ಮುಂತಾದ ಲಕ್ಷಣಗಳೆಲ್ಲವೂ ಮೂರು ದೋಷಗಳ ಪ್ರಕೋಪದಿಂದಲೂ ಆಗಿವೆಯೆಂದರಿಯಬೇಕು. ದೋಷ ಸಾಮ್ಯವಾಗದೆ ಧಾತುಪಾಕವಾದರೆ ರೋಗಿಯು ಸಾಯುತ್ತಾನೆ.

ಮೈಯುರಿ, ಬೆವರು ಬರುವುದು, ಭ್ರಮ, ತೃಷ್ಣಾ, ಕಂಪ ಮುಂತಾದುವು ಜ್ವರ ಬಿಡುವ ಮುನ್ಸೂಚನೆಗಳು. ಮೈ ಚೆನ್ನಾಗಿ ಬೆವರುವುದು, ಮೈ ಹಗುರ ವಾಗುವುದು, ತಲೆಯಲ್ಲಿ ನವೆ, ಮುಖಪಾಕ, ಸೀನುವುದು ಮತ್ತು ಆಹಾರದಲ್ಲಿ ಅಪೇಕ್ಷೆ ಇವು ಜ್ವರಮುಕ್ತನ ಲಕ್ಷಣಗಳು.

## ಜ್ವರಚಿಕಿತ್ಸಾ

ಆಮಜ್ವರಗಳಲ್ಲೆಲ್ಲಾ ರೋಗಿಯು ತನ್ನ ಶಕ್ತಿಗೆ ಕುಂದಕ ಬರದಂತೆ ಲಂಘನ ಮಾಡಬೇಕು. ಜ್ವರದ ಪೂರ್ವರೂಪದಲ್ಲೂ, ಜ್ವರದ ಪ್ರಾರಂಭದಲ್ಲೂ ಅವನು ತನ್ನ ಬಲವನ್ನು ಪ್ರಯತ್ನಪೂರ್ವಕವಾಗಿ ಕಾಪಾಡಿಕೊಳ್ಳಬೇಕು. ಲಂಘನದಿಂದ ಆಮದೋಷವು ಕಡಿಮೆಯಾಗುವುದು. ಅಗ್ನಿದೀಪ್ತಿಯಾಗಿ ಮೈ ಹಗುರ, ಆರೋಗ್ಯ, ಹಸಿವು, ಬಾಯಾರಿಕೆ, ಆಹಾರದಲ್ಲಿ ರುಚಿ ಮತ್ತು ಜೀರ್ಣಶಕ್ತಿಗಳು ತೋರುತ್ತವೆ. ಬಲ ಮತ್ತು ಓಜಸ್ಸುಗಳುಂಟಾಗುತ್ತವೆ.

**ನವಜ್ವರೇ ದಿವಾಸ್ವಪ್ನಸ್ನಾನಾಭ್ಯಂಗಾನ್ನಮೈಥುನಮ್ ।**
**ಕ್ರೋಧಪ್ರವಾತವ್ಯಾಯಾಮಕಾಷಾಯಾಂಶ್ಚ ವಿವರ್ಜಯೇತ್ ॥**

ಚ.ಚಿ.ಅ. ೩

ನವಜ್ವರದಲ್ಲಿ ಹಗಲು ನಿದ್ದೆ, ಸ್ನಾನ, ಅಭ್ಯಂಗ, ಗುರುಭೋಜನ, ಮೈಥುನ, ಕ್ರೋಧ, ಬಲವಾಗಿ ಬೀಸುವ ಗಾಳಿ, ವ್ಯಾಯಾಮ ಮತ್ತು ಕಷಾಯ ರಸ (ಒಗರು) ದ್ರವ್ಯ ಇವುಗಳನ್ನು ಬಿಟ್ಟುಬಿಡಬೇಕು. ಇವುಗಳಲ್ಲಿ ಪ್ರತಿಯೊಂದೂ ದೋಷಪ್ರಕೋಪನವಮಾಡುವುದು. ಗುರುಭೋಜನದಿಂದ ಆಮ ದೋಷವು ಹೆಚ್ಚುವುದಲ್ಲದೆ ವಿಷ್ಟಂಭವೂ ಉಂಟಾಗುವುದು.

**ಲಂಘನಂ ಸ್ವೇದನಂ ಕಾಲೋ ಯವಾಗ್ವಸ್ತಿಕ್ತಕೋರಸಃ ।**
**ಪಾಚನಾನ್ಯವಿಪಕ್ವಾನಾಂ ದೋಷಾಣಾಂ ತರುಣಜ್ವರೇ ॥**

ತರುಣಜ್ವರದಲ್ಲಿ ಆಮಪಚನವಾಗುವಷ್ಟು ಲಂಘನ (ಸುಮಾರು ಎಂಟು ದಿನಗಳ ವರೆಗೂ ಗುರುಭೋಜನ ವರ್ಜ್ಯ)ಮಾಡಿಸುವುದು, ಮೈಬೆವರಿಸುವುದು, ತಿಕ್ತರಸದ್ರವ್ಯಗಳಿಂದ ಮಾಡಿರುವ ಯವಾಗೂ ಮುಂತಾದ ಅನ್ನಪ್ರಕ್ರಿಯೆಗಳನ್ನು ಸೇವಿಸುವುದು ಮತ್ತು ಪಾಕವಾಗದಿರುವ ದೋಷಗಳನ್ನು ಪಚನ ಮಾಡುವ ಔಷಧಗಳನ್ನು ಕೊಡುವುದು ಹಿತಕರ.

ಕ್ಷಯದ ಜ್ವರ, ಆಮವಿಲ್ಲದಿರುವ ವಾತಜ್ವರ, ಕ್ಷತಜ್ವರ, ಪುರಾಣಜ್ವರ, ಭಯ, ಕ್ರೋಧ, ಕಾಮ, ಶೋಕ ಮತ್ತು ಶ್ರಮಗಳಿಂದ ಹುಟ್ಟಿದ ಜ್ವರಗಳಲ್ಲಿ ಲಂಘನವನ್ನು ಮಾಡಿಸಬಾರದು. ಇವನ್ನು ಶಮನೋಪಾಯಗಳಿಂದ ಚಿಕಿತ್ಸಿಸಬೇಕು.

ಸರಿಯಾಗಿ ಲಂಘನ[೧] ಮಾಡಿದ ಜ್ವರಿತನಿಗೆ ಮಲ, ಮೂತ್ರ ಮತ್ತು ವಾತಗಳ ವಿಸರ್ಜನೆಯಾಗುವುದು; ಹಸಿವು ಮತ್ತು ಬಾಯಾರಿಕೆಗಳನ್ನು ಸಹಿಸಲಿಕ್ಕಾಗದು ಮೈ ಹಗುರವಾಗಿಯೂ, ಮನಸ್ಸು ಮತ್ತು ಇಂದ್ರಿಯಗಳಲ್ಲಿ ಲವಲವಿಕೆಯೂ, ಶರೀರವು ಕೃಶವಾಗಿಯೂ ಆಗುವುದು.

ಅತಿ ಲಂಘನದಿಂದ[೨] ಬಲ ಕಡಿಮೆಯಾಗುವುದು, ಬಾಯಾರಿಕೆ, ಮುಖ

---

೧. ಸೃಷ್ಟಮಾರುತವಿಣ್ಮೂತ್ರಂ ಕ್ಷುತ್ಪಿಪಾಸಾಸಹಂ ಲಘುಮ್ ।
ಪ್ರಸನ್ನಾತ್ಮೇಂದ್ರಿಯಂ ಕ್ಷಾಮಂ ನರಂ ವಿದ್ಯಾತ್ ಸುಲಂಘಿತಮ್ ॥

೨. ಬಲಕ್ಷಯತೃಷಾಶೋಷಸ್ತಂದ್ರಾನಿದ್ರಾ ಭ್ರಮಕ್ಲಮಾಃ ।
ಉಪದ್ರವಾಶ್ಚ ಶ್ವಾಸಾದ್ಯಾಃ ಸಂಭವನ್ತ್ಯತಿಲಂಘನಾತ್ ॥ ಸು. ಉ. ಅ. ೩೯

ಬಾಡುವುದು, ತಂದ್ರಾ, ನಿದ್ರಾ, ಭ್ರಮ, ಕ್ಲಮ ಮತ್ತು ಶ್ವಾಸವೇ ಮುಂತಾದ ಉಪದ್ರವಗಳು ಸಂಭವಿಸುವುವು.

ವಾತಕಫಜ್ವರದಲ್ಲಿ ಬಾಯಾರಿಕೆಗೆ ಬಿಸಿನೀರನ್ನೂ, ಮದಾತ್ಯಯ ಮತ್ತು ಪಿತ್ತಜ್ವರಗಳಲ್ಲಿ ತಿಕ್ತಕ್ವಾಥವನ್ನೂ ಕುಡಿಸಬೇಕು. ಇವೆರಡೂ ದೀಪನ, ಪಾಚನ, ಜ್ವರಘ್ನವಾದುವು ; ಸ್ರೋತಶ್ಶೋಧನ ಮತ್ತು ಸ್ವೇದನ ಮಾಡಿಸುವುವು ; ಬಲ ರುಚಿಗಳನ್ನು ಕೊಡುವುವು. ಷಡಂಗಪಾನೀಯವು ಶ್ರೇಷ್ಠ. ಪಿತ್ತ ದೋಷದಲ್ಲಿ ಶುಂಠಿಯ ವಿನಾ ಉಳಿದ ದ್ರವ್ಯಗಳ ಅರ್ಧಶಿಷ್ಟ ಕಷಾಯವನ್ನು ಆರಿಸಿ ಕುಡಿಸಬೇಕು.

ವಮನಾರ್ಹರಿಗೆ ಆಮಾಶಯದಲ್ಲಿ ಕಫಪ್ರಧಾನವಾಗಿ ಉತ್ಕ್ಲಿಷ್ಟವಾದಂಥ ದೋಷಗಳನ್ನು ಮಾತ್ರ ವಮನಮಾಡಿಸಿ ಹೊರಗೆ ಹಾಕಬೇಕು. ಲಂಘನ ಪಾಚನಗಳಿಂದ ಆಮಾವಸ್ಥೆಯು ಹೋಗಿ ದೋಷವು ಆಮಾಶಯದಲ್ಲಿ ಏಕದೇಶವಾಗುವುದು. ಆಗ ತಾನಾಗಿಯೇ ಉತ್ಕ್ಲಿಷ್ಟವಾಗುತ್ತಿರುವ ಈ ದೋಷವನ್ನು ವಮನ ಮೂಲಕ ಹೋಗಲಾಡಿಸಬೇಕು. ಹಾಗಿಲ್ಲದೆ ಅಪಕ್ವ ದೋಷವು ಶರೀರಾದ್ಯಂತ ಹರಡಿ ಸಣ್ಣ ಸ್ರೋತಸ್ಸುಗಳಲ್ಲಿಯೂ ಸೇರಿಕೊಂಡಿರುವಾಗ ವಮನ ಮಾಡಿಸಿದರೆ ಹೃದ್ರೋಗ, ಶ್ವಾಸ, ಆನಾಹ, ಸಂಮೋಹ ಮತ್ತು ವಿಷಮಜ್ವರಗಳುಂಟಾಗುತ್ತವೆ. ವಮನಕ್ಕೆ ಮದನಕಲ್ಪವನ್ನಾಗಲೀ, ಇತರ ಕಲ್ಪವನ್ನಾಗಲೀ ಬಲಕಾಲಗಳಿಗನುಗುಣವಾಗಿ ಉಪಯೋಗಿಸಬೇಕು. ವಮನವನ್ನು ಮಾಡಿಸಲಿ ಮಾಡಿಸದಿರಲಿ ಆಮಪಾಚನ ಮತ್ತು ಶಮನಗಳಿಗಾಗಿ ಲಂಘನವನ್ನು ಮಾಡಿಸಲೇಬೇಕು. ಆಮಜ್ವರದಲ್ಲಿ ಜ್ವರಘ್ನ ಔಷಧಗಳನ್ನಾಗಲೀ, ಹಾಲನ್ನಾಗಲೀ ಕೊಡಬಾರದು. ವಾತಶ್ಲೇಷ್ಮದೋಷದಲ್ಲಿ ಉದರ್ದ, ಪೀನಸ, ಶ್ವಾಸ, ಜಂಘ ಮತ್ತು ಅಸ್ಥಿಸಂಧಿಗಳಲ್ಲಿ ಶೂಲವಿರುವಾಗ ಸ್ವೇದನವು ಹಿತವಾದುದು. ಸ್ವೇದ, ಮೂತ್ರ, ಮಲ ಮತ್ತು ವಾತಗಳು ಸರಿಯಾಗಿ ಹೊರಬರುವುವು. ಅಗ್ನಿಪಾಟವವುಂಟಾಗುವುದು.

ವಮನ ಮತ್ತು ಲಂಘನಗಳನ್ನು ಮಾಡಿಸಿ, ಆಹಾರ ಕೊಡಲು ತಕ್ಕ ಸ್ಥಿತಿಯಲ್ಲಿರುವಾಗ ಆಯಾ ದೋಷಹರ ಔಷಧಸಿದ್ಧವಾದ ಮಂಡವೇ ಮೊದಲಾದ ಪೇಯಾದಿಗಳನ್ನು ಕುಡಿಸಬೇಕು. ಹೀಗೆ ಜ್ವರದ ತೀಕ್ಷ್ಣತೆಯು ಕಡಿಮೆ

ಯಾಗಿ (ಸುಮಾರು ಆರು ದಿನಗಳು) ಅಗ್ನಿದೀಪ್ತಿಯುಂಟಾಗುವವರೆಗೂ ಮಾಡಬೇಕು. ಇವು ಲಘು, ಅನುಲೋಮನ, ಸ್ವೇದಲ, ತೃಟ್ಶಾಮಕ ಮತ್ತು ಬಲ್ಯಗಳಾಗಿವೆ. ಮದಾತ್ಯಯ, ಊರ್ಧ್ವಗರಕ್ತಪಿತ್ತ, ಕಫಪಿತ್ತಜ್ವರ ಮತ್ತು ಮದ್ಯವಿಕಾರದಿಂದುಂಟಾಗಿರುವ ಜ್ವರಗಳಲ್ಲಿ ಯವಾಗೂವನ್ನು ಕೊಡಬಾರದು. ಇಂತಹವರಿಗೆ ಅರಳು ಹಿಟ್ಟಿನಿಂದ ಮಾಡಿದ ತರ್ಪಣವನ್ನು ಜ್ವರಹರಫಲರಸ (ದ್ರಾಕ್ಷೆ, ದಾಳಿಂಬೆ, ಖರ್ಜೂರ, ಪ್ರಿಯಾಲ), ಜೇನುತುಪ್ಪ ಮತ್ತು ಸಕ್ಕರೆಗಳೊಂದಿಗೆ ಸೇರಿಸಿ ಕೊಡಬೇಕು. ಅಥವಾ ಲಾಜಪೇಯಕ್ಕೆ ಸೈಂಧವ ಲವಣ, ಶುಂಠಿ, ಹಿಪ್ಪಲಿ, ಧನಿಯ, ಅವಶ್ಯ ಬಿದ್ದರೆ ದಾಡಿಮಾಮ್ಲಗಳನ್ನೂ ಹಾಕಿ ಕೊಡಬಹುದು. ಮಲವು ಮತ್ತು ಪಿತ್ತವು ಬಹುವಾಗಿ ಹೋಗುತ್ತಿದ್ದರೆ ಶುಂಠಿಯ ಹಿಮಕಷಾಯಕ್ಕೆ ಜೇನುತುಪ್ಪವನ್ನು ಸೇರಿಸಿದ ಪೇಯವನ್ನೂ, ಬಸ್ತಿ ಪಾರ್ಶ್ವ ಮತ್ತು ಶಿರಃಶೂಲೆಗಳಿದ್ದರೆ ಹೆಗ್ಗುಳ್ಳ, ನೆಗ್ಗಿಲುಗಳು ಸೇರಿರುವ ಪೇಯವನ್ನೂ, ಜ್ವರಾತಿಸಾರವಿದ್ದರೆ ಒಂದೆಲೆಹೊನ್ನೆ, ಬಲಾ, ಬಿಲ್ವದ ತಿರಳು, ಶುಂಠಿ, ಸೈದಿಲೆಗೆಡ್ಡೆ ಮತ್ತು ಧನಿಯಗಳಿಂದ ಮಾಡಿದ ಪೇಯವನ್ನೂ ಕೊಡಬೇಕು. ಹಿಕ್ಕಾ, ಶ್ವಾಸ, ಕಾಸಗಳಿದ್ದರೆ ಹ್ರಸ್ವಪಂಚಮೂಲದ ಪೇಯ, ಮಲಬಂಧವಿದ್ದರೆ ಹಿಪ್ಪಲಿ, ನೆಲ್ಲೀಚೆಟ್ಟುಗಳು ಸೇರಿರುವ ತುಪ್ಪದಿಂದ ಹುರಿದಿರುವ ಯವೆಗಂಜಿಯನ್ನು ಕೊಡಬೇಕು.

**ಶೂಲಾತಿಸಾರವಿಡ್ಭೇಧವಿಬಂಧಪರಿಕರ್ತಿತಾಃ |**
**ಜ್ವರಸ್ಯೋಪದ್ರವಾಃ ಕಾಸಹಿಕ್ಕಾರೋಚಕಜಾಗರಾಃ ||**

ಹೀಗೆ ಜ್ವರದ ವಿವಿಧ ಉಪದ್ರವಗಳಿಗೆ ದೋಷಪರಿಹಾರವಾದ ಪೇಯಗಳನ್ನು ಮಾಡಿ ಕುಡಿಸಬೇಕು. ರೋಗಿಯ ಅಭ್ಯಾಸ, ಅಗ್ನಿಬಲಗಳಿಗನುಸಾರವಾಗಿ ಅಳ್ಳಕವಾದ ಮುದ್ಗಯೂಷ (ಲಘು), ಜಾಂಗಲ ಮಾಂಸರಸ(ಗುರು) ಗಳನ್ನು ಕೊಡಬೇಕು. ಆಹಾರಕಾಲದಲ್ಲಿ ಊಟಕ್ಕೆ ಮುಂಚಿತವಾಗಿ ಅರೋಚಕವನ್ನು ಹೋಗಲಾಡಿಸುವುದಕ್ಕೂ ಬಾಯನ್ನು ಶುದ್ಧಿಮಾಡುವುದಕ್ಕೂ ದಂತಧಾವನವನ್ನು ಮಾಡಿಸಬೇಕು ದಂತಕಾಷ್ಠವು ಬಾಯಿರುಚಿಗೆ ವಿಪರೀತ ರಸವುಳ್ಳದ್ದಾಗಿರಬೇಕು. ಇದನ್ನು ಆಗಿಂದಾಗ್ಗೆ ಉಪಯೋಗಿಸುವುದರಿಂದ ನಿಜವಾದ ರುಚಿಯು ತೋರಿ ಆಹಾರದ ಮೇಲೆ ಅಪೇಕ್ಷೆಯುಂಟಾಗುವುದು.

**ಲಂಘನಾಂಬುಯವಾಗೂಭಿರ್ಯದಾ ದೋಷೋ ನ ಪಚ್ಯತೇ ।**
**ತದಾ ತಂ ಮುಖವೈರಸ್ಯ ತೃಷ್ಣಾರೋಚಕನಾಶನೈಃ ॥**
**ಕಷಾಯೈಃ ಪಾಚನೈರ್ಹೃದ್ಯೈಃ ಜ್ವರಘ್ನೈಸ್ಸಮುಪಾಚರೇತ್ ।**

ಸು.ಉ.ಅ. ೩೯.

ಲಂಘನ, ಬಿಸಿನೀರು, ಯವಾಗೂ ಇವುಗಳಿಂದ ದೋಷಪಾಕವಾಗ ದಿದ್ದರೆ ಅವನ ಮುಖವೈರಸ್ಯ, ಬಾಯಾರಿಕೆ, ಅರುಚಿಗಳನ್ನು ಹೋಗಲಾಡಿಸುವ ಪಾಚನ, ಹೃದ್ಯಗುಣಗಳನ್ನುಳ್ಳ ಜ್ವರಹರ ಕಷಾಯಗಳನ್ನು ಕುಡಿಸಬೇಕು.

ದೋಷಪಾಚನಕ್ಕೆ ಮುಂಚಿತವಾಗಿಯೇ ಕಷಾಯರಸವುಳ್ಳ (ಒಗರು ರುಚಿ) ದ್ರವ್ಯಗಳನ್ನು ಕೊಟ್ಟರೆ ಅಪಕ್ವ ದೋಷಗಳು ಸ್ರೋತೋಮಾರ್ಗಗ ಳೊಳಗೆ ನಿಂತು ವಿಷಮಜ್ವರವನ್ನುಂಟುಮಾಡುತ್ತವೆ. ಆದ್ದರಿಂದ ತರುಣ ಜ್ವರದಲ್ಲಿ ಕಷಾಯರಸ ನಿಷಿದ್ಧ. ಕಲ್ಪದಲ್ಲಿ ಹೇಳಿರುವ ಕಷಾಯ ಎಂದರೆ ಕ್ವಾಥ, ಫಾಂಟಗಳು ನಿಷಿದ್ಧಗಳಲ್ಲ ಎಂಬುದಾಗಿ ತಿಳಿಯಬೇಕು.

ಇವಿಷ್ಟರಿಂದಲೂ ಜ್ವರವು ನಿಲ್ಲದಿದ್ದರೆ ಶರೀರಬಲ ಮತ್ತು ಅಗ್ನಿಬಲ ವುಳ್ಳವನಿಗೆ ವಿರೇಚನೌಷಧಗಳನ್ನು ಉಪಯೋಗಿಸಬೇಕು. ಜ್ವರದಿಂದ ಕೃಶನಾದವನಿಗೆ ವಮನ ಮತ್ತು ವಿರೇಚನಗಳನ್ನು ಕೊಡಬಾರದು. ಅವನಿಗೆ ತಕ್ಕಷ್ಟು ಹಾಲನ್ನು ಕುಡಿಸಬೇಕು. ನಿರೂಹವಸ್ತಿಯಿಂದ ಅವನ ಮಲಾಶಯ ವನ್ನು ಶುದ್ಧಿಪಡಿಸಬೇಕು. ಇದರಿಂದ ಜ್ವರ ನಿಂತು ಅವನಿಗೆ ಸಂತೋಷ, ರುಚಿಗಳುಂಟಾಗಿ ಪಕ್ವದೋಷಗಳು ಜಾಗ್ರತೆಯಾಗಿ ಹೊರಬೀಳುವುವು.

**ನಿರೂಹೋಬಲಮಗ್ನಿಂ ಚ ವಿಜ್ವರತ್ವಂ ಮುದಂ ರುಚಿಮ್**
**ಪರಿಪಕ್ವೇಷು ದೋಷೇಷು ಪ್ರಯುಕ್ತಃ ಶೀಘ್ರಮಾವಹೇತ್ ।**

ಚ.ಚಿ.ಅ. ೩.

ಸ್ರಂಸನೌಷಧವು ಪಿತ್ತಾಶಯದಲ್ಲಿರುವ ಪಿತ್ತವನ್ನಾಗಲೀ ಕಫಪಿತ್ತವ ನ್ನಾಗಲೀ ಹೋಗಲಾಡಿಸುತ್ತದೆ ವಸ್ತಿಯು ಪಕ್ವಾಶಯದಲ್ಲಿರುವ ವಾತ, ಪಿತ್ತ ಮತ್ತು ಕಫ ಮೂರು ದೋಷಗಳನ್ನೂ ಕಳೆಯುತ್ತದೆ. ಆಮಾಶಯದಲ್ಲಿ ಉತ್ಕ್ಲಿಷ್ಟವಾದ ಕಫವನ್ನು ವಮನದಿಂದಲೂ, ಪಿತ್ತಾಶಯಗತವಾದ ಪಿತ್ತಕಫ

ಗಳನ್ನು ವಿರೇಚನದಿಂದಲೂ, ಮಲಾಶಯದಲ್ಲಿ ಸೇರಿದ ಮೂರು ದೋಷ ಗಳನ್ನು ವಸ್ತಿಯಿಂದಲೂ ಶೋಧನಮಾಡಬೇಕೆಂದು ತಾತ್ಪರ್ಯ.

ಕಫವು ಮಂದವಾಗಿದ್ದು ವಾತ ಮತ್ತು ಪಿತ್ತಗಳು ಅಧಿಕವಾಗಿರುವ ಮತ್ತು ಈ ದೋಷಗಳು ಆಮಸಾಂಕರ್ಯವಿಲ್ಲದೆ ಸರ್ವಥಾ ಪಕ್ವವಾಗಿರುವ ಜ್ವರದಲ್ಲಿ ಘೃತಪಾನವನ್ನು ಮಾಡಿಸಬೇಕು. ಹತ್ತು ದಿನಗಳವರೆಗೂ ಕಫವು ಮಂದವಾಗಿರುವುದರಿಂದ ಕೇವಲ ಪಾನಮಾತ್ರವೇ ಹೊರತು ಅನುವಾಸನವಿಲ್ಲ. ಹತ್ತು ದಿನಗಳಾಗಿದ್ದರೂ ಕಫವು ಪ್ರಧಾನವಾಗಿದ್ದರೆ ಘೃತಗಳನ್ನು ಕೊಡದೆ ಕಷಾಯಗಳಿಂದ ಉಪಚರಿಸಬೇಕು.

ಪುರಾಣಜ್ವರದಲ್ಲಿ (ಹನ್ನೆರಡನೆಯ ದಿನದಿಂದ ಮುಂದಕ್ಕೆ) ಕಫ ಮತ್ತು ಪಿತ್ತಗಳು ಕಡಿಮೆಯಾಗಿದ್ದು ಅಗ್ನಿಯು ಸರಿಯಾಗಿದ್ದರೆ ಹಾಗೂ ರೋಗಿಯು ರೂಕ್ಷನಾಗಿಯೂ, ಮಲಬದ್ಧತೆಯುಳ್ಳವನಾಗಿಯೂ ಇದ್ದರೆ ಅವನಿಗೆ ಅನು ವಾಸನವಸ್ತಿಯನ್ನು ಕೊಡಬೇಕು. ತಲೆಭಾರ, ತಲೆನೋವು ಮತ್ತು ಇಂದ್ರಿಯ ಜಡತ್ವಗಳಿದ್ದರೆ ಶಿರೋವಿರೇಚನವನ್ನು ಮಾಡಿಸಬೇಕು. ಈ ಜೀರ್ಣಜ್ವರದಲ್ಲಿ ಪರಿಷೇಕಸ್ನಾನ ಮತ್ತು ಅವಗಾಹಸ್ನಾನಗಳನ್ನು ಮಾಡಿಸಲು ಶೀತೋಷ್ಣ ಭೇದದಿಂದ ತಕ್ಕ ಅಭ್ಯಂಗ ಮತ್ತು ಪ್ರದೇಹಗಳನ್ನು ಉಪಯೋಗಿಸಬೇಕು. ಇದರಿಂದ ತ್ವಗ್ಗತವಾದ ಜ್ವರವು ಶಮನವಾಗುವುದು. ಬಲವರ್ಣಗಳುಂಟಾಗು ವುವು. ಧಾತಗಳನ್ನು ಬಿಟ್ಟು ತ್ವಚೆಯನ್ನು ಸೇರಿರುವ ಜ್ವರಗಳು ಮತ್ತು ಆಗಂತುಕವಾಗಿ ಬಂದಿರುವ ತ್ವಗಾಶ್ರಿತ ಜ್ವರಗಳು ಧೂಪ ಮತ್ತು ಅಂಜನ ಪ್ರಯೋಗಗಳಿಂದ ಶಮನವಾಗುವುವು

ಆಹಾರಕ್ಕೆ ಹಳೆಯ ಕೆಂಪುಶಾಲಿ ಷಷ್ಟಿಕಗಳ ಯವಾಗೂ, ಅನ್ನ, ಲಾಜ(ಅರಳು)ಗಳನ್ನು ಪಯೋಗಿಸಬೇಕು. ಇವುಗಳೊಂದಿಗೆ ಯೂಷಕ್ಕಾಗಿ (ಕಟ್ಟು ಸಾರು) ಹೆಸರು, ಸಾರಂಗಿಬೇಳೆ, ಕಡಲೆ, ಹುರುಳಿಗಳನ್ನು ರೋಗಿಯ ಅಭ್ಯಾಸಕ್ಕೆ ತಕ್ಕಂತೆ ಮಾಡಿಸಿ ಕೊಡಬೇಕು. ತರಕಾರಿಗಳಲ್ಲಿ ಹಾಗಲ, ಪಡವಲ, ಆಡುಸುಪುಟ್ಟ ಮುಂತಾದುವು ಒಳ್ಳೆಯವು. ಮಾಂಸರಸಕ್ಕಾಗಿ ಲಾವ ಪಕ್ಷಿ (ಕಾಳಗದ ಲಾವ ಅಥವಾ ಬುಲ್‌ಬುಲ್ ಪಕ್ಷಿ), ತಿತ್ತಿರಿ (ವೇದಪಕ್ಷಿ ಅಥವಾ ಮಾಘಪಕ್ಷಿ), ಜಿಂಕೆ, ಚಕೋರಪಕ್ಷಿಗಳನ್ನು ಉಪಯೋಗಿಸಬಹುದು. ಆದರೆ ಗುರು ಮತ್ತು ಉಷ್ಣವಿರುವ ಕೋಳಿ, ನವಿಲು ಮುಂತಾದುವುಗಳ

ಮಾಂಸಗಳು ಶ್ರೇಷ್ಠವಲ್ಲ. ಜ್ವರದಲ್ಲಿ ಲಂಘನ ಮಾಡಿಸಿದುದರಿಂದ ವಾತ ಹೆಚ್ಚಿರುತ್ತದೆ. ಆದುದರಿಂದ ಆಹಾರದ ಕಾಲವನ್ನು ಸರಿಯಾಗಿ ತಿಳಿದುಕೊಂಡು ಭೋಜನ ಮಾಡಿಸಬೇಕು. ಅನುಪಾನಕ್ಕೆ ಬಿಸಿನೀರನ್ನು ಕುಡಿಸಬೇಕು. ಮದ್ಯದ ಅಭ್ಯಾಸವಿರುವವನಿಗೆ ದೋಷಬಲಕ್ಕೆ ತಕ್ಕಂತೆ ಮದ್ಯವನ್ನು ಕೊಡಬೇಕು.

**ಗುರೂಷ್ಣಸ್ನಿಗ್ಧಮಧುರಾನ್ ಕಷಾಯಾಂಶ್ಚ ನವಜ್ವರೇ ।**
**ಆಹಾರಾನ್ ದೋಷಪಕ್ತ್ಯರ್ಥಂ ಪ್ರಾಯಶಃ ಪರಿವರ್ಜಯೇತ್ ॥**

ಚ ಚಿ.ಅ ३

ನವಜ್ವರದಲ್ಲಿ ದೋಷಪಾಚನಕ್ಕಾಗಿ ಗುರು, ಸ್ನಿಗ್ಧ, ಮಧುರ ಮತ್ತು ಒಗರು ಆಹಾರಗಳನ್ನು ವಿಶೇಷವಾಗಿ ತ್ಯಜಿಸಬೇಕು. ಮುಸ್ತಾ ಮತ್ತು ಪರ್ಪಟ; ಕಿರಾತತಿಕ್ತ, ಮುಸ್ತಾ, ಗುಡೂಚೀ ಮತ್ತು ಶುಂಠಿ ಇವುಗಳ ಕ್ವಾಥ ಅಥವಾ ಶೀತಕಷಾಯಗಳು ಆಮವನ್ನು ಪಚನಮಾಡುತ್ತವೆ; ಜ್ವರಘ್ನ ಮತ್ತು ದೀಪನವಾದುವು; ಬಾಯಾರಿಕೆ ಮತ್ತು ಅರುಚಿಗಳನ್ನು ಹೋಗಲಾಡಿಸುತ್ತವೆ.

ವಿಷಮಜ್ವರಗಳಲ್ಲಿ ಧಾತುಗತವಾದ ದೋಷಶಮನಕ್ಕಾಗಿ ಸಂತತಕ್ಕೆ[೧] ಪಟೋಲ, ಕಟುಕರೋಹಿಣಿ ಮತ್ತು ಮುಸ್ತಾಕ್ವಾಥವನ್ನೂ, ಸತತಕ್ಕೆ ಪಟೋಲ ಕಟುಕರೋಹಿಣಿ, ಮುಸ್ತಾ ಮತ್ತು ಅಮೃತಬಳ್ಳಿಗಳ ಕ್ವಾಥವನ್ನೂ, ತೃತೀಯಕಕ್ಕೆ ಇವುಗಳೊಂದಿಗೆ ಅತಿಮಧುರವನ್ನೂ ಸೇರಿಸಿ ಕ್ವಾಥ ಮಾಡಿ ಕುಡಿಸಬೇಕು. ತೃತೀಯಕಕ್ಕೆ ಕಿರಾತತಿಕ್ತ,[೨] ಅಮೃತಬಳ್ಳಿ, ಚಂದನ ಮತ್ತು ಶುಂಠಿಗಳ ಕ್ವಾಥವನ್ನೂ, ಚತುರ್ಥಕಕ್ಕೆ ಗುಡೂಚೀ,[೩] ಆಮಲಕೀ ಮತ್ತು ಮುಸ್ತಾಗಳ ಕ್ವಾಥ

---

೧. ಪಟೋಲಕಟುಕಾಮುಸ್ತಾ ಪ್ರಾಣದಾ ಮಧುಕೈಃ ಕೃತಾಃ ।
ತ್ರಿಚತುಷ್ಪಂಚಶಃ ಕ್ವಾಥಾಃ ವಿಷಮಜ್ವರನಾಶನಾಃ ॥

೨. ಕಿರಾತತಿಕ್ತಮಮೃತಾ ಚಂದನಂ ವಿಶ್ವಭೇಷಜಮ್ ।

೩. ಗುಡೂಚ್ಯಾಮಲಕಂ ಮುಸ್ತಂ...........। ಚ.ಚಿ.ಅ. ३

ವನ್ನೂ ಕುಡಿಸಬೇಕು. ಸನ್ನಿಪಾತಜ್ವರದಲ್ಲಿ ದೋಷಪಾಚನಕ್ಕಾಗಿ ಹೆಗ್ಗುಳ್ಳ,[೧] ದೇವದಾರು, ಅರಿಶಿನ ಮತ್ತು ಕೊನ್ನಾರಿಗೆಡ್ಡೆಗಳನ್ನು ಕಷಾಯ ಮಾಡಿ ಕುಡಿಸಬೇಕು. ಅಥವಾ ಬೃಹತ್ಯಾದಿಗಣದ[೨] ಕ್ವಾಥವನ್ನಾದರೂ ಕೊಡಬಹುದು. ಇದರಿಂದ ಸನ್ನಿಪಾತಜ್ವರ ಮತ್ತು ಅದರ ಉಪದ್ರವಗಳು ಶಮನವಾಗುವುವು.

ಈ ಲಂಘನಾದಿ ಕ್ರಮಗಳಿಂದ ರೂಕ್ಷವಾಗಿ ಇನ್ನೂ ಜ್ವರ ಬಿಡದಿದ್ದರೆ ಮತ್ತು ಕಫ ಮಂದವಾಗಿದ್ದರೆ ಆ ರೋಗಿಗೆ ಘೃತಪ್ರಯೋಗವನ್ನು ನಡೆಸಬೇಕು. ವಾತ ಅಥವಾ ಪಿತ್ತದೋಷದೊಡನೆ ಸ್ವಲ್ಪಮಾತ್ರ ಕಫವೂ ಸೇರಿದ್ದಲ್ಲಿ ಸಂಸ್ಕಾರ ಹೊಂದಿದ ಘೃತವು ಮುಖ್ಯ ದೋಷವನ್ನೂ, ಅನುಬಂಧ ಕಫವನ್ನೂ ಹೋಗಲಾಡಿಸುವುದು. ಜ್ವರಹರ ಕಷಾಯಗಳೊಂದಿಗೆ ಪಿಪ್ಪಲ್ಯಾದಿ ಅಥವಾ ವಾಸಾಘೃತವನ್ನು ಬೆರಸಿ ಕುಡಿಸಬೇಕು.

ವಾತಜ್ವರದಲ್ಲಿ ಕೋಷ್ಠಾಗ್ನಿಯು ಬಹಿರ್ಗತವಾಗಿರುವುದರಿಂದ ಏಕಾಏಕಿ ಅತಿಗುರುವಾದ ಅಥವಾ ಅತಿಸ್ನಿಗ್ಧವಾದ ಭೋಜನವನ್ನು ಕೊಡಬಾರದು. ಅನುಬಂಧ ದೋಷವಿಲ್ಲದಿದ್ದರೆ ಅಭ್ಯಂಗಾದಿಗಳನ್ನೂ, ವಾತಹರ ರಸಭೋಜನವನ್ನೂ ಮಾಡಿಸಬೇಕು. ವಾತಜ್ವರಹರ ಕ್ವಾಥವನ್ನು ಕುಡಿಸಬೇಕು. ಜೀರ್ಣಜ್ವರಹರ ಚಿಕಿತ್ಸೆಯನ್ನು ನಡೆಸಬೇಕು. ಕಫಾನುಬಂಧವು ಬಹಳವಾಗಿದ್ದರೆ ಅಥವಾ ಆಮವಾತವಿದ್ದರೆ ಲಂಘನ ಮಾಡಿಸಿ ಅಲ್ಪಾಶನಗಳನ್ನೂ, ಕಫಹರವಾಗುವವರೆಗೆ ಕಷಾಯಗಳನ್ನೂ ಅನಂತರ ಜೊತೆಗೆ ಸಿದ್ಧಘೃತಗಳನ್ನೂ ಸೇರಿಸಿ ಕೊಡಬೇಕು.

---

೧. ಸನ್ನಿಪಾತಜ್ವರೇ ವ್ಯಾಘ್ರೀ ದೇವದಾರುನಿಶಾಘನಮ್ ಅ.ಹೃ.ಚಿ. ೧

೨. ಬೃಹತ್ಯೌ ಪೌಷ್ಕರಂ ಭಾರ್ಙ್ಗೀ ಶಠೀಶೃಂಗೀ ದುರಾಲಭಾ ।
ವತ್ಸಕಸ್ಯ ಚ ಬೀಜಾನಿ ಪಟೋಲಂ ಕಟುರೋಹಿಣೀ ॥
ಬೃಹತ್ಯಾದಿಗಣಃ ಪ್ರೋಕ್ತಃ ಸನ್ನಿಪಾತಜ್ವರಾಪಹಃ ।
ಕಾಸಾದಿಷು ಚ ಸರ್ವೇಷು ದದ್ಯಾತ್ ಸೋಪದ್ರವೇಷು ಚ ॥ ಚ.ಚಿ.ಅ. ೩

**ಸಾಮಾಯೇ ಯೇ ಚ ಕಫಜಾಃ ಕಫಪಿತ್ತಜ್ವರಾಶ್ಚ ಯೇ ।**
**ಲಂಘನಂ ಲಂಘನೀಯೋಕ್ತಂ ತೇಷು ಕಾರ್ಯಂ ಪ್ರತಿಪ್ರತಿ ॥**
ಚ ಚಿ ಅ. ೩.

ಆಮದೋಷಯುಕ್ತವಾದ ಎಲ್ಲಾ ಜ್ವರಗಳಲ್ಲೂ, ನಿರಾಮಕಫಜ್ವರದಲ್ಲೂ ಮತ್ತು ಕಫಯುಕ್ತ ಪಿತ್ತಜ್ವರದಲ್ಲೂ ಲಂಘನ ಕ್ರಮದಲ್ಲಿ ಹೇಳಿರುವಂತೆ ಮಾಡಬೇಕು.

ಸಂಸರ್ಗಸನ್ನಿಪಾತ ಜ್ವರಗಳನ್ನು ಆಯಾ ದೋಷಗಳಿಗನುಸಾರವಾಗಿ ಮಿಶ್ರ ಚಿಕಿತ್ಸೆಯಿಂದ ಹೋಗಲಾಡಿಸಬೇಕು. ಸನ್ನಿಪಾತದಲ್ಲಿ ಹೆಚ್ಚಿರುವ ದೋಷವನ್ನು ತಗ್ಗಿಸುತ್ತಲೂ, ಕಡಿಮೆ ಇರುವ ದೋಷವನ್ನು ಹೆಚ್ಚಿಸುತ್ತಲೂ, ಆದರಲ್ಲೂ ಕಫಸ್ಥಾನದಲ್ಲಿರುವ ದೋಷವನ್ನು ಮೊದಲು ಹೋಗಲಾಡಿಸುತ್ತಲೂ ಉಪಕ್ರಮಿಸಬೇಕು.

ಸನ್ನಿಪಾತಜ್ವರದ ವೇಗದ ಪರಿಣಾಮವಾಗಿ ರೋಗಿಗೆ ಕರ್ಣಮೂಲದಲ್ಲಿ ಘೋರತರವಾದ ಶೋಥವು ಸಂಭವಿಸುವುದುಂಟು. ಇದು ಮಾರಕವಾದುದರಿಂದ ವೈದ್ಯನ ಬುದ್ಧಿವಂತಿಕೆಯಿಂದ ರೋಗಿಯು ಬದುಕಿದರೂ ಬದುಕಬಹುದು. ಇದನ್ನು ಬೇಗನೆ ರಕ್ತಮೋಕ್ಷಣ, ಕಫಪಿತ್ತಘ್ನಗಳಾದ ಘೃತಪಾನ, ಲೇಪನ, ನಾವನ ಮತ್ತು ಕವಲಗ್ರಹಗಳಿಂದ ಜಯಿಸಬೇಕು. ಶೀತ, ಉಷ್ಣ, ಸ್ನಿಗ್ಧ, ರೂಕ್ಷವೇ ಮುಂತಾದ ಯಾವ ಯುಕ್ತಿಯಿಂದಲೂ ಜ್ವರವು ನಿಲ್ಲದಿದ್ದರೆ ಆ ರೋಗಿಯ ಶಾಖೆಗಳಲ್ಲಿ (ಕೈ, ಕಾಲು) ಯೋಗ್ಯವಾಗಿರುವ ಸಿರೆಯಿಂದ ವಿಧಿಪೂರ್ವಕವಾಗಿ ರಕ್ತಮೋಕ್ಷಣ ಮಾಡಿಸುವುದರಿಂದ ಅದು ಶಮನವಾಗುವುದು. ವಿಸರ್ಪ, ಅಭಿಘಾತ ಮತ್ತು ವಿಸ್ಫೋಟಕ ಜ್ವರಗಳಲ್ಲಿ ಕಫಪ್ರಧಾನವಿಲ್ಲದಿದ್ದರೆ ಮೊದಲು ಘೃತಪಾನವನ್ನು ಮಾಡಿಸಬೇಕು. ಪಿತ್ತದೋಷವು ಊರ್ಧ್ವಗವಾಗಿರುವಾಗ ಘೃತವನ್ನು ಕುಡಿಸಬಾರದು. ಧಾತುಕ್ಷೀಣತೆಯಿಂದ ದೌರ್ಬಲ್ಯ ಹೆಚ್ಚಿ ಉಂಟಾಗಿರುವ ಜೀರ್ಣಜ್ವರದಲ್ಲಿ ಧಾತುಪೋಷಕಗಳಾದ ಬೃಂಹಣಾಹಾರಗಳನ್ನು ಉಪಯೋಗಿಸಬೇಕು.

**ಜೀರ್ಣಜ್ವರಾಣಾಂ ಸರ್ವೇಷಾಂ ಪಯಃ ಪ್ರಶಮನಂ ಪರಮ್ ।**
**ಪೇಯಂ ತದುಷ್ಣಂ ಶೀತಂ ವಾ ಯಥಾಸ್ವಂ ಭೇಷಜೈಃ ಶೃತಮ್ ॥**
ಚ.ಚಿ.ಅ. ೩.

ಜೀರ್ಣಜ್ವರಗಳಲ್ಲೆಲ್ಲಾ ಪೇಯುಗಳಿಗೆ ಹಾಲನ್ನು ಸೇರಿಸಿ ಬಿಸಿಯಾಗಿ (ವಾತಪ್ರಧಾನದಲ್ಲಿ) ಅಥವಾ ತಣ್ಣಗೆ (ಪಿತ್ತಪ್ರಧಾನದಲ್ಲಿ) ಇರುವಂತೆ ಕುಡಿಸ ಬೇಕು. ವಾತಪಿತ್ತಜ್ವರದಲ್ಲಿ ನಾಲ್ಕುಪಟ್ಟು ನೀರು ಹಾಕಿದ ಹಾಲನ್ನಾಗಲೀ, ಧಾರೋಷ್ಣವನ್ನಾಗಲೀ ಕುಡಿಸುವುದು ಹಿತಕರವಾದುದು.

ವಿಷಮಜ್ವರಗಳಲ್ಲಿ ಪ್ರಾಯಶಃ ಆಗಂತು ದೋಷವಿರುವುದರಿಂದ ತೃತೀಯಕ ಮತ್ತು ಚತುರ್ಥಕ ಜ್ವರಗಳಲ್ಲಿ ಸಾಧಾರಣ ಲಂಘನಾದಿ ಕರ್ಮಗಳನ್ನು ಬಿಟ್ಟು ವಿಶೇಷ ಚಿಕಿತ್ಸೆಯನ್ನು ನಡೆಸಬೇಕು.

ವಾತಪ್ರಧಾನಂ ಸರ್ಪಿರ್ಭಿರ್ಬಸ್ತಿಭಿಃ ಸಾನುವಾಸನೈಃ ।
ಸ್ನಿಗ್ಧೋಷ್ಣೈರನ್ನಪಾನೈಶ್ಚ ಶಮಯೇದ್ವಿಷಮಜ್ವರಮ್ ॥
ವಿರೇಚನೇನ ಪಯಸಾ ಸರ್ಪಿಷಾ ಸಂಸ್ಕೃತೇನ ಚ ।
ವಿಷಮಂ ತಿಕ್ತಶೀತೈಶ್ಚ ಜ್ವರಂ ಪಿತ್ತೋತ್ತರಂ ಜಯೇತ್ ॥
ವಮನಂ ಪಾಚನಂ ರೂಕ್ಷಮನ್ನಪಾನಂ ವಿಲಂಘನಮ್ ।
ಕಷಾಯೋಷ್ಣಂ ಚ ವಿಷಮೇ ಜ್ವರೇ ಶಸ್ತಂ ಕಫೋತ್ತರೇ ॥
ಚ.ಚಿ.ಅ. ೩.

ವಾತಪ್ರಾಧಾನ್ಯದಲ್ಲಿ ಘೃತಪಾನ, ಅನುವಾಸನವಸ್ತಿ, ಸ್ನಿಗ್ಧೋಷ್ಣ ಅನ್ನಪಾನಗಳು ಹಿತವಾದುವು. ಪಿತ್ತಪ್ರಧಾನವಾಗಿದ್ದರೆ ಕ್ಷೀರಪಾಕ, ಶೋಧನ ಘೃತಗಳಿಂದ ವಿರೇಚನ ಮಾಡಿಸಿ ತಿಕ್ತ ಮತ್ತು ಶೀತಲ ದ್ರವ್ಯಗಳಿಂದ ಗುಣ ಪಡಿಸಬೇಕು. ಕಫೋತ್ತರ ವಿಷಮಜ್ವರದಲ್ಲಿ ವಮನ, ಲಂಘನ, ಪಾಚನಗಳೂ, ಕಷಾಯ ಮತ್ತು ಉಷ್ಣವಾದ ಔಷಧಾಹಾರಗಳೂ ಶ್ರೇಷ್ಠವಾದುವು.

ದೋಷದೂಷ್ಯ ಮುಂತಾದುವುಗಳನ್ನು ತಿಳಿದು ರೋಗಿಗೆ ತಕ್ಕಂತೆ ತಿಳಿಮದ್ಯ, ಕೋಳಿ ಮತ್ತು ತಿತ್ತಿರಿಮಾಂಸಗಳನ್ನೂ ಷಟ್ಪಲಘೃತ, ತ್ರಿಫಲಾ ಕ್ವಾಥ ಮುಂತಾದುವನ್ನೂ ಕೊಡಬೇಕು. ಜ್ವರ ಬರುವ ದಿನ ರೋಗಿಗೆ ಸ್ವಲ್ಪ ಮಟ್ಟಿಗೆ ಸ್ನೇಹ ಮತ್ತು ಸ್ವೇದಗಳನ್ನು ಮಾಡಿಸಿ ಉತ್ತಮ ಪ್ರಮಾಣದಲ್ಲಿ (ಸುಮಾರು ಆರು ಪಲ) ಘೃತಪಾನ ಮಾಡಿಸಿ ಪುನಃ ಅದನ್ನು ವಾಂತಿ ಮಾಡಿಸಬೇಕು. ಅಥವಾ ಅನ್ನಪಾನ ಮಾಡಿಸಿ ಅದನ್ನೇ ವಾಂತಿ ಮಾಡಿಸ ಬಹುದು. ಮೊದಲೇ ರೋಗಿಗೆ ತೃಪ್ತಿಯಾಗುವಷ್ಟು ಅನ್ನಪಾನ, ಮದ್ಯ

ಮುಂತಾದುವುಗಳನ್ನು ಕೊಟ್ಟು ನಿರ್ದ್ದಿಮಾಡಿಸಿ ಜ್ವರ ಬರುತ್ತಲೇ ಆಸ್ಥಾಪನ ಅಥವಾ ಯಾಪನ ವಸ್ತಿಯನ್ನು ಕೊಡಬೇಕು. ಪಂಚಗವ್ಯ, ಲಶುನ ಮತ್ತು ತಿಲತೈಲಗಳ ಸೇವನೆ, ಹಿಂಗಿನ[೧] ನಸ್ಯ, ಸೈಂಧವಾದಿ ಅಂಜನ, ಗುಗ್ಗುಳು ಮುಂತಾದುವುಗಳ ಧೂಪಗಳು ಮತ್ತು ಮಾನಸಿಕ ವಿಕಾರದಲ್ಲಿ ಹೇಳುವ ಧೂಮ, ನಾವನಾಂಜನಾದಿಗಳು ವಿಷಮಜ್ವರವನ್ನು ಹೋಗಲಾಡಿಸುತ್ತವೆ.

ಮಾನಸಿಕ ದೋಷಗಳಿಂದ ಬಂದಿರುವ ಜ್ವರ ಮತ್ತು ಕರ್ಮಜ ಜ್ವರಗಳು ಈ ಹಿಂದೆ ಹೇಳಿದ ಕ್ರಮಗಳಿಂದ ಶಾಂತವಾಗುವುದಿಲ್ಲ. ಮಾನಸಿಕ ಜ್ವರವು ಕಾಮಕ್ರೋಧಾದಿಗಳಿಂದ ಕೂಡಿರುವುದು. ಮಾನಸಿಕ ದುಃಖ ಪರಿಹಾರಮಾಡಿ ಮನಶ್ಶಾಂತಿಯನ್ನು ದೊರಕಿಸಿದರೆ ಜ್ವರ ಬಿಡುವುದು.

**ಸದ್ವಾಕ್ಯೈಶ್ಚ ಶಮಂ ಯಾತಿ ಜ್ವರಃ ಕ್ರೋಧಸಮುತ್ಥಿತಃ ।**
**ಕಾಮಾತ್ ಕ್ರೋಧಜ್ವರೋನಾಶಂ ಕ್ರೋಧಾತ್ ಕಾಮಸಮುದ್ಭವಃ ॥**
**ಯಾತಿ ತಾಭ್ಯಾಮುಭಾಭ್ಯಾಂ ಚ ಭಯಶೋಕಸಮುತ್ಥಿತಃ ।**

ಚ ಚಿ. ಅ. ೩.

ಕರ್ಮಜ ಜ್ವರವು ಕರ್ಮ ಕ್ಷಯಿಸುವವರೆಗೂ ಪೀಡಿಸುವುದು. ಕರ್ಮವು ಜಾಗ್ರತೆ ಕ್ಷೀಣವಾಗುವಂತೆ ಅಥವಾ ಬಾಧೆಯನ್ನು ಕೊಡದಂತೆ ಅದಕ್ಕಿಂತಲೂ ಬಲಿಷ್ಠವಾದ ಉತ್ತಮ ಕರ್ಮವನ್ನಾಚರಿಸಬೇಕು. ಇವೇ ಗ್ರಹಶಾಂತಿ, ಮಾತಾಪಿತೃ ಗುರುಪೂಜೆ, ದಾನ, ತಪಸ್ಸು ಮುಂತಾದುವು. ಇವು ಆಯಾ ರೋಗಿಯ ಶ್ರದ್ಧೆ ಭಕ್ತಿಗಳನ್ನು ಅವಲಂಬಿಸಿರುತ್ತವೆ.

ಶಾಪ, ಅಭಿಚಾರ, ಭೂತಾಭಿಷಂಗಗಳು ದೈವವ್ಯಪಾಶ್ರಯಗಳು. ಇವುಗಳಿಗೆ ಮೇಲೆ ಹೇಳಿದ ಶಾಂತಿಪೂಜಾದಿಗಳನ್ನೂ ಔಷಧಗಳಿಂದ ಚಿಕಿತ್ಸೆಯನ್ನೂ ನಡೆಸಬೇಕು.

ಅಭಿಘಾತಜ್ವರವು ಘೃತಪಾನ, ಅಭ್ಯಂಗ, ರಕ್ತಮೋಕ್ಷಣ ಮತ್ತು ಮಾಂಸ ಭೋಜನಗಳಿಂದ ಶಮನ ಹೊಂದುವುದು. ಮದ್ಯದ ಅಭ್ಯಾಸವಿರುವವರಿಗೆ ಜ್ವರದಲ್ಲಿ ಮದ್ಯಮಾಂಸಗಳು ಹಿತವಾದುವು. ಕ್ಷತರ ಮತ್ತು ವ್ರಣಿತರ ಜ್ವರಗಳನ್ನು ಶಲ್ಯತಂತ್ರದಲ್ಲಿ ಹೇಳಿರುವಂತೆ ಕ್ಷತ ಮತ್ತು ವ್ರಣ ಚಿಕಿತ್ಸೆಗಳಿಂದ ಗುಣ

---

೧ ಹಿಂಗುತುಲ್ಯಾತುವ್ಯೈಯಾಘ್ರೀವಸಾ ನಸ್ಯಂ ಸಸೈಂಧವಾ । ಚ. ಚಿ. ಅ. ೩

ಪಡಿಸಬೇಕು. ವಿಷದಿಂದುಂಟಾದ ಜ್ವರಕ್ಕೆ ವಿಷಹರ ಚಿಕಿತ್ಸೆಯನ್ನು ಮಾಡಬೇಕು.

**ಅಪಥ್ಯಗಳು**—ಜ್ವರವಿರುವಾಗಲೂ, ಬಿಟ್ಟನಂತರವೂ ವಿದಾಹಿ, ಗುರು, ಅಸಾತ್ಮ್ಯ ಮತ್ತು ವಿರುದ್ಧ ಭೋಜನಗಳನ್ನೂ, ವ್ಯವಾಯ, ಶ್ರಮದ ಕೆಲಸ, ಅತ್ಯಶನಗಳನ್ನು ಬಿಡಬೇಕು.

**ವ್ಯಾಯಾಮಂ ಚ ವ್ಯವಾಯಂ ಚ ಸ್ನಾನಂ ಚಂಕ್ರಮಣಾನಿ ಚ ।**
**ಜ್ವರಮುಕ್ತೋ ನ ಸೇವೇತ ಯಾವನ್ನಬಲವಾನ್ ಭವೇತ್ ॥**

ಚ.ಚಿ ಅ. ೩.

ಜ್ವರವಿಮುಕ್ತನು ಹಿಂದಿನಂತೆ ಬಲವುಂಟಾಗುವವರೆಗೂ ವ್ಯಾಯಾಮ, ವ್ಯವಾಯ, ಸ್ನಾನ ಮತ್ತು ತಿರುಗಾಡುವಿಕೆಗಳನ್ನು ಬಿಡಬೇಕು. ಇವಕ್ಕೆ ವಿಪರೀತವಾಗಿ ನಡೆದುಕೊಂಡರೆ ಪುನಃ ಜ್ವರವುಂಟಾಗುತ್ತದೆ. ಈ ಜ್ವರವು ಅನೇಕ ಉಪದ್ರವಗಳೊಡನೆ ಕೂಡಿರುವುದರಿಂದ ಅಪಾಯಕರ.

**ದೀನತಾಂ ಶ್ವಯಥುಂ ಗ್ಲಾನಿಂ ಪಾಂಡುತಾಂ ನಾನ್ನಕಾಮತಾಮ್ ।**
**ಕಂಡೂಕೋಠಪಿಡಕಾಃ ಕುರ್ವಂತ್ಯಗ್ನಿಂ ಚ ತೇ ಮೃದುಮ್ ॥**
**ಏವಮನ್ಯೇಽಪಿ ಚ ಗದಾವ್ಯಾವರ್ತಂತೇ ಪುನರ್ಗತಾಃ ।**

ಚ.ಚಿ.ಅ. ೩.

ಈ ಪುನರಾವರ್ತಕದಲ್ಲಿ ಮೃದುವಮನ, ವಿರೇಚನ ಮತ್ತು ಯಾಪನ ವಸ್ತಿಗಳು ಹಿತವಾದುವು. ಲಘು ಆಹಾರ, ಯೂಷ ಮತ್ತು ಜಾಂಗಲ ಮಾಂಸ ರಸಗಳನ್ನು ಕೊಡಬೇಕು. ಅಭ್ಯಂಗ, ಉದ್ವರ್ತನ, ಸ್ನಾನ, ಧೂಪ, ಅಂಜನ ಮತ್ತು ತಿಕ್ತಘೃತಗಳು ಒಳ್ಳೆಯವು. ಗುರು, ಅಭಿಷ್ಯಂದಿ, ಅಸಾತ್ಮ್ಯ ಭೋಜನಗಳಿಂದ ಬಂದ ಜ್ವರಗಳಲ್ಲಿ ಲಂಘನ ಮತ್ತು ಉಷ್ಣ ಉಪಚಾರಗಳನ್ನು ನಡೆಸಬೇಕು. ಕಿರಾತಾದಿಕ್ವಾಥವನ್ನು ಕುಡಿಸಬೇಕು.

**ಕಿರಾತತಿಕ್ತಕಂ ತಿಕ್ತಾಮುಸ್ತಪರ್ಪಟಕೋಽಮೃತಾ ।**
**ಘ್ನಂತಿ ಪೀತಾನಿಚಾಭ್ಯಾಸಾತ್ಪುನರಾವರ್ತಕಂ ಜ್ವರಮ್ ॥**

ಚ.ಚಿ.ಅ. ೩.

ಚಿರಾಯಿತ, ಕಟುಕರೋಹಿಣಿ, ಕೊನ್ನಾರಿಗೆಡ್ಡೆ, ಪರ್ಪಾಟಕ ಮತ್ತು ಅಮೃತಬಳ್ಳಿಗಳನ್ನು ಸೇರಿಸಿ ಮಾಡಿದ ಕ್ವಾಥವು ಪುನರಾವರ್ತಕ ಜ್ವರವನ್ನು ಹೋಗಲಾಡಿಸುತ್ತದೆ.

## ಸಂಗ್ರಹ

ನವಜ್ವರೇ ದಿವಾಸ್ವಪ್ನಾದಿ ವರ್ಜ್ಯನಂ; ದೋಷಪಾಚನಾರ್ಥಂ ಲಂಘನಂ, ಉಷ್ಣ ಜಲಪಾನಂ, ದೋಷೋತ್ಕ್ಲೇಶೇ ವಮನಂ, ಷಡಂಗಪಾನೀಯಂ ಅಷ್ಟಾಹಾನಂತರಂ ಯವಾಗ್ವಃ ತಿಕ್ತಕೋ ರಸಃ। ಕ್ಷಯಾನಿಲ, ಭಯ, ಕ್ರೋಧಾದಿಷು ತರ್ಪಣಾದಯಃ। ಜೀರ್ಣಜ್ವರೇ ಸರ್ಪಿಃ। ವಿಷಮೇಷು ದೋಷಪಾಚನಾನಿ। ಸನ್ನಿಪಾತೇ ದೋಷಾವಸ್ಥಕೇ ಕ್ರಮಃ। ಅನ್ನಕಾಲೇಷು ಪ್ರಾಗ್ದಂತಧಾವನಂ। ಕಫೇ ಮಂದೇ ವಾತಪಿತ್ತೋತ್ತರೇ ಘೃತಪಾನಮ್। ನಿರಾಮೇ ವಾತಪಿತ್ತೋತ್ತರೇ ಜ್ವರೇ ತೃಷ್ಣಾದಾಹಾದಿಷು ಪಯಸಾ ದೋಷಂ ಜಯೇತ್। ಅಶಾಂತೌ ಅಕ್ಷೀಣ ಬಲಮಾಂಸಾಗ್ನೇಃ ವಿರೇಚನಮ್। ಕ್ಷೀಣಸ್ಯ ಕ್ಷೀರವಸ್ತಿಃ। ಕ್ಷೀಣಶ್ಲೇಷ್ಮೇ ದೃಢಾಗ್ನಯೇ ಬದ್ಧಮೂತ್ರಪುರೀಷಾಯ ಅನುವಾಸನಮ್। ಗೌರವೇ ಶಿರಸಃ ಶೂಲೇ ಶಿರೋವಿರೇಕಃ। ತ್ವಗ್ಗತೇ ಜೀರ್ಣಜ್ವರೇ ಶೀತೋಷ್ಣತಯಾ ಉಷ್ಣಶೀತೋಪಚಾರೌ, ಅಭ್ಯಂಗ, ಪ್ರದೇಹ, ಧೂಮ, ಅಂಜನಯೋಗಾಃ। ಅಶಾಂತೌ ರಕ್ತಮೋಕ್ಷಣಮ್॥

---

# ರಕ್ತಪಿತ್ತನಿದಾನ

ರಕ್ತಪಿತ್ತವು ಪಿತ್ತದ ವೈಗುಣ್ಯದಿಂದಾಗುವುದು. ಈ ದೋಷದಿಂದ ರಕ್ತವು ದೂಷಿಸಲ್ಪಟ್ಟು ಎಂದರೆ ರಕ್ತವು ದಗ್ಧಪಾಕವನ್ನು ಹೊಂದಿ ಊರ್ಧ್ವ ಮತ್ತು ಅಧೋಮಾರ್ಗಗಳನ್ನು ಸೇರುತ್ತದೆ. ಇದು ತನ್ನ ವರ್ಣ ಮತ್ತು ಆಕೃತಿಗಳಲ್ಲಿ ವಿಕೃತವಾಗಿರುವುದರಿಂದ ಮುಂದಿನ ಧಾತುವಾಗುವುದಕ್ಕೆ ಸರಿಯಾಗಿರುವುದಿಲ್ಲ.

ಸ್ರೋತೋಮಾರ್ಗಗಳಲ್ಲಿ ದುಷ್ಟರಕ್ತವು ಸೇರುವುದರಿಂದ ಸ್ರೋತಸ್ಸುಗಳು ದೂಷಿತವಾಗುತ್ತವೆ. ಇದರಿಂದ ಅವು ಭಿನ್ನವಾಗಿ, ರಕ್ತವನ್ನು ಸ್ರವಿಸುತ್ತವೆ. ಈ ರಕ್ತವು ಸಾಮಾನ್ಯ ರಕ್ತಕ್ಕಿಂತಲೂ ವಿಲಕ್ಷಣವಾಗಿರುವುದು. ರಕ್ತದಲ್ಲಿ ಪಿತ್ತಾಂಶವೇ ಹೆಚ್ಚಿರುವುದರಿಂದ ಈ ರಕ್ತದಿಂದ ತೋಯಿಸಲ್ಪಟ್ಟ ಬಿಳಿ ವಸ್ತ್ರವನ್ನು ಬಿಸಿಲಲ್ಲಿ ಒಣಗಿಸಿ ಬಿಸಿನೀರಿನಿಂದ ತೊಳೆದರೆ ಪಿತ್ತದ ಕಲೆ ಮಾತ್ರ ನಿಂತಿರುತ್ತದೆ. ರಕ್ತಪಿತ್ತದ ರಕ್ತವನ್ನು ಇತರ ಪ್ರಾಣಿಗಳು ಸೇವಿಸುವುದಿಲ್ಲ. ರಕ್ತವು ಜಾಗ್ರತೆಯಾಗಿ ಗಟ್ಟಿಯಾಗುವುದಿಲ್ಲ.

ಬಿಸಿಲು, ವ್ಯಾಯಾಮ, ಮಾರ್ಗಾಯಾಸ, ವ್ಯವಾಯ ಇವುಗಳನ್ನು ಹೆಚ್ಚಾಗಿ ಸೇವಿಸುವುದರಿಂದಲೂ, ತೀಕ್ಷ್ಣ, ಉಷ್ಣ, ಕ್ಷಾರ, ಲವಣ, ಆಮ್ಲ ಮತ್ತು ಕಟು ಪದಾರ್ಥಗಳನ್ನು ಅತಿಯಾಗಿ ಉಪಯೋಗಿಸುವುದರಿಂದಲೂ ಪಿತ್ತ ಪ್ರಕೋಪವಾಗಿ ರಕ್ತವನ್ನು ದೂಷಿಸುತ್ತದೆ.

ಅಂಗಗಳ ದೌರ್ಬಲ್ಯ, ಶೀತಲದ್ರವ್ಯಗಳಲ್ಲಿ ಇಚ್ಛೆ, ಗಂಟಲಲ್ಲಿ ಹೊಗೆಯಿಟ್ಟಂತಾಗುವುದು, ವಾಂತಿ, ನಿಃಶ್ವಾಸವು ಲೋಹದ ಕಿಲುಬಿನಂತೆ ವಾಸನೆಯಾಗಿರುವುದು ರಕ್ತಪಿತ್ತಕ್ಕೆ ಮೊದಲಲ್ಲಾಗುವ ಲಕ್ಷಣಗಳು.

ಊರ್ಧ್ವಗತ ರಕ್ತವು ಕಫದೋಷಯುಕ್ತವಾಗಿ ನಾಸ, ನೇತ್ರ, ಕರ್ಣ, ಬಾಯಿಗಳಿಂದ ಹೊರಚಿಮ್ಮುವುದು. ಅಧೋಗವು ವಾತದಿಂದ ಕೂಡಿರುವುದು. ಇದು ಮೇಢ್ರ, ಯೋನಿ ಮತ್ತು ಗುದಮಾರ್ಗಗಳ ಮೂಲಕ ಸ್ರಾವವಾಗುವುದು. ಅತಿಪ್ರಕೋಪದಿಂದ ಉಭಯಮಾರ್ಗಗಳಿಂದಲೂ ರೋಮಕೂಪಗಳಿಂದಲೂ ರಕ್ತವು ಸ್ರವಿಸುವುದು. ಕಫ ಸೇರಿದ್ದರೆ ಆ ಸ್ರಾವವು ಸ್ವಲ್ಪ ಪಾಂಡುತ್ವ, ಸ್ನಿಗ್ಧತ್ವಗಳಿಂದ ಕೂಡಿ ಪಿಚ್ಛಿಲವಾಗಿರುವುದು; ವಾತದೋಷದಿಂದಾದರೆ ಸ್ವಲ್ಪ ಶ್ಯಾವ, ಅರುಣವರ್ಣಗಳಾಗಿಯೂ ತೆಳ್ಳಗೂ ಮತ್ತು ರೂಕ್ಷವಾಗಿಯೂ ಇರುವುದು. ಪಿತ್ತವೇ ಅಧಿಕವಾಗಿದ್ದರೆ ಕಷಾಯ, ಕೃಷ್ಣ ಅಥವಾ ಗೋಮೂತ್ರ ಇತ್ಯಾದಿ ವರ್ಣಗಳಿಂದ ಕೂಡಿರುವುದು.

ದೌರ್ಬಲ್ಯ, ಶ್ವಾಸ, ಕಾಸ, ಜ್ವರ, ವಾಂತಿ, ಪಾಂಡು ಮುಂತಾದುವು ಈ ರೋಗದ ಉಪದ್ರವಗಳು.

## ರಕ್ತಪಿತ್ತಚಿಕಿತ್ಸಾ

ಬಲಿಷ್ಠನಾಗಿರುವವನಿಗೆ ಹೊಸದಾಗಿ ಬಂದಿರುವ ಒಂದೇ ದೋಷದಿಂದ ಕೂಡಿರುವ ಊರ್ಧ್ವಗ ರಕ್ತಪಿತ್ತವು ಸುಲಭಸಾಧ್ಯವಾದುದು. ರೋಗಿಗೆ ಉಪದ್ರವಗಳಿಲ್ಲದೆ ಅವನ ರಕ್ತಪಿತ್ತದ ವೇಗವು ಮಂದವಾಗಿಯೂ, ಕಾಲವು ಹೇಮಂತ ಶಿಶಿರಗಳೂ ಆಗಿದ್ದರೆ ಸುಲಭವಾಗಿ ಚಿಕಿತ್ಸಿಸಬಹುದು. ಇವಕ್ಕೆ ವಿಪರೀತವಿದ್ದರೆ ಯಾಪ್ಯ ಅಥವಾ ಅಸಾಧ್ಯ.

ಊರ್ಧ್ವಗ ರಕ್ತಪಿತ್ತದಲ್ಲಿ ಕಫಸಂಸರ್ಗವಾಗಿರುವುದರಿಂದ ಆ ರೋಗಿಗೆ ಪಿತ್ತಹರವಾಗುವುದಕ್ಕೆ ತಿಕ್ತಕಷಾಯಗಳನ್ನೂ, ಪಿತ್ತಾಶಯಗತವಾದ ಪಿತ್ತ ಅಥವಾ ಕಫಪಿತ್ತಗಳನ್ನು ಹೋಗಲಾಡಿಸಲು ವಿರೇಚನವನ್ನೂ ಮಾಡಿಸಬಹುದು. ಇವುಗಳಿಂದ ಕ್ಷೀಣವಾದ ಕಫವನ್ನು ಹೆಚ್ಚಿಸಲು ಮತ್ತು ಪಿತ್ತವನ್ನು ಶಮನ ಮಾಡಲು ಮಧುರ ರಸವನ್ನೂ ಕೊಡಬಹುದು. ಅಧೋಗತದಲ್ಲಿ ವಾತಸಂಸೃಷ್ಟವಾಗಿರುವುದರಿಂದ ಪಿತ್ತವಾತ ಹರವಾಗಿ ಮಧುರರಸವೊಂದನ್ನೇ ಕೊಡಬೇಕು. ಈ ದೋಷಗಳಿಗೆ ಇತರ ರಸಗಳು ಪರಸ್ಪರ ವಿರುದ್ಧವಾದವು. ವಮನವು ಪಿತ್ತವನ್ನು ಸ್ವಲ್ಪ ಮಾತ್ರ ಹೋಗಲಾಡಿಸುವುದು ; ವಾತಹರಣಕ್ಕೆ ಶ್ರೇಷ್ಠವಲ್ಲ ಈ ಅಲ್ಪಯೋಗದಿಂದ ಅಧೋರಕ್ತಪಿತ್ತವು ಯಾಪ್ಯವಾದುದು ಎರಡು ದೋಷಗಳಿಂದ ಕೂಡಿದ್ದರೆ ಅಸಾಧ್ಯ.

## ಶೋಧನಚಿಕಿತ್ಸೆ

ಕಾಲವು ಹಿತವಾಗಿದ್ದು ರೋಗಿಯ ಬಲಮಾಂಸಗಳು ಕ್ಷೀಣವಾಗಿಲ್ಲದೆ, ಆಹಾರವನ್ನು ಸೇವಿಸಬಲ್ಲವನಾಗಿದ್ದು ಅವನಿಗೆ ಸಂತರ್ಪಣದಿಂದ ಕಫ ಮತ್ತು ಆಮದೋಷಪರಿಣಾಮವಾಗಿ ಉಂಟಾದ ರಕ್ತಪಿತ್ತದಲ್ಲಿ ಮೊದಲಲ್ಲೇ ರಕ್ತಸ್ರಾವವನ್ನು[೧] ತಡೆಯಬಾರದು. ಈ ರಕ್ತವನ್ನು ತಡೆಯುವುದರಿಂದ ಗಲಗ್ರಹ, ಪೂತಿನಾಸ ಮುಂತಾದ ಅನೇಕ ವ್ಯಾಧಿಗಳು ಸಂಭವಿಸುವುವು.

---

೧. ನಾದೌ ಸಂಗ್ರಾಹ್ಯಮುದ್ರಿಕ್ತಂ ಯದಸೃಗ್ಬಲಿನೋಽಶ್ನತಃ ।
ತತ್ಪಾಂಡುಗ್ರಹಣೀಕುಷ್ಠಪ್ಲೀಹಗುಲ್ಮಜ್ವರಾವಹಮ್ ॥ ಸು. ಉ. ಅ. ೪೫.

**ಗಲಗ್ರಹಂ ಪೂತಿನಸ್ಯಂ ಮೂರ್ಛಾಯಮರುಚಿಂ ಜ್ವರಮ್ ।**
**ಗುಲ್ಮಂ ಪ್ಲೀಹಾನಮಾನಾಹಂ ಕಿಲಾಸಂ ಕೃಚ್ಛ್ರಮೂತ್ರತಾಮ್ ॥**
**ಕುಷ್ಠಾನ್ಯರ್ಶಾಂಸಿ ವೀಸರ್ಪಂ ವರ್ಣನಾಶಂ ಭಗಂದರಮ್ ।**
**ಬುದ್ಧೀಂದ್ರಿಯೋಪರೋಧಂ ಚ ಕುರ್ಯಾತ್ ಸ್ತಂಭಿತಮಾದಿತಃ ॥**

ಚ.ಚಿ.ಅ. ೪

ಈ ವ್ಯಾಧಿಗೆ ನಿದಾನ ಪರಿವರ್ಜನೆಯು ಬಹುಮುಖ್ಯ. ವಿಶೇಷವಾಗಿ ಆಮದೋಷದಿಂದ ಊರ್ಧ್ವಗರಕ್ತಪಿತ್ತವು ಉತ್ಕ್ಲೇಶಗೊಂಡಿರುವಾಗ ಲಂಘನ ವನ್ನು ಮಾಡಿಸಬೇಕು. ಆಮವಿಲ್ಲದಿದ್ದರೆ ಅಥವಾ ಆಮಪಚನವಾದನಂತರ ಸಂತರ್ಪಕಗಳನ್ನು ಕೊಡಬೇಕು ತಿಕ್ತಕಷಾಯ ಪಾನೀಯಗಳನ್ನು ಕುಡಿಸ ಬೇಕು. ಷಡಂಗದಲ್ಲಿ ಶುಂಠಿಯನ್ನು ಬಿಟ್ಟು ಉಳಿದ ದ್ರವ್ಯಗಳಿಂದ ಮಾಡಿದ ಪಾನೀಯವು ಹಿತವಾಗಿರುವುದು. ಪಕ್ವದೋಷವನ್ನು ಹೊರಹಾಕಲು ವಿರೇಚನ ಮಾಡಿಸಬೇಕು **ವಿರೇಚನಕ್ಕೆ**—(i) ತಿಗಡೆ ಮತ್ತು ಅಳಲೆಕಾಯಿ; (ii) ಕಕ್ಕೆಮಯಣ; (iii) ತ್ರಾಯಮಾಣ; (iv) ಇಂದ್ರವಾರುಣೀ ಬೇರು, ಇವುಗಳಲ್ಲಿ ಯಾವುದಾದರೊಂದರ ಕ್ವಾಥಕ್ಕೆ ಹೆಚ್ಚಾಗಿ ಮಧು.ಶರ್ಕರಗಳನ್ನು ಬೆರಸಿ ಕುಡಿಸಬೇಕು. (v) ಕರಿತಿಗಡೆ ಮತ್ತು ಬಿಳಿ ತಿಗಡೆಗಳನ್ನು ಕ್ವಾಥ ಮಾಡಿ ಸಕ್ಕರೆ ಹಾಕಿ ಪಾಕಕ್ಕಿಟ್ಟು ತಿಗಡೆಚೂರ್ಣ ಪ್ರತಿವಾಪವನ್ನೇ ಹಾಕಿ ಲೇಹ ಮಾಡಿ ಒಂದು ತೊಲೆಯಷ್ಟನ್ನು ತಿನ್ನಿಸಬಹುದು. (vi) ಎರಡು ಬಗೆ ತಿಗಡೆಗಳು, ತ್ರಿಫಲೆಗಳು, ಹಿಪ್ಪಲಿ, ಸಕ್ಕರೆಗಳನ್ನು ಚೂರ್ಣಿಸಿ ಜೇನುತುಪ್ಪದಲ್ಲಿ ಕಲಸಿ ಮೋದಕಗಳನ್ನು (ವಟಿ) ಮಾಡಿ ತಿನ್ನಿಸುವುದರಿಂದ ಊರ್ಧ್ವರಕ್ತಪಿತ್ತ, ಶೋಥ ಮತ್ತು ಜ್ವರಗಳು ನಾಶವಾಗುವುವು.

ಕೋಷ್ಠವು ಶುದ್ಧವಾದನಂತರ ಕಾಲ, ಆಹಾರಸಾತ್ಮ್ಯ, ಅನುಬಂಧ ದೋಷ ಮತ್ತು ರೋಗಿಯ ಪ್ರಕೃತಿಗಳಿಗನುಗುಣವಾಗಿ ಮೊದಲು ಊರ್ಧ್ವಗದಲ್ಲಿ ತರ್ಪಣೌಷಧವನ್ನು ಕೊಡಬೇಕು. ತರ್ಪಣಕ್ಕಾಗಿ (i) ಖರ್ಜೂರ, ದ್ರಾಕ್ಷೆ, ಹಿಪ್ಪೆಹೂ, ಪರೂಷಕ(ಸಣ್ಣ ಖರ್ಜೂರ)ಗಳನ್ನು ನೀರಿನಲ್ಲಿ ಅರ್ಧಾವಶೇಷ ಕಾಯಿಸಿ, ಶೋಧಿಸಿ ಆರಿದನಂತರ ಸ್ವಲ್ಪ ಸಕ್ಕರೆಯನ್ನು ಹಾಕಿ ಕುಡಿಸಬೇಕು (ii) ಭತ್ತದರಳು ಹಿಟ್ಟಿಗೆ ಘೃತಕ್ಷೌದ್ರಗಳನ್ನು ಹಾಕಿ ಮಾಡಿರುವ ತರ್ಪಣ

ವನ್ನು ಸಕಾಲದಲ್ಲಿ ಕುಡಿಸುವುದರಿಂದ ಊರ್ಧ್ವರಕ್ತಪಿತ್ತವು ಶಮನವಾಗುವುದು. ಹುಳಿರಸದ ಅಪೇಕ್ಷೆಯುಳ್ಳವನಿಗೆ ದಾಳಿಂಬೆಹುಳಿ ಅಥವಾ ಆಮಲಕಹುಳಿಗಳನ್ನು ಸೇರಿಸಿ ಕುಡಿಸಬಹುದು.

ಅಧೋಗ ರಕ್ತಪಿತ್ತದಲ್ಲಿ ಬಲಿಷ್ಠನಾದವನಿಗೆ ವಮನವನ್ನು ಮಾಡಿಸಬೇಕು. ಅರಳುಹಿಟ್ಟಿನ ಮಂಥಕ್ಕೆ ಜೇನುತುಪ್ಪ ಮತ್ತು ಸಕ್ಕರೆ ಬೆರಸಿ ಅದರಲ್ಲಿ ಮದನಪಿಪ್ಪಲೀ ಚೂರ್ಣವನ್ನು ಹಾಕಿ ಕುಡಿಸುವುದರಿಂದ ಚೆನ್ನಾಗಿ ವಾಂತಿಯಾಗುವುದು. ಅಥವಾ ಸಕ್ಕರೆ ಪಾನಕಕ್ಕಾಗಲೀ, ಕಬ್ಬಿನ ರಸಕ್ಕಾಗಲೀ ಮದನಬೀಜ ಚೂರ್ಣವನ್ನು ಸೇರಿಸಿ ಕುಡಿಸಿ ವಾಂತಿ ಮಾಡಿಸಬಹುದು. ಶುದ್ಧವಾದನಂತರ ವಾತದೋಷವು ಸಾಮಾನ್ಯವಾಗಿದ್ದರೆ ಯವಾಗುಗಳನ್ನೂ, ಪ್ರಬಲವಾಗಿದ್ದರೆ ಮಾಂಸರಸಗಳನ್ನೂ ಮಧುರವಾಗಿರುವಂತೆ ಕಾಲ ಆಹಾರ ಸಾತ್ಮ್ಯಾದಿಗಳಿಗೆ ಅನುಸಾರವಾಗಿ ಕುಡಿಸಬೇಕು. **ಯವಾಗೂ**—(i) ತಾವರೆ, ನೈದಿಲೆ, ಒಂದೆಲೆಹೊನ್ನೆ ಮತ್ತು ಪ್ರಿಯಂಗು ಕ್ವಾಥದಲ್ಲಿ ಮಾಡಿದ ಪೇಯ ; (ii) ಚಂದನ, ಲಾವಂಚ, ಲೋಧ್ರ, ಶುಂಠಿ (iii) ಚಿರಾಯತ, ಲಾವಂಚ, ಮುಸ್ತಾ ಇವುಗಳಿಂದ ಮಾಡಿದ ಪೇಯ ; (iv) ಪಾರಿವಾಳ ಮುಂತಾದುವುಗಳ ಪ್ರತ್ಯೇಕ ಮಾಂಸರಸಗಳಿಂದ ಮಾಡಿದ ಪೇಯಗಳು ಒಳ್ಳೆಯವು. ಇವನ್ನು ಆರಿಸಿ ಜೇನುತುಪ್ಪ, ಸಕ್ಕರೆ, ತುಪ್ಪಗಳೊಂದಿಗೆ ಯಥೋಚಿತವಾಗಿ ಕೊಡಬೇಕು.

**ಆಹಾರದ್ರವ್ಯಗಳು**—ರಕ್ತಪಿತ್ತ ರೋಗಿಗೆ ಶಾಲಿ, ಷಷ್ಟಿಕ, ನೀವಾರ (ತೃಣಧಾನ್ಯ), ನವಣೆ, ಸಾಮೆ ಮುಂತಾದುವುಗಳಿಂದ ಮಾಡಿದ ಆಹಾರವು ಒಳ್ಳೆಯದು. ಸೂಪ (ತೊವ್ವೆ), ಯೂಷ(ಕಟ್ಟುಸಾರು)ಗಳಿಗೆ ಹೆಸರು, ಚಿನ್ನಂಗಿಬೇಳೆ, ಕಡಲೆ, ತೊಗರಿಗಳನ್ನೂ, ತರಕಾರಿಗಳಿಗೆ ಪಡವಲ, ನಿಂಬ, ಬೆತ್ತದ ಚಿಗರು, ಬಸರಿ, ನೀರುವಂಜಿ ಚಿಗರುಗಳು, ಚಿರಾಯತ, ಮೂರೇಣಿ ಕಳ್ಳಿಯ ಚಿಗರುಗಳು, ಕೊಮ್ಮೆ ಎಲೆ, ಕೆಂಚವಾಳ, ಶಿವನಿ, ಬೂರಗ ಹೂವು ಇವುಗಳನ್ನೂ ಉಪಯೋಗಿಸಬೇಕು. ಮಾಂಸಾಹಾರಿಗಳಿಗೆ ಪಾರಿವಾಳ, ಲಾವ, ಚಕೋರ, ವರ್ತಕ (ಕೆಂದೆಲೆ ಹಕ್ಕಿ), ಮೊಲ, ತಿತ್ತಿರಿ, ಜಿಂಕೆ ಮುಂತಾದುವುಗಳ ಮಾಂಸಗಳು ಹಿತವಾದುವು. ಮಾಂಸರಸಗಳಿಗೆ ಸ್ವಲ್ಪ

ಹುಳಿರಸವನ್ನು ಸೇರಿಸಿಯಾಗಲೀ ಅಥವಾ ಹಾಗೆಯೇ ತುಪ್ಪದಲ್ಲಿ ಹುರಿದು ಸಕ್ಕರೆ ಸೇರಿಸಿಯಾಗಲೀ ಉಪಯೋಗಿಸಬಹುದು. ಕಫಾನುಬಂಧದಲ್ಲಿ (ಊರ್ಧ್ವಗದಲ್ಲಿ) ಯೂಷ ಮತ್ತು ಶಾಕಗಳನ್ನೂ (ಸಾರು, ಪಲ್ಯ ಇತ್ಯಾದಿ) ವಾತಾನುಬಂಧದಲ್ಲಿ ಜಾಂಗಲಮಾಂಸರಸವನ್ನೂ ಕೊಡಬೇಕು.

## ಶಮನ ಚಿಕಿತ್ಸೆ

ಬಲಮಾಂಸಗಳ ಕ್ಷೀಣತೆಯಿಂದ ಬಲಹೀನನಾಗಿರುವ ರಕ್ತಪಿತ್ತಿಗೆ ಶೋಧನ ಮಾಡಿಸಬಾರದು. ಹೀಗೆಯೇ ದುಃಖಪೀಡಿತರೂ, ಭಾರ ಹೊತ್ತು ಅಥವಾ ಮಾರ್ಗಾಯಾಸಪಟ್ಟು ಕೃಶರಾದವರೂ, ಬೆಂಕಿ ಬಿಸಿಲುಗಳಿಂದ ಬಳಲಿದವರೂ, ಇತರ ವ್ಯಾಧಿಗಳಿಂದ ಕ್ಷೀಣರಾಗಿರುವವರೂ, ಗರ್ಭಿಣಿಯರೂ, ಮುದುಕರೂ, ಹುಡುಗರೂ, ರೂಕ್ಷರೂ, ಅಲ್ಪಾಹಾರ ಸೇವಿಸುವವರೂ ಮತ್ತು ವಮನ ವಿರೇಚನಗಳಿಗೆ ಅರ್ಹರಾಗಿಲ್ಲದವರೂ, ರಕ್ತಪಿತ್ತದಿಂದ ನರಳುತ್ತಿದ್ದರೆ ಯಾವ ಶೋಧನವನ್ನೂ ಮಾಡಿಸದೆ ಕೇವಲ ಶಮನಚಿಕಿತ್ಸೆಯನ್ನೇ ನಡೆಸಬೇಕು.

**ಶಮನೌಷಧಗಳು**—(i) ವಾಸಾ,[೧] ದ್ರಾಕ್ಷೆ ಮತ್ತು ಅಳಲೆಕಾಯಿಗಳನ್ನು ಕ್ವಾಥಮಾಡಿ ಸಕ್ಕರೆ, ಜೇನುತುಪ್ಪಗಳನ್ನು ಸೇರಿಸಿ ಕುಡಿಸುವುದರಿಂದ ಶ್ವಾಸ, ಕಾಸ ಮತ್ತು ರಕ್ತಪಿತ್ತಗಳು ಹೋಗುವುವು. (ii) ವಾಸಾಕ್ವಾಥ ಒಂದು ಪಲಕ್ಕೆ ಪ್ರಿಯಂಗು, ಗೋಪಿಚಂದನ ಅಥವಾ ಸ್ವರ್ಣಗೈರಿಕ, ರಸಾಂಜನ (ದಾರ್ವೀ) ಮತ್ತು ಲೋಧ್ರಗಳ ಕಲ್ಕ ಒಂದು ಕರ್ಷ ಮತ್ತು ಸ್ವಲ್ಪ ಜೇನುತುಪ್ಪ ಸೇರಿಸಿ ಕುಡಿಸಬಹುದು. (iii) ಲಾವಂಚ,[೨] ಅಗಿಲು, ಲೋಧ್ರ, ಪದ್ಮಕ, ಪ್ರಿಯಂಗು, ಕಾಯಿಫಲ (ಕಟ್ಫಲ), ಶಂಖಭಸ್ಮ, ಸ್ವರ್ಣಗೈರಿಕ ಇವುಗಳು ಸಮಭಾಗ; ಇವೆಲ್ಲಕ್ಕೂ ಒಟ್ಟು ಸಮಭಾಗ ಶ್ರೀಗಂಧದ ಚೂರ್ಣವನ್ನು ಬೆರಸಿ ಸ್ವಲ್ಪ ಸಕ್ಕರೆಯೊಂದಿಗೆ ತಂಡುಲೋದಕದಲ್ಲಿ ಕುಡಿಸುವುದರಿಂದ

---

೧. ಅಟರೂಷಕಮೃದ್ವೀಕಾ ಪಥ್ಯಾಕ್ವಾಥಃ ಸಶರ್ಕರಃ ।
ಮಧುಮಿಶ್ರಃ ಶ್ವಾಸಕಾಸರಕ್ತಪಿತ್ತನಿಬರ್ಹಣಃ ॥

೨. ಉಶೀರಕಾಲೀಯಕಲೋಧ್ರಪದ್ಮಕಪ್ರಿಯಂಗುಕಾಕಟ್ಫಲಶಂಖಗೈರಿಕಾಃ ।
ಪೃಥಕ್ ಪೃಥಕ್ ಚಂದನತುಲ್ಯಭಾಗಿಕಾಃ ಸಶರ್ಕರಾಸ್ತಂಡುಲಧಾವನಾಪ್ಲುತಾಃ ॥

ರಕ್ತಪಿತ್ತ, ತಮಕಶ್ವಾಸ, ಬಾಯಾರಿಕೆ ದಾಹಗಳು ಕೂಡಲೇ ನಿಲ್ಲುವುವು. (iv) ಲಾವಂಚ,೧ ಕೆಂಪು ತಾವರೆ, ನೈದಿಲೆಗೆಡ್ಡೆಗಳು, ಚಂದನ ಇವುಗಳ ಕಷಾಯವನ್ನು ಅಥವಾ ಇಟ್ಟಿಗೆಯನ್ನು ಚೆನ್ನಾಗಿ ಕಾಯಿಸಿ ನೀರಿನಲ್ಲಿ ಅದ್ದಿದ ಮೇಲೆ ನಿಲ್ಲುವ ತಿಳಿನೀರನ್ನು ಆರಿಸಿ ಸಕ್ಕರೆ ಜೇನುತುಪ್ಪ ಸೇರಿಸಿ ಕುಡಿಸಿದರೆ ಅತಿಯಾಗಿ ಸ್ರಾವವಾಗುವ ರಕ್ತವು ನಿಲ್ಲುವುದು. (v) ರಕ್ತವು ಗಡ್ಡೆಗಡ್ಡೆ೨ ಯಾಗಿ ಹೋಗುತ್ತಿದ್ದರೆ ಪಾರಾವತಮಲಕ್ಕೆ ಜೇನುತುಪ್ಪವನ್ನು ಸೇರಿಸಿ ನೆಕ್ಕಿಸ ಬೇಕು.

ಇವುಗಳಿಂದ ಅಗ್ನಿಯು ದೀಪ್ತವಾಗಿ ಕಫವು ಕಡಿಮೆಯಾಗಿ ರಕ್ತಪಿತ್ತವು ಶಮನವಾಗದಿದ್ದರೆ ಅಲ್ಲಿ ವಾತವು ಪ್ರಬಲವಿದೆಯೆಂದು ತಿಳಿದು ವಾತಹರ ಚಿಕಿತ್ಸೆಯನ್ನು ಮಾಡಬೇಕು ಅದಕ್ಕೆ (i) ಆಡಿನ ಹಾಲು ಅಥವಾ ಹಸುವಿನ ಹಾಲಿಗೆ ಐದರಷ್ಟು ನೀರು ಹಾಕಿ ಕಾಯಿಸಿ ಹಾಗೆಯೇ ಅಥವಾ ಲಘುಪಂಚ ಮೂಲದೊಂದಿಗೆ ಕಾಯಿಸಿ ಸಕ್ಕರೆ ಜೇನುತುಪ್ಪಗಳನ್ನು ಸೇರಿಸಿ ಕುಡಿಸುವುದು ಬಹಳ ಒಳ್ಳೆಯದು. (ii) ಶತಾವರೀ೩ ಮತ್ತು ಗೋಕ್ಷುರಗಳನ್ನು ಹಾಕಿ ಕುದಿಸಿದ ಅಥವಾ ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಕಾಡುದ್ದು ಮತ್ತು ಕಾಡು ಹೆಸರುಗಳೊಡನೆ ಸಿದ್ಧಪಡಿಸಿದ ಕ್ಷೀರಪಾಕವು ರಕ್ತಪಿತ್ತವನ್ನು ಹೋಗಲಾ ಡಿಸುವುದು. ವಿಶೇಷವಾಗಿ ಇದು ಮೂತ್ರಮಾರ್ಗದಿಂದ ಹೊರಡುವ ನೋವಿ ನೊಂದಿಗಿರುವ ರಕ್ತಸ್ರಾವವನ್ನು ಹೋಗಲಾಡಿಸುತ್ತದೆ. (iii) ಮಲ ಮಾರ್ಗದಲ್ಲಿ ಸ್ರಾವವಾಗುತ್ತಿರುವ ರಕ್ತವನ್ನು ನಿಲ್ಲಿಸುವುದಕ್ಕೆ ಮೋಚರಸ (ಬೂರಗದ ಗೋಂದು) ಅಥವಾ ಆಲದ ಬಿಳಲಿನ ಮೊಗರು ಅಥವಾ ಆಲದ ಎಳೆ

---

೧. ಉಶೀರಪದ್ಮೋತ್ಪಲಚಂದನಾನಾಂ ಪಕ್ವಸ್ಯ ಲೋಷ್ಟಸ್ಯ ಚ ಯಃ ಪ್ರಸಾದಃ ।
ಸಶರ್ಕರಃ ಕ್ಷೌದ್ರಯುತಃ ಸುಶೀತೋ ರಕ್ತಾತಿಯೋಗಃ ಪ್ರಶಮಾಯದೇಯಃ ॥

೨. ಸಕ್ಷೌದ್ರಂ ಗ್ರಥಿತೇ ರಕ್ತೇ ಲಿಹ್ಯಾತ್ಪಾರಾವತಂ ಶಕೃತ್ ।

೩. ಶತಾವರೀಗೋಕ್ಷುರಕೈಃ ಶೃತಂವಾ
ಶೃತಂ ಪಯೋವಾಪೃಥಪರ್ಣಿಣೀಭಿಃ ।
ರಕ್ತಂ ನಿಹನ್ತ್ಯಾಶು ವಿಶೇಷತಸ್ತು
ಯನ್ಮೂತ್ರಮಾರ್ಗಾತ್ ಸರುಜಂ ಪ್ರಯಾತಿ ॥ ಚ.ಚಿ.ಅ. ೪.

ಕುಡಿಗಳ ಕ್ಷೀರಪಾಕವು ಹಿತಕರವಾದುದು. ವಾಸಾಘೃತವನ್ನಾದರೂ ಉಪ ಯೋಗಿಸಬಹುದು. ರಕ್ತಾತಿಸಾರ ಮತ್ತು ರಕ್ತಾರ್ಶಸ್ಸುಗಳಿಗೆ ಹೇಳಿರುವ ಚಿಕಿತ್ಸೆಗಳನ್ನು ಇಲ್ಲಿಯೂ ಉಪಯೋಗಿಸಬಹುದು. ಕಷಾಯಗಳನ್ನು ಹಾಲಿ ನೊಡನೆ ಕುಡಿಸಿ ಹಾಲು ಅನ್ನವನ್ನೇ ತಿನ್ನಿಸಬೇಕು. (iv) ಗುದನಿಃಸರಣಕ್ಕೆ ವಿಶೇಷವಾಗಿ ವಸ್ತಿಯು ಒಳ್ಳೆಯದು. ದ್ರಾಕ್ಷೆ ಮತ್ತು ಲಘುಪಂಚಮೂಲ ಗಳ ಕ್ಷೀರಪಾಕಕ್ಕೆ ಜೇನುತುಪ್ಪ ಮತ್ತು ಸಕ್ಕರೆಗಳನ್ನು ಸೇರಿಸಿ ಆಸ್ಥಾಪನವಸ್ತಿ ಯನ್ನೂ, ಈ ದ್ರವ್ಯಗಳಿಂದಲೇ ಸಿದ್ಧಪಡಿಸಿದ ಘೃತದ ಅನುವಾಸನವಸ್ತಿ ಯನ್ನೂ ಕೊಡಬಹುದು. (v) ಕೊಡಸಿಗೆ ಚಕ್ಕೆಯ ಕಲ್ಕಕಷಾಯಗಳಿಗೆ ಅಥವಾ ಮುಟ್ಟಿದರೆಮುನಿಯು, ಸೈದಿಲೆಗೆಡ್ಡೆ ಮತ್ತು ಲೋಧ್ರಚಕ್ಕೆಗಳಿಂದ ಕೂಡಿದ ಕಲ್ಕಕಷಾಯಗಳಿಗೆ, ತುಪ್ಪ ಹಾಕಿ ಸಿದ್ಧಪಡಿಸಿದ ಘೃತವನ್ನು ಕುಡಿಸ ಬೇಕು. (vi) ಕಬ್ಬಿನಜಲ್ಲೆಯ ಮಧ್ಯಭಾಗದ ಹೊರ ಸಿಪ್ಪೆಯನ್ನು ತೆಗೆದು ಹಾಕಿ ಕಾಂಡವನ್ನು ಜಜ್ಜಿ ಒಂದು ಹೊಸ ಮಡಕೆಯಲ್ಲಿ ತಣ್ಣೀರಿನೊಡನೆ ನೆನೆಸಿ ಆ ಮಡಕೆಯನ್ನು ಒಂದು ರಾತ್ರಿಯೆಲ್ಲಾ ಬಯಲಲ್ಲಿ (ವಿಶಾಲ ಪ್ರದೇಶ ದಲ್ಲಿ)ಟ್ಟಿದ್ದು ಮರುಪ್ರಾತಃಕಾಲ ಆ ನೀರನ್ನು ಶೋಧಿಸಿ ಅದಕ್ಕೆ ನೈದಿಲೆ ಚೂರ್ಣ ಮತ್ತು ಜೇನುತುಪ್ಪಗಳನ್ನು ಸೇರಿಸಿ ಕುಡಿಸುವುದರಿಂದ ರಕ್ತ ನಿಲ್ಲುವುದು. (vii) ನೇರಿಳೆಬೀಜ, ಮಾವಿನಬೀಜ ಮತ್ತು ಅರ್ಜುನಚಕ್ಕೆ ಗಳ ಶೀತಕಷಾಯಕ್ಕೆ ಜೇನುತುಪ್ಪ ಹಾಕಿ ಕುಡಿಸಬೇಕು. ಅಥವಾ ಅತ್ತಿ ಹಣ್ಣಿನ ರಸವನ್ನು ಜೇನುತುಪ್ಪದೊಡನೆ ಕುಡಿಸಬೇಕು. (ಸು.ಉ.ಅ. ೪೫)

ಇವುಗಳಿಂದಲೂ ರಕ್ತ ನಿಲ್ಲದಿದ್ದರೆ ದ್ರಾಕ್ಷಾದಿಘೃತದ ಅನುವಾಸನವನ್ನೂ ಅದೇ ದ್ರವ್ಯಗಳ ಆಸ್ಥಾಪನವನ್ನೂ ಕೊಡಬೇಕು. ಅನುವಾಸನಕ್ಕೆ ಮೊದಲು ಹಾಲು ಅನ್ನವನ್ನು ಊಟ ಮಾಡಿಸಬೇಕು. ಈ ವಸ್ತಿಗೆ ಮಧುಯಷ್ಟಿ ತೈಲ ವನ್ನಾದರೂ ಉಪಯೋಗಿಸಬಹುದು.

ಪಿತ್ತಜ್ವರಹರ ಘೃತಗಳನ್ನೂ, ಅಭ್ಯಂಗಯೋಗಗಳನ್ನೂ, ಪರಿಷೇಕ, ಅವಗಾಹ, ಶಯನ, ವಸ್ತಿ, ಶೀತೋಪಚಾರ ಮುಂತಾದುವುಗಳನ್ನೂ ಕಾಲ ಪ್ರಮಾಣಾದಿಗಳನ್ನನುಸರಿಸಿ ಉಪಯೋಗಿಸಬೇಕು. ಉರಃಕ್ಷತದಲ್ಲಿ ಉಪ ಯೋಗಿಸುವ ಸರ್ಪಿಗುಡಗಳು ಇಲ್ಲಿಯೂ ಹಿತವಾಗುವುವು. ರಕ್ತಪಿತ್ತವನ್ನು ಜಯಿಸುವುದರಲ್ಲಿ ಆಡುಸೋಗೆಯೊಂದೇ ಎಷ್ಟೋ ಉತ್ತಮವಾದುದು. ರಕ್ತವು

ಬಹಳವಾಗಿ ನಷ್ಟವಾದವನಿಗೆ ರಕ್ತ ಪೂರ್ತಿಕೆ ಮಾಡಲು ಆಡಿನ ಬಿಸಿ ರಕ್ತಕ್ಕೆ ಜೇನುತುಪ್ಪವನ್ನು ಕಲಸಿ ಕುಡಿಸಬೇಕು. ಅಥವಾ ಆಡಿನ ಹಸಿಯ ಪಿತ್ತ ಸಹಿತ ಯಕೃತ್ತನ್ನು ತಿನ್ನಿಸಬೇಕು.

**ಅತಿನಿಃಸೃತರಕ್ತೋ ವಾ ಕ್ಷೌದ್ರಯುಕ್ತಂ ಪಿಬೇದಸೃಕ್ ।**
**ಯಕೃದ್ವಾ ಭಕ್ಷಯೇದಾಜಮಾಮಂ ಪಿತ್ತಸಮಾಯುತಮ್ ॥**

ಸು. ಉ ೪೫

ನಾಸಾಮಾರ್ಗದಲ್ಲಿ ದುಷ್ಟರಕ್ತವು ಪ್ರವಿಸುತ್ತಿದ್ದರೆ ಅದನ್ನು ಉಪೇಕ್ಷಿಸಬೇಕು. ಶುದ್ಧ ರಕ್ತವನ್ನು ಮಾತ್ರ ನಿಲ್ಲಿಸಲು ಮೇಲೆ ಹೇಳಿದ ಕಷಾಯ ಯೋಗಗಳಿಂದ ನಸ್ಯ ಮಾಡಿಸಬೇಕು. ಅವಪೀಡ(ನಸ್ಯ)ದಿಂದ ದುಷ್ಟ ರಕ್ತವನ್ನು ತಡೆದರೆ ದುಷ್ಟಪ್ರತಿಶ್ಯಾಯ, ಶಿರೋರೋಗಗಳು, ಪೂಯರಕ್ತ, ಕುಣಪ ಗಂಧ, ಘ್ರಾಣನಾಶ ಮತ್ತು ಕ್ರಿಮಿಗಳುಂಟಾಗುವುವು.

**ರಕ್ತೇ ಪ್ರದುಷ್ಟೇ ಹ್ಯವಪೀಡಬಂಧೇ ದುಷ್ಟಪ್ರತಿಶ್ಯಾಯ ಶಿರೋವಿಕಾರಾಃ ।**
**ರಕ್ತಂ ಸಪೂಯಂ ಕುಣಪಶ್ಚ ಗಂಧಃ ಸ್ಯಾತ್ ಘ್ರಾಣನಾಶಃ ಕೃಮಯಶ್ಚ ದುಷ್ಟಾಃ ॥**

ಚ. ಚಿ. ೪.

ಇವನ್ನು ಹೋಗಲಾಡಿಸಲು ಅತಿಮಧುರ ಕಲ್ಕದಲ್ಲಿ ನಾಲ್ಕು ಪಾಲು ಹಾಲು ಮತ್ತು ಪ್ರಿಯಾಲ ತೈಲಗಳನ್ನು ಹಾಕಿ ಸಿದ್ಧಮಾಡಿದ ತೈಲದಿಂದ ನಾವನವನ್ನು ಮಾಡಿಸಬೇಕು. ದಾಳಿಂಬೆಹೂವಿನ ರಸ, ಪಲಾಂಡು ಬೇರಿನ ರಸ ಅಥವಾ ಗರಿಕೆ ರಸಕ್ಕೆ ಹಾಲನ್ನು ಬೆರಸಿಯಾದರೂ ನಸ್ಯ ಮಾಡಿಸಬಹುದು.

ಕಫಾನುಬಂಧದಲ್ಲಿ ರಕ್ತವು ಗಡ್ಡೆಗಡ್ಡೆಯಾಗಿರುವುದು. ಗಂಟಲಲ್ಲಿ ಈ ರೀತಿಯಾಗಿ ಬರುತ್ತಿದ್ದರೆ ನೈದಿಲೆದಂಟಿನ ಕ್ಷಾರವನ್ನು ತುಪ್ಪ ಮತ್ತು ಜೇನು ತುಪ್ಪಗಳೊಡನೆ ಕೊಡಬೇಕು. ಇದರಂತೆಯೇ ತಾವರೆದಂಟಿನ, ಎಸಳುಗಳ, ಮುತ್ತುಗಹೂವಿನ, ಹಿಪ್ಪೆಹೂವಿನ ಕ್ಷಾರಗಳೂ ಒಳ್ಳೆಯವು.

ಸ್ತ್ರೀಯರಲ್ಲಿ ಯೋನಿಮಾರ್ಗದಿಂದ ಋತುಧರ್ಮಕ್ಕೆ ವಿರುದ್ಧವಾದ ರಕ್ತಸ್ರಾವವು ಆಗುವುದುಂಟು. ಇದಕ್ಕೆ ಅಸೃಗ್ದರವೆಂದು ಹೆಸರು. ಇದನ್ನು

ಅಧೋಗತ ರಕ್ತಪಿತ್ತದಂತೆಯೇ ಚಿಕಿತ್ಸಿಸಬೇಕು. ಸ್ರಾವವು ರಕ್ತವರ್ಣ, ಅರುಣ, ಮಾಸಲು ಕಪ್ಪು ಅಥವಾ ಶ್ಯಾಮವರ್ಣಕ್ಕೂ, ತೆಳ್ಳಗೆ ಅಥವಾ ದುರ್ಗಂಧವಾಗಿಯೂ ಆಗುವುದು. ಅಸ್ಥಿಮಜ್ಜಗಳ ಸಾರವು ಸ್ರವಿಸುವುದುಂಟು. ಇದರಿಂದ ಶೋಫ, ನೋವು ಮುಂತಾದುವು ಉಂಟಾಗುತ್ತವೆ. ಯೋನಿಮಾರ್ಗವನ್ನು ತ್ರಿಫಲಾಕ್ವಾಥ ಅಥವಾ ಪಂಚವಲ್ಕಲಕ್ವಾಥ ಇಲ್ಲವೇ ಧಾತಕೀಕುಸುಮಕ್ವಾಥದಿಂದ ಶುದ್ಧಿಪಡಿಸಿ ಆ ರೋಗಿಗೆ ಒಲಾಮೂಲ, ಕದಳೀಕಂದ, ಶಾಲ್ಮಲೀತ್ವಕ್ ಮತ್ತು ಧಾತಕೀಕುಸುಮಗಳನ್ನು ಹಾಕಿರುವ ಕ್ಷೀರಪಾಕಕ್ಕೆ ಸಕ್ಕರೆ ಜೇನುತುಪ್ಪಗಳನ್ನು ಕಲಸಿ ಕುಡಿಸಬೇಕು. ಕುಟಜ, ಒಲಾಮೂಲ, ವಸ್ತ್ರಾ, ನೇರಿಳೆಬೀಜ, ಮುಟ್ಟಿದರೆಮುನಿಯ (ಲಜ್ಜಾಲು), ದಾಳಿಂಬೆಸಿಪ್ಪೆ ಮತ್ತು ಮುಡಿವಾಳ (ವಾಲಕ)ಗಳ ಕ್ವಾಥವನ್ನು ಕುಡಿಸುವುದರಿಂದಲೂ, ಕ್ಷಾಳನಕ್ಕುಪಯೋಗಿಸುವುದರಿಂದಲೂ ಯೋನಿಶೂಲ, ಶ್ವೇತ ಮತ್ತು ರಕ್ತಪ್ರದರಗಳು ನಾಶವಾಗುವುವು. ಪಾಠಾದಿಘೃತವು ಬಹು ಗುಣಕಾರಿಯಾದುದು.

**ರಕ್ತಪಿತ್ತಕ್ಕೆ ಲೇಪಗಳು**—ಶ್ರೀಗಂಧ, ರಕ್ತಚಂದನ, ಪುಂಡರೀಕ ಕಾಷ್ಟ, ತಾವರೆ, ನೃದಿಲೆಗೆಡ್ಡೆ, ಲಾವಂಚ, ನೀರುಹಬ್ಬೆ, ಗರಿಕೆ, ಅತಿಮಧುರ ಮುಂತಾದುವುಗಳ ಕಲ್ಕದಿಂದ ಲೇಪಿಸಬೇಕು. ತಾವರೆ ಸರೋವರದ ತಳ ಮಣ್ಣಿನಿಂದ (ಜೇಡಿಮಣ್ಣು) ಲೇಪಿಸಬಹುದು. ಶೀತಲವಾದ ಎಲ್ಲಾ ಕಾರ್ಯಗಳನ್ನೂ ನಡೆಸಬೇಕು. ಇದೇ ದ್ರವ್ಯಗಳಿಂದ ಮಾಡಿದ ಸ್ನಾನಚೂರ್ಣ, ಅವಗಾಹಸ್ನಾನ, ಘೃತತೈಲಗಳೆಲ್ಲವೂ ರಕ್ತಪಿತ್ತವನ್ನು ಹೋಗಲಾಡಿಸುವುವು.

**ಉಪಚಾರ**—ಧಾರಾಗೃಹ (ಕಾರಂಜಿಮನೆ ಅಥವಾ ತಣ್ಣಗಿರುವ ಕೊರಡಿ), ಶೀತಜಲವಾತಗಳು ಇರುವ ಮನೋಹರವಾದ ತೋಟ, ಶೈತ್ಯವನ್ನುಂಟುಮಾಡುವ ಮುಕ್ತಾಮಣಿಗಳ ಸ್ಪರ್ಶ, ಬಾಳೆ ಎಲೆ, ತಾವರೆ ಎಲೆ, ಪುಷ್ಪ ಇವುಗಳನ್ನು ಧರಿಸುವುದು, ಇವುಗಳ ಮೇಲೆ ಶಯನ, ಆಸನ ಎಲ್ಲವೂ ಹಿತಕರವಾದುವು. ಮೈಗೆ ಚಂದನಾದಿಲೇಪ, ದೊಡ್ಡ ನದಿ, ಹಿಮವತ್ಪ್ರದೇಶ, ಬೆಳದಿಂಗಳು, ತಾವರೆಸರೋವರ ಮುಂತಾದ ಪ್ರದೇಶಗಳು, ಮನಸ್ಸಿಗೆ ಹಿತಕರವಾದ ಕಥೆಗಳು ಮತ್ತು ಹಿತವಾದ ಆಹಾರ ಪಾನೀಯಗಳು ರಕ್ತಪಿತ್ತವನ್ನು ಕೂಡಲೇ ಶಮನಮಾಡುತ್ತವೆ.

**ತ್ರಯಾಣಾಮಪಿದೋಷಾಣಾಂ ಶೋಣಿತೇಪಿಚ ಸರ್ವಶಃ |**
**ಲಿಂಗಾನ್ಯಾಲೋಕ್ಯ ಕರ್ತವ್ಯಂ ಚಿಕಿತ್ಸಿತಮನಂತರಮ್ ||**

ಸು. ಉ. ಅ. ೪೫.

ರಕ್ತಸ್ರಾವವು ಅನೇಕ ಕಾರಣಗಳಿಂದ ಆಗುವುದು. ರಕ್ತಪಿತ್ತದಲ್ಲಿ ಮೂರು ದೋಷಗಳ ಪ್ರತ್ಯೇಕ, ದ್ವಂದ್ವ ಅಥವಾ ಎಲ್ಲದರ ಲಕ್ಷಣಗಳನ್ನೂ ತಿಳಿದು ಅನಂತರ ಚಿಕಿತ್ಸೆಯನ್ನು ನಡೆಸಬೇಕು.




# ಕಾಸನಿದಾನ

ಧೂಮ, ಧೂಳು, ಆಮರಸ, ಆತುರವಾಗಿ ಸೇವಿಸಲ್ಪಟ್ಟ ಆಹಾರ ಇವು ಪ್ರಾಣವಾಯುವಿನ ಮಾರ್ಗವನ್ನು ಪ್ರವೇಶಿಸುವುದರಿಂದ ಇವನ್ನು ಹೊರ

ದೂಡುವ ಪ್ರಯತ್ನದಿಂದ ವಾತವು ಮುಖದಿಂದ ಹಠಾತ್ತನೆ ಶಬ್ದಪೂರಿತವಾಗಿ ಬರುವುದು. ಈ ಶಬ್ದಕ್ಕೆ ಕಾಸ ಅಥವಾ ಕೆಮ್ಮು ಎಂದು ಹೆಸರು.

ಪುರೀಷ, ಸೀನು, ಲಂಘನ, ಆಯಾಸ ಮುಂತಾದ ವೇಗಗಳ ತಡೆಯಿಂದ ಪ್ರಕುಪಿತ ವಾತವು ಊರ್ಧ್ವ ಮುಖವಾಗಿ ಹೊರಟು (ಉದಾನಭಾವವನ್ನು ಹೊಂದಿ) ಗಂಟಲು, ಎದೆ, ಶಿರಸ್ಸುಗಳ ಸ್ರೋತಸ್ಸುಗಳನ್ನು ಸೇರಿ ದವಡೆ, ಹೆಕ್ಕತ್ತು, ಕಣ್ಣು, ಬೆನ್ನು, ಎದೆ, ಪಕ್ಕೆಗಳಲ್ಲಿ ಆಕ್ಷೇಪವನ್ನುಂಟುಮಾಡುವುದು. ಎದೆ, ಗಂಟಲುಗಳು ಒಣಗುವುವು. ಕಣ್ಣು ಕತ್ತಲೆಯಾಗುವುದು. ಇವು ವಾತಕಾಸದ ಲಕ್ಷಣಗಳು.

ಕಟು, ಅಮ್ಲ, ಉಷ್ಣ, ವಿದಾಹಿ ಮತ್ತು ಕ್ಷಾರಗಳ ಅತಿಸೇವನೆಯಿಂದ ಅಗ್ನಿ ಮತ್ತು ಬಿಸಿಲುತಾಪಗಳಿಂದಲೂ ಪ್ರಕುಪಿತವಾದ ಪಿತ್ತವು ಕಾಸವನ್ನುಂಟು ಮಾಡುವುದು. ಇದರಿಂದ ದುರ್ಗಂಧವಾದ ಉಗಳು, ಬಾಯಿ ಕಹಿ, ಸ್ವರ ಭೇದ, ಗಂಟಲಲ್ಲಿ ಹೊಗೆಯಿಟ್ಟಂತಿರುವುದು, ಮೋಹ, ಅರುಚಿ ಮತ್ತು ಭ್ರಮ ಗಳುಂಟಾಗುವುವು. ಹೆಚ್ಚಾಗಿ ಕೆಮ್ಮಿದಾಗ ಕಣ್ಣಿಗೆ ನಕ್ಷತ್ರಗಳು ಕಂಡಂತಾಗು ತ್ತದೆ. ರೋಗಿಯು ಪಿತ್ತಮಿಶ್ರವಾದ ಶ್ಲೇಷ್ಮವನ್ನು ಕೇಕರಿಸುವನು. ಇವು ಪಿತ್ತಕಾಸದ ಲಕ್ಷಣಗಳು.

ಗುರು, ಅಭಿಷ್ಯಂದಿ, ಮಧುರ, ಸ್ನಿಗ್ಧ ಮತ್ತು ದಿವಾಸ್ವಪ್ನಗಳಿಂದ ಹೆಚ್ಚಿದ ಕಫವು ವಾತಸ್ರೋತಸ್ಸುಗಳನ್ನು ತಡೆದು ಕಾಸವನ್ನುಂಟುಮಾಡು ವುದು. ಇದರಲ್ಲಿ ಅಗ್ನಿಮಾಂದ್ಯ, ಅರುಚಿ, ಪೀನಸ, ಉತ್ಕ್ಲೇಶ, ಮೈಭಾರ, ದೌರ್ಬಲ್ಯ ಮುಂತಾದುವುಗಳಿರುವುವು. ಕೆಮ್ಮಿದಾಗ ಗಟ್ಟಿಯಾಗಿಯೂ, ಮಧುರ, ಸ್ನಿಗ್ಧವಾಗಿಯೂ, ಹೆಚ್ಚಾಗಿಯೂ ಕಫ ಬೀಳುವುದು. ಎದೆಯಲ್ಲಿ ಸ್ವಲ್ಪವೇ ನೋವು ಮತ್ತು ತುಂಬಿದಂತಿರುವುದು. ಇವೆಲ್ಲಾ ಕಫಕಾಸ ಲಕ್ಷಣ ಗಳು.

ರೂಕ್ಷದೇಹವುಳ್ಳವನು ಅತಿವ್ಯವಾಯ, ಭಾರ, ಮಾರ್ಗ ನಡೆದಿರುವುದು, ಸಾಹಸಕೃತ್ಯ ಮುಂತಾದುವನ್ನು ಮಾಡುವುದರಿಂದ ಉರಃಕ್ಷತವುಂಟಾಗುವುದು. ಮೊದಲು ಮೊದಲು ಒಣಕೆಮ್ಮಿದ್ದು ಅನಂತರ ರಕ್ತಮಿಶ್ರವಾದ ಕಫವನ್ನು ಉಗಳುತ್ತಾನೆ. ಗಂಟಲಲ್ಲಿ ಬಾಧೆ, ಎದೆಯಲ್ಲಿ ಏನೋ ಸೇರಿಕೊಂಡಿರುವುದು, ಸೂಜಿಗಳಿಂದ ಚುಚ್ಚಿದಂತೆ ಆಗುವುದು, ನೋವಿರುವ ಜಾಗದಮೇಲೆ ಮುಟ್ಟಿದರೆ

ನೋವು, ಸಂಧಿಗಳಲ್ಲಿ ಒಡೆತ, ಜ್ವರ, ಅರುಚಿ ಮತ್ತು ಪಾರಿವಾಳದ ಧ್ವನಿಯಂತೆ ಗಂಟಲಲ್ಲಿ ಶಬ್ದ ಬರುವುದು ಇವೆಲ್ಲಾ ಕ್ಷತಕಾಸದಿಂದಾದುವೆಂದು ತಿಳಿಯಬೇಕು.

ವಿಷಮಾಶನ, ಅಸಾತ್ಮ್ಯಭೋಜನ, ಅತಿವ್ಯವಾಯ, ವೇಗನಿಗ್ರಹ, ಇತರರಲ್ಲಿ ಬಹಳವಾದ ಪರಿತಾಪ, ದುಃಖ ಇವುಗಳಿಂದ ಪ್ರಕೋಪಹೊಂದಿದ ಮೂರು ದೋಷಗಳೂ ಶರೀರವನ್ನು ಕ್ಷೀಣಮಾಡುವಂತಹ ಕೆಮ್ಮನ್ನುಂಟು ಮಾಡುತ್ತವೆ. ಕಫವು ದುರ್ಗಂಧವಾಗಿಯೂ, ಹಸುರಾಗಿಯೂ, ಕೀವು ಮಿಶ್ರ ರಕ್ತದಿಂದಲೂ ಕೂಡಿರುವುದು. ಕೆಮ್ಮಿದರೆ ಹೃದಯವು ತನ್ನ ಸ್ಥಾನದಿಂದ ಜಾರಿದೆಯೋ ಏನೋ ಎಂಬ ಸಂಶಯ ಹುಟ್ಟುವುದು. ಒಂದೊಂದು ಸಲ ಅಕಸ್ಮಾತ್ತಾಗಿ ಚಳಿಯನ್ನೂ ಅನುಭವಿಸುತ್ತಾನೆ. ಹೆಚ್ಚು ಊಟ ಮಾಡಿದರೂ ದುರ್ಬಲನಾಗಿಯೂ ಕೃಶನಾಗಿಯೂ ಇರುವನು. ಪೀನಸ, ಅರುಚಿ, ಪಾರ್ಶ್ವ ಶೂಲೆ, ನಿಷ್ಕಾರಣವಾಗಿ ಸ್ವರಭೇದ, ಕಾರಣವಿಲ್ಲದೆ ಒಂದೊಂದು ಸಲ ಮಲ ನೀರಾಗಿಯೂ ಅಥವಾ ಗಟ್ಟಿಯಾಗಿಯೂ ಆಗುವುದು ಇವೆಲ್ಲಾ ಕ್ಷಯಕಾಸದ ಲಕ್ಷಣಗಳು.

ಇವುಗಳಲ್ಲಿ ವಾತ, ಪಿತ್ತ ಮತ್ತು ಕಫಕಾಸಗಳು ಸಾಧ್ಯ ; ಕ್ಷತ ಮತ್ತು ಕ್ಷಯಕಾಸಗಳು ಯಾಪ್ಯವಾದುವು

## ಕಾಸಚಿಕಿತ್ಸಾ

ಕಾಸವು ವಾತ, ಪಿತ್ತ, ಶ್ಲೇಷ್ಮ, ಕ್ಷತ ಮತ್ತು ಕ್ಷಯಗಳಿಂದು ಐದು ಬಗೆ. ರೂಕ್ಷನಿಗೆ ಉಂಟಾಗಿರುವ ವಾತಕಾಸವನ್ನು ಮೊದಲು ಸ್ನೇಹಕರ್ಮದಿಂದ ಉಪಚರಿಸಬೇಕು. ಎಂದರೆ, ವಾತಘ್ನ ಸಿದ್ಧಘೃವನ್ನು ಪೇಯಾ, ಯೂಷಾ, ರಸ ಮುಂತಾದುವುಗಳೊಡನೆ ಸೇವಿಸಲು ಕೊಡಬೇಕು. ವಾತಹರ ತೈಲದಿಂದ ಅಭ್ಯಂಗ, ಬಿಸಿನೀರಿನ ಪರಿಷೇಕಸ್ನಾನ ಅಥವಾ ಅವಗಾಹಸ್ನಾನ ಮತ್ತು ಸ್ವೇದಗಳನ್ನು ಮಾಡಿಸಬೇಕು. ಮಲಬಂಧ ಮತ್ತು ಮೂತ್ರವಾತಗಳಿದ್ದರೆ ಸ್ನೇಹವಸ್ತಿಯನ್ನು ಪಯೋಗಿಸಬೇಕು. ರೂಕ್ಷತೆಯನ್ನು ಹೋಗಲಾಡಿಸಲು ಊಟವಾದನಂತರ ರೋಗಿಗೆ ಸರ್ಪಿಷ್ಪಾನವನ್ನು ಮಾಡಿಸಬೇಕು. ಪಿತ್ತದೋಷ ವಾಗಲೀ ಕಫದೋಷವಾಗಲೀ ಅನುಬಂಧಿಯಾಗಿದ್ದರೆ ಸ್ನೇಹವಿರೇಚನಗಳನ್ನು

ಕೊಡಬೇಕು. ವಾತಕಾಸಹರವಾದ ಪಿಪ್ಪಲ್ಯಾದಿಘೃತ ಅಥವಾ ಕಂಟಕಾರಿ ಘೃತವನ್ನು ಕುಡಿಸುವುದರಿಂದ ರೂಕ್ಷತೆಯೂ ಕಾಸವೂ ಶಮನಹೊಂದುವುದು ; ಅಗ್ನಿದೀಪನವಾಗುವುದು. ಕಫಾನುಬಂಧವೂ ಇದ್ದರೆ ವಿಡಂಗ,[೧] ಶುಂಠಿ, ರಾಸ್ನೆ, ಹಿಪ್ಪಲಿ, ಹಿಂಗು, ಸೈಂಧವಲವಣ, ಭಾರ್ಙೀ ಮತ್ತು ಯವಕ್ಷಾರಗಳನ್ನು ಸೇರಿಸಿ ಚೂರ್ಣಮಾಡಿ ಘೃತದೊಂದಿಗೆ ಪ್ರಮಾಣವರಿತು ಕೊಡುವುದರಿಂದ ಉತ್ತಮ ಗುಣಬರುವುದು. ಅಗಸ್ತ್ಯಹರೀತಕೀ ಲೇಹವು ಬಹು ಗುಣಕಾರಿ ಯಾದುದು. ಹಿಪ್ಪಲಿಯನ್ನು ತುಪ್ಪದಲ್ಲಿ ಹುರಿದು ಸ್ವಲ್ಪ ಸೈಂಧವಲವಣವನ್ನು ಸೇರಿಸಿ ಕಲ್ಕಮಾಡಿ ಬೆಚ್ಚಗಿರುವ ಭಾರ್ಙೀನಾಗರದಾಡಿಮಾಮ್ಲಕ್ವಾಥದ ಅನುಪಾನ ಅಥವಾ ಮಸ್ತು ಅನುಪಾನದೊಂದಿಗೆ ಕೊಡುವುದರಿಂದ ಕಫಯುಕ್ತ ವಾತಕಾಸವು ನಾಶಹೊಂದುವುದು.

ತಲೆಬಾಧೆ, ಮೂಗಿನಲ್ಲಿ ಸ್ರಾವ, ಎದೆ ಬಳಲಿರುವುದು ಮತ್ತು ನೆಗಡಿಗಳಿಂದ ಕೂಡಿರುವ ಕಾಸರೋಗಿಗೆ ವಿರೇಚನ ಧೂಮವನ್ನು ಕೊಡಬೇಕು. ಹತ್ತು ಅಥವಾ ಎಂಟು ಅಂಗುಲ ಉದ್ದದ ನಾಡಿಯಿಂದ ಮುಖದ್ವಾರ ಧೂಮಪಾನ ಮಾಡಿಸಿ ಹೊಗೆಯನ್ನು ಬಾಯಿಂದಲೇ ಹೊರಡಿಸಿದರೆ ಅದು ಎದೆಯಲ್ಲಿರುವ ಶ್ಲೇಷ್ಮವನ್ನು ಹೊರಪಡಿಸುವುದು. ಇದರಿಂದ ವಾತಶ್ಲೇಷ್ಮಕಾಸವು ಶಮನವಾಗು ವುದು. ಧೂಮಕ್ಕೆ ಮಣಿಶಿಲೆ, ತಾಳಕ, ಮಧುಯಷ್ಟಿ, ಜಟಾಮಾಂಸೀ, ಮುಸ್ತಾ, ಇಂಗಳದ ಹಣ್ಣುಗಳ ಚೂರ್ಣವನ್ನು ಪಯೋಗಿಸಬೇಕು. ಧೂಮ ಪಾನದನಂತರ ಸುಖೋಷ್ಣಕ್ಷೀರಕ್ಕೆ ಸ್ವಲ್ಪ ಬೆಲ್ಲವನ್ನು ಹಾಕಿ ಕುಡಿಸಬೇಕು. ಇದು ಮೂರು ದೋಷಗಳ ಕಾಸವನ್ನೂ ಹೋಗಲಾಡಿಸುತ್ತದೆ.

ಆನೂಪ ಪ್ರದೇಶದ ಕೋಳಿ, ಆಡು ಮತ್ತು ಜಲಚರಪ್ರಾಣಿಗಳ ಮಾಂಸ, ಮೀನು, ಶಾಲಿ, ಯವೆ, ಗೋಧೂಮ, ಷಷ್ಟಿಕಗಳ ಆಹಾರ, ಮಾಷ, ಶೂಕ ಧಾನ್ಯ, ಶಿಂಬೀಧಾನ್ಯಗಳ ಯೂಷಗಳು ಹಿತವಾದುವು. ಯವಾನೀ, ಪಿಪ್ಪಲೀ, ಬಿಲ್ವದ ತಿರುಳು, ನಾಗರ, ಚಿತ್ರಕ, ರಾಸ್ನೆ, ಜೀರಿಗೆ, ಒಂದೆಲೆಹೊನ್ನೆ, ಪಲಾಶ,

---

೧. ವಿಡಂಗಂನಾಗರಂರಾಸ್ನಾ ಪಿಪ್ಪಲೀಹಿಂಗುಸೈಂಧವಮ್ ।
ಭಾರ್ಙೀಕ್ಷಾರಶ್ಚತಚ್ಚೂರ್ಣಂ ಪಿಬೇದ್ವಾ ಘೃತಮಾತ್ರಯಾ ॥
ಸಕಫೇಽನಿಲಜೇ ಕಾಸೇ ಶ್ವಾಸಹಿಕ್ಕಾ ಹತಾಗ್ನಿಷು ॥

ಶಟೀ ಮತ್ತು ಪುಷ್ಕರಮೂಲಗಳನ್ನು ಕ್ವಾಥಮಾಡಿ ಸ್ನಿಗ್ಧಾಮ್ಲಲವಣಗಳನ್ನು ಸೇರಿಸಿದ ಪೇಯವು ವಾತಕಾಸವನ್ನು ಗುಣಪಡಿಸುತ್ತದೆ. ಈ ಪೇಯವು ಕಟೀಹೃತ್ಪಾರ್ಶ್ವಕೋಷ್ಠವಾರ್ಗ ರೋಗಗಳನ್ನೂ ಶ್ವಾಸ ಮತ್ತು ಬಿಕ್ಕಳಿಕೆಗಳನ್ನೂ ಹೋಗಲಾಡಿಸುತ್ತದೆ. ದಶಮೂಲಕಷಾಯ ಅಥವಾ ಬೃಹತ್ಪಂಚಮೂಲಕಷಾಯಕ್ಕೆ ಸ್ವಲ್ಪ ಬೆಲ್ಲವನ್ನು ಬೆರಸಿ ಕುಡಿಸಬೇಕು. ಮತ್ಸ್ಯ, ಕುಕ್ಕುಟ, ಹಂದಿಗಳ ಮಾಂಸಕ್ಕೆ ತುಪ್ಪ, ಸೈಂಧವಲವಣಗಳನ್ನು ಸೇರಿಸಿರುವ ಪೇಯವು ವಾತಕಾಸ ರೋಗಿಗೆ ಹಿತಕರವಾದುದು.

ಚಕ್ರೋತಸೊಪ್ಪು, ಕಾಕಮಾಚೀ, ಮೂಲಂಗಿ, ಅಣ್ಣೆಸೊಪ್ಪು, ತೈಲ ಮುಂತಾದ ಸ್ನೇಹದ್ರವ್ಯಗಳು, ಹಾಲು, ಕಬ್ಬಿನ ರಸ, ಗೌಡಿಕವೆಂಬ ಆಸವ, ಮೊಸರು, ಆರನಾಳ, ದಾಳಿಂಬೆ, ಮಾಗಿರುವ ಬೆಟ್ಟನೆಲ್ಲೀಕಾಯಿ, ತಿಳಿಮದ್ಯ ಮತ್ತು ಸ್ವಾದು ಅಮ್ಲಲವಣರಸಗಳು ವಾತಕಾಸಿಗೆ ಪಥ್ಯಗಳು.

ಶ್ಲೇಷ್ಮಯುಕ್ತವಾದ ಪಿತ್ತಕಾಸವಿರುವ ರೋಗಿಗೆ ತುಪ್ಪ ಕೂಡಿರುವ ಮದನ ಮಧುಕ ಕಾಶ್ಮರೀ ಕ್ವಾಥದಿಂದ ವಮನಮಾಡಿಸಬೇಕು. ದೋಷವು ಹೋದನಂತರ ಶೀತ ಮತ್ತು ಮಧುರ ಆಹಾರಗಳನ್ನು ಸೇವಿಸಬೇಕು. ಪಿತ್ತಕಾಸಿಗೆ ಶ್ಲೇಷ್ಮವು ತೆಳ್ಳಗೆ ಬರುತ್ತಿದ್ದರೆ ಮಧುರದ್ರವ್ಯಯುಕ್ತತ್ರಿವೃತ್ತಿನಿಂದಲೂ, ಶ್ಲೇಷ್ಮವು ಗಟ್ಟಿಯಾಗಿದ್ದರೆ ತಿಕ್ತಯುಕ್ತತ್ರಿವೃತ್ತಿನಿಂದಲೂ ವಿರೇಚನವಮಾಡಿಸಬೇಕು. ಕಫವು ತೆಳ್ಳಗಿದ್ದರೆ ಸ್ನಿಗ್ಧಶೀತವಾದ ಆಹಾರ ಅಥವಾ ಗಟ್ಟಿಯಾಗಿದ್ದರೆ ರೂಕ್ಷಶೀತವಾದ ಆಹಾರ ಮತ್ತು ಲೇಹ್ಯಗಳನ್ನೂ ಸೇವಿಸಬೇಕು. ಪಿತ್ತದಲ್ಲಿ ಸಕ್ಕರೆ, ಶ್ರೀಗಂಧ, ದ್ರಾಕ್ಷಾ, ಅತಿಮಧುರ, ಧಾತ್ರೀ, ನೈದಿಲೆಗೆಡ್ಡೆಗಳ ಚೂರ್ಣವನ್ನೂ, ಕಫಯುಕ್ತವಾಗಿದ್ದರೆ ಇದರೊಂದಿಗೆ ಮುಸ್ತಾಮರಿಚಗಳನ್ನೂ, ವಾತಯುಕ್ತವಾಗಿದ್ದರೆ ತುಪ್ಪವನ್ನೂ ಸೇರಿಸಿಕೊಡಬೇಕು. ತ್ವಗೇಲಾದಿ[೧] ಚೂರ್ಣವನ್ನು

---

೧. ತ್ವಗೇಲಾವ್ಯೋಷಮೃದ್ವೀಕಾ ಪಿಪ್ಪಲೀ ಮೂಲಪೌಷ್ಕರೈಃ ।
ಲಾಜಾಮುಸ್ತಾಶಟೀರಾಸ್ನಾ ಧಾತ್ರೀಫಲವಿಭೀತಕೈಃ ॥
ಶರ್ಕರಾಕ್ಷೌದ್ರಸರ್ಪಿರ್ಭಿರ್ಲೇಹಃ ಕಾಸವಿನಾಶನಃ ।
ಶ್ವಾಸಂ ಹಿಕ್ಕಾಂ ಕ್ಷಯಂಚೈವ ಹೃದ್ರೋಗಂ ಚ ಪ್ರಣಾಶಯೇತ್ ॥
ಚ.ಚಿ.ಅ.೧೮

ಅಥವಾ ಪಿಪ್ಪಲ್ಯಾದಿಲೇಹ್ಯವನ್ನು[೧] ತಿನ್ನಿಸಬಹುದು.

ಆಹಾರಕ್ಕಾಗಿ ಮಧುರರಸ ಸೇರಿದ ಜಾಂಗಲಮಾಂಸರಸ ಅಥವಾ ಸಾವೆ, ಕೋದ್ರವ (ಹಾರಕ), ಮುದ್ಗವೇ ಮುಂತಾದುವುಗಳ ಯೂಷ ಮತ್ತು ಸ್ವಲ್ಪ ಕಹಿಯಾದ ತರಕಾರಿಗಳನ್ನು ಉಪಯೋಗಿಸಬೇಕು. ಶ್ಲೇಷ್ಮವು ಗಟ್ಟಿಯಾಗಿದ್ದರೆ ಮಧುಮಿಶ್ರ ತಿಕ್ತದ್ರವ್ಯಗಳನ್ನೂ, ತೆಳ್ಳಗೆ ಇದ್ದರೆ ಮಾಂಸರಸ ಮಿಶ್ರ ಶಾಲಿ ಅಥವಾ ಷಷ್ಟಿಕ ಅನ್ನವನ್ನು ತಿನ್ನಿಸಬೇಕು. ಅನುಪಾನಕ್ಕೆ ಸಕ್ಕರೆಪಾನಕ, ದ್ರಾಕ್ಷಪಾನಕ, ಕಬ್ಬಿನರಸ, ಹಾಲುಗಳನ್ನು ಕೊಡಬೇಕು.

**ಸರ್ವಂ ಚ ಮಧುರಂ ಶೀತಮವಿದಾಹಿ ಪ್ರಶಸ್ಯತೇ ।**

ಮಧುರ, ಶೀತ ಮತ್ತು ಅವಿದಾಹಿಯಾದ ಎಲ್ಲಾ ಆಹಾರಗಳೂ ಪಥ್ಯವಾದುವು.

ತೃಣಪಂಚಮೂಲ, ಹಿಪ್ಪಲಿ ಮತ್ತು ದ್ರಾಕ್ಷೆಗಳ ಶೃತಶೀತ ಕಷಾಯಕ್ಕೆ ಹಾಲು, ಜೇನು ಮತ್ತು ಸಕ್ಕರೆಗಳನ್ನು ಸೇರಿಸಿ ಕುಡಿಯುವುದರಿಂದ ಪಿತ್ತಕಾಸವು ಶಮನವಾಗುವುದು.

ಬಲಿಷ್ಠನಾದ ಕಫಕಾಸ ರೋಗಿಗೆ ಮೊದಲು ವಮನಮಾಡಿಸಬೇಕು. ಯವೆಯಅನ್ನ, ಕಫಹರವಾದ ಕಟುರೂಕ್ಷೋಷ್ಣದ್ರವ್ಯಗಳಿಂದ ಅವನನ್ನು ಪಚರಿಸಬೇಕು. ಸುಲಭವಾಗಿ ಜೀರ್ಣವಾಗುವ ಅನ್ನದೊಂದಿಗೆ ಪಿಪ್ಪಲಿ ಮತ್ತು ಯವಕ್ಷಾರ ಸೇರಿರುವ ಹುರಳಿಯ ಕಟ್ಟನ್ನೂ, ಮೂಲಂಗಿಯನ್ನೂ, ಕಟುರಸದ್ರವ್ಯಗಳನ್ನೂ ಕೊಡಬೇಕು. ಜಾಂಗಲಮಾಂಸ, ಬಿಲೇಶಯ (ಬಿಲಗಳಲ್ಲಿ ವಾಸಿಸುವ) ಪ್ರಾಣಿಗಳ ಮಾಂಸ, ತಿಲ, ಸರ್ಷಪತೈಲಗಳ ಆಹಾರ, ಜೇನುತುಪ್ಪ, ಅಮ್ಲರಸ, ಬಿಸಿನೀರು, ಮಜ್ಜಿಗೆ, ಜೀರ್ಣಮದ್ಯಗಳ ಅನುಪಾನಗಳು ಹಿತಕಾರಿಗಳು. ಪುಷ್ಕರಮೂಲ, ಕಕ್ಕೆಬೇರು, ಪಟೋಲಗಳನ್ನು ಸೇರಿಸಿ ಶೀತಕಷಾಯ ಮಾಡಿ ಜೇನುತುಪ್ಪವನ್ನು ಸೇರಿಸಿ ಆಹಾರಕಾಲದಲ್ಲಿ ಸೇವಿಸಬೇಕು. ಹಿಪ್ಪಲಿಯನ್ನು ತಿಲತೈಲದಲ್ಲಿ ಹುರಿದು ಒಂದು ಕರ್ಷ ಕಲ್ಕಮಾಡಿ ಕಲ್ಲುಸಕ್ಕರೆ ಸೇರಿಸಿ

---

೧. ಪಿಪ್ಪಲ್ಯಾಮಲಕಂದ್ರಾಕ್ಷಾಂ ಲಾಕ್ಷಾಂಲಾಜಾಂಸಿತೋಪಲಾಮ್ ।
ಕ್ಷೀರೇ ಪಕ್ತ್ವಾ ಘನಂ ಶೀತಂ ಲಿಹ್ಯಾತ್ ಕ್ಷೌದ್ರಾಷ್ಟಭಾಗಿಕಮ್ ॥
ಚ.ಚಿ.ಅ. ೧೮

ಹುರಳಿಕಟ್ಟಿನೊಡನೆ ಕೊಡಲು ಕಫಕಾಸ ಗುಣವಾಗುವುದು. ವಾತಕಫಕಾಸದಲ್ಲಿ ದಶಮೂಲಾದಿಘೃತವನ್ನು ಪೇಯಾನುಪಾನದೊಂದಿಗೆ ಕೊಡಬೇಕು. ಈ ಘೃತವು ವಾತಕಫ ಶ್ವಾಸಗಳಲ್ಲೆಲ್ಲಾ ಉಪಯೋಗವಾಗುವುದು. ವಾತಕಾಸಿಗಳಿಗೆ ಹೇಳಿರುವ ಧೂಮಗಳೇ ಕಫಕಾಸಿಗೂ ಹಿತ. ಅನುಬಂಧ ದೋಷವನ್ನು ಮೊದಲು ಹೋಗಲಾಡಿಸಬೇಕು.

**ಆರ್ದ್ರೇ ವಿರೂಕ್ಷಣಂ ಶುಷ್ಕೇ ಸ್ನಿಗ್ಧಂ ವಾತಕಫಾತ್ಮಕೇ ।**
**ಕಾಸೇಽನ್ನಪಾನಂ ಕಫಜೇ ಸಪಿತ್ತೇ ತಿಕ್ತಸಂಯುತಮ್ ॥**

ವಾತಕಫಕಾಸವು ಆರ್ದ್ರವಾಗಿದ್ದರೆ ರೂಕ್ಷವಾದ ; ಶುಷ್ಕವಾಗಿದ್ದರೆ ಸ್ನಿಗ್ಧವಾದ ಅನ್ನಪಾನಗಳನ್ನು ಕೊಡಬೇಕು. ಪಿತ್ತಸಹಿತವಾದ ಕಫಕಾಸದಲ್ಲಿ ತಿಕ್ತಯುತ ಆಹಾರಗಳನ್ನು ಕೊಡಬೇಕು.

ಕ್ಷತಕಾಸವನ್ನು ಅಪಾಯಕಾರಿಯೆಂದು ತಿಳಿದು ಅದನ್ನು ಜಾಗ್ರತೆಯಾಗಿ ಚಿಕಿತ್ಸಿಸಬೇಕು. ಬಲಮಾಂಸಗಳನ್ನು ವೃದ್ಧಿಪಡಿಸುವ ಜೀವನೀಯ ದ್ರವ್ಯಗಳಿಂದಲೂ, ವಿವಿಧ ಅನ್ನಪಾನಗಳಿಂದಲೂ ಉರಃಕ್ಷತ ಪೀಡಿತನನ್ನು ಉಪಚರಿಸಬೇಕು.೧ ಪಿಪ್ಪಲ್ಯಾದಿಲೇಹವನ್ನು ತಿನ್ನಿಸಬೇಕು. ಕ್ಷತಕಾಸಿಗಳು ಪಿತ್ತಕಾಸಿಗಳಂತೆಯೇ ಆಹಾರಗಳನ್ನು ಸೇವಿಸಬೇಕು. ರೋಗಿಗೆ ಸಂಸರ್ಗದೋಷಗಳಿದ್ದರೆ ದೋಷವಿಶೇಷ ಚಿಕಿತ್ಸೆಯನ್ನು ನಡೆಸಬೇಕು. ವಾತಪಿತ್ತಗಳಿಂದ ಮೈ ಒಡತವಿದ್ದರೆ ಘೃತಾಭ್ಯಂಗವನ್ನೂ, ಕೇವಲ ವಾತವಿದ್ದರೆ ವಾತಘ್ನ ತೈಲಾಭ್ಯಂಗವನ್ನೂ, ಹೃತ್ಪಾರ್ಶ್ವಶೂಲೆಗಳಿಗೆ ಜೀವನೀಯ ಘೃತಪಾನವನ್ನೂ ಮಾಡಿಸಬೇಕು. ಅಗ್ನಿಬಲವಿರುವವನಿಗೆ ಉರಃಕ್ಷತದಿಂದ ವಾತವೃದ್ಧಿಯಾಗಿ

---

೧. ಪಿಪ್ಪಲೀಮಧುಕಂ ಪಿಷ್ಟಂ ಕಾರ್ಷಿಕಂ ಸಸಿತೋತ್ಪಲಮ್ ।
ಪ್ರಾಸ್ಥಿಕಂಗವ್ಯಮಾಜಂ ಚ ಕ್ಷೀರಮಿಕ್ಷುರಸಸ್ತಥಾ ॥
ಯವಗೋಧೂಮಮೃದ್ವೀಕಾ ಚೂರ್ಣಮಾಮಲಕಾದ್ರಸಃ ।
ತೈಲಂಚ ಪ್ರಸೃತಾಂಶಾನಿ ತತ್ಸರ್ವಂ ಮೃದುನಾಗ್ನಿನಾ ॥
ಪಚೇಲ್ಲೇಹಂ ಘೃತಕ್ಷೌದ್ರಃ ಯುಕ್ತಃ ಸಕ್ಷತಕಾಸಹಾ ।
ಶ್ವಾಸಹೃದ್ರೋಗಕಾರ್ಶ್ಯೇಷು ಹಿತೋವೃದ್ಧೇಽಲ್ಪರೇತಸಿ ॥ ಚ.ಚಿ.ಅ. ೧೮.

ಉರಿಯಿಂದ ಕೂಡಿದ ರಕ್ತವನ್ನು ಉಗುಳುತ್ತಿದ್ದರೆ, ದೇಹ ಕೃಶವಾಗುತ್ತಿದ್ದರೆ ಮತ್ತು ಅಂಥವನಿಗೆ ಮಾಂಸಾಭ್ಯಾಸವು ಇದ್ದಲ್ಲಿ ಲಾವಾದಿಗಳ ಮಾಂಸರಸವನ್ನು ಕುಡಿಸಬೇಕು. ಬಾಯಾರಿಕೆಗೆ ತೃಣಪಂಚಮೂಲ ಮತ್ತು ಅಜಾಕ್ಷೀರ ಸೇರಿದ ಕ್ಷೀರಪಾಕವನ್ನು ಕುಡಿಸಬೇಕು. ಸ್ರೋತಸ್ಸುಗಳಿಂದಲೂ ಮುಖದಿಂದಲೂ ರಕ್ತ ಬರುತ್ತಿದ್ದರೆ ಹಾಲಿನಿಂದ ತೆಗೆದ ತುಪ್ಪವನ್ನು ಪಾನಮಾಡಿಸಬೇಕು. ಆಯಾಸ, ಕಾರ್ಶ್ಯ ಮತ್ತು ಅಗ್ನಿಮಾಂದ್ಯಗಳು ತೋರಿದರೆ ಕ್ಷೀರೋತ್ಥಘೃತದ ನಸ್ಯ, ಅದೇ ಘೃತದ ಪಾನ ಮತ್ತು ಘೃತಮಿಶ್ರಿತ ಯವಾಗೂ ಸೇವನೆಗಳು ಹಿತ ವಾಗುವುವು. ಸ್ತಂಭ ಮತ್ತು ಆಯಾಮಗಳಿದ್ದರೆ ಅವನಿಗೆ ಇಪ್ಪತ್ತುನಾಲ್ಕು ಘಂಟೆಗಳಲ್ಲಿ ಜೀರ್ಣವಾಗುವಷ್ಟು ಪ್ರಮಾಣದಲ್ಲಿ— (ಹುಕತೀ ಮಾತ್ರಾ) ಘೃತ ಪಾನಮಾಡಿಸಬೇಕು. ರಕ್ತಪಿತ್ತಕ್ಕೆ ವಿರುದ್ಧವಲ್ಲದ ವಾತರೋಗಚಿಕಿತ್ಸೆಯನ್ನಾ ದರೂ ಮಾಡಿಸಬೇಕು. ಉರಃಕ್ಷತದೋಷ (ವ್ರಣ) ಹೋಗಿ ಕಫವೃದ್ಧಿಯಿಂದ ಎದೆಯೊಡೆವಂತಾಗುವ ಸಂಭವವಿದ್ದಲ್ಲಿ ಅವನಿಗೆ ಮೇದೆ, ಮಹಾಮೇದೆ, ಅತಿ ಮಧುರ, ಕಳ್ಳಂಗಡಲೆ ಮತ್ತು ಆರಗುಗಳನ್ನು ಅರೆದು ಕಲ್ಕಮಾಡಿ ರೇಷ್ಮೆ ಬಟ್ಟೆಗೆ ಲೇಪಿಸಿ ವರ್ತಿಗಳನ್ನು ಮಾಡಿ ಧೂಮಪಾನ ಮಾಡಿಸಬೇಕು. ಜೀವ ನೀಯ ಘೃತವನ್ನು ಕುಡಿಸಬೇಕು. ಅಥವಾ ಮಣಿಶಿಲೆ, ಮುತ್ತುಗದ ಬೀಜ, ನಾರಂಬೇಳೆ, ಬಿದಿರುಪ್ಪು ಮತ್ತು ಶುಂಠಿಗಳ ಕಲ್ಕವನ್ನು ರೇಷ್ಮೆ ಬಟ್ಟೆಗೆ ಲೇಪಿಸಿ ತುಪ್ಪವನ್ನು ಸವರಿ ವರ್ತಿಮಾಡಿ ಧೂಮಪಾನಮಾಡಿಸಿ ಕಬ್ಬಿನರಸ ಅಥವಾ ಬೆಲ್ಲದ ಪಾನಕವನ್ನು ಕುಡಿಸಬೇಕು. ಇದೇ ರೀತಿಯಲ್ಲಿ ಮಣಿಶಿಲೆ ಮತ್ತು ಹಸಿ ಆಲದ ಮೊಗ್ಗುಗಳನ್ನು ಅರೆದು ತುಪ್ಪ ಸೇರಿಸಿ ಧೂಮಪಾನಕ್ಕೆ ಕೊಟ್ಟು ತಿತ್ತಿರಿಮಾಂಸರಸವನ್ನು ಭೋಜನ ಮಾಡಿಸಬೇಕು.

ಕ್ಷಯಕಾಸವು ತ್ರಿದೋಷಜ ಎಲ್ಲಾ ಲಕ್ಷಣಗಳೂ ಸ್ಪಷ್ಟವಾಗಿ, ದೌರ್ಬಲ್ಯವು ಇದ್ದಲ್ಲಿ ಅಂತಹ ರೋಗಿಯು ಚಿಕಿತ್ಸೆಗೆ ಅನರ್ಹನು. ಅವನಿಗೆ ಶರೀರದ ಬಲ ಹೆಚ್ಚಾಗಿದ್ದು ರೋಗವು ಹೊಸದಾಗಿದ್ದರೆ ಗುಣವಾಗುವ ಭರವಸೆಯನ್ನು ಕೊಡದೆ ಚಿಕಿತ್ಸಿಸಬೇಕು.

ಅಗ್ನಿ ವೃದ್ಧಿಪಡಿಸಿ ಬೃಂಹಣ ಮಾಡಿಸಬೇಕು. ದೋಷಾಧಿಕ್ಯವಿದ್ದರೆ ಮೃದುಸ್ನೇಹ ವಿರೇಚನ ಮಾಡಿಸಬೇಕು. ದ್ರಾಕ್ಷೆ, ಲೋಧ್ರಗಳ ಕ್ವಾಥಕ್ಕೆ

ವಿದಾರಿ ಸ್ವರಸ ಮತ್ತು ಘೃತಗಳನ್ನು ಸೇರಿಸಿ ಕಕ್ಕೆಚಿಕ್ಕೆ ಮತ್ತು ತಿಗಡೆಗಳ ಕಲ್ಕವನ್ನು ಹಾಕಿ ಸಿದ್ಧಪಡಿಸಿದ ಘೃತವು ಮೃದುವಿರೇಚನ ಮಾಡಿಸುವುದು. ಕಫಪಿತ್ತಗಳು ಕ್ಷೀಣವಾಗಿ ಧಾತುಗಳು ನಶಿಸಿದ್ದರೆ ಬಲಾಘೃತವನ್ನೂ ಮೂತ್ರದ ವೈವರ್ಣ್ಯ, ಮೂತ್ರಕೃಚ್ಛ್ರಗಳಿದ್ದರೆ ವಿದಾರೀ ಘೃತವನ್ನೂ ಹಾಲನ್ನೂ ಕುಡಿಸಬೇಕು. ಶಿಶ್ನ, ಗುದ, ವಂಕ್ಷಣ ಮತ್ತು ಶ್ರೋಣಿಗಳು ಊದಿಕೊಂಡು ನೋಯುತ್ತಿದ್ದರೆ ಘೃತಮಂಡ (ತುಪ್ಪದ ಮೇಲಿನ ತಿಳಿದ್ರವ) ಜೇನುತುಪ್ಪಗಳನ್ನು ಸೇರಿಸಿ ಅನುವಾಸನ ಮಾಡಿಸಬೇಕು. ಜಾಂಗಲಮಾಂಸ, ಬಿಲೇಶಯ, ಪ್ರಸಹ (ಕಿತ್ತು ತಿನ್ನುವ) ಪ್ರಾಣಿಗಳ ಮಾಂಸಗಳನ್ನು ತಿನ್ನಿಸಬೇಕು. ಉಷ್ಣವೀರ್ಯ ಮತ್ತು ಪ್ರಮಾಥಿಗಳಾದುದರಿಂದ ಇವು ಸ್ರೋತಸ್ಸುಗಳಿಂದ ಕಫವನ್ನು ಹೊರ ಹಾಕುತ್ತವೆ. ಇದರಿಂದ ಸ್ರೋತಸ್ಸುಗಳು ಶುದ್ಧವಾಗಿ ಅವುಗಳಲ್ಲಿ ರಸವು ಸರಿಯಾಗಿ ಸಂಚರಿಸಿ ಶರೀರಪುಷ್ಟಿಗೊಳ್ಳುತ್ತದೆ. ಸ್ನಿಗ್ಧಘೃತ, ಲೇಹ್ಯಗಳನ್ನು ಉಪಯೋಗಿಸಬೇಕು.

ಮುಳ್ಳುಹಂದಿ ಮುಳ್ಳಿನ ಭಸ್ಮ, ನವಿಲಿನ ಕಾಲು ಮೂಳೆಯ ಭಸ್ಮ ಇವನ್ನು ಪ್ರತ್ಯೇಕವಾಗಿ ತುಪ್ಪ ಮತ್ತು ಜೇನುತುಪ್ಪಗಳೊಂದಿಗೆ ಸೇವಿಸುವುದರಿಂದ ಕಾಸಶ್ವಾಸಗಳು ನಾಶವಾಗುತ್ತವೆ. ಏರಂಡಪತ್ರಕ್ಷಾರ, ತ್ರಿಕಟು, ತಿಲ ತೈಲ ಮತ್ತು ಬೆಲ್ಲಗಳನ್ನು ಕೂಡಿಸಿ ಅಥವಾ ಹರಳೆಲೆ ಮತ್ತು ತುಳಸೀಪತ್ರಕ್ಷಾರವನ್ನು ತ್ರಿಕಟು, ತಿಲತೈಲ ಮತ್ತು ಬೆಲ್ಲಗಳನ್ನು ಕೂಡಿಸಿ ತಿನ್ನಿಸುವುದರಿಂದ ಕ್ಷಯಕಾಸವು ಹೋಗುವುದು.

ಕ್ಷತಕಾಸಿಗೆ ಹಿತವಾದ ಧೂಮವನ್ನು ಕ್ಷಯಕಾಸಿಗೂ ಕೊಡಬೇಕು. ರೋಗದ ಆಯಾ ಅವಸ್ಥೆಗೆ ತಕ್ಕಂತೆ ದೀಪನ, ಬೃಂಹಣ ಮತ್ತು ಸ್ರೋತಶ್ಶೋಧನ ಔಷಧಗಳನ್ನು ಕೊಟ್ಟು ಉತ್ತರೋತ್ತರ ಬಲಿಷ್ಠವಾದ ವಾತ, ಪಿತ್ತ, ಕಫ, ಕ್ಷತ ಮತ್ತು ಕ್ಷಯಕಾಸಗಳನ್ನು ಚಿಕಿತ್ಸಿಸಬೇಕು.

**ಕಾಸಃ**

- **ವಾತ**
  - ಸ್ನೇಹಃ—ಪೇಯಾದಿಃ
    - ಘೃತವಸ್ತಿಃ
    - ಸ್ನಾನಾದಿಃ
  - ಶುಷ್ಕೇ—ಭೋಜನೋತ್ತರಂ ಪಯಃಸರ್ಪಿರುಪನಾಹಶ್ಚ
  - ಸಕಫೇ ವಾ ಸಪಿತ್ತೇ ಸ್ನೇಹವಿರೇಕಃ, ಸಕ್ಷೌದ್ರಚೂರ್ಣಲೇಹಾಃ
  - ಪ್ರತಿಶ್ಯಾಯಾದಿಷು ತೀಕ್ಷ್ಣಧೂಮಃ
    - ಗ್ರಾಮ್ಯಾನೂಪೌದಕಮಾಂಸಂ,
  - ಪ್ರಸನ್ನಾ, ಷಷ್ಟಿಕಪೇಯಾ ಯೂಷಾದಾಯಃ
- **ಪಿತ್ತ**
  - ಸಕಫೇ ವಮನಂ
  - ಸಮಧುರಶೀತಾಹಾರಃ
  - ತನುಕಫೇ ತ್ರಿವೃನ್ಮಧುರವಿರೇಚನಂ
  - ಘನಕಫೇ ತ್ರಿವೃತ್ತಿಕ್ತವಿರೇಚನಂ
  - ತನುಕಫೇ ಸ್ನಿಗ್ಧಶೀತಂ } ಭೋಜನಂ
  - ಘನಕಫೇ ರೂಕ್ಷಶೀತಂ } ಭೋಜನಂ
  - ಸಕ್ಷೌದ್ರತಿಕ್ತಲೇಹಾಃ
  - ತೃಣಪಂಚಮೂಲಕ್ಷೀರಮ್
- **ಕಫ**
  - ವಮನಂ
  - ಕಟುರೂಕ್ಷೋಷ್ಣಾನ್ನಂ
  - ಕುಲತ್ಥಾನುಪಾನಂ
  - ದಶಮೂಲಘೃತಂ
  - ವಾತಘ್ನಧೂಮಃ
- **ಕ್ಷತ**
  - ಪಿತ್ತವತ್
  - ಕ್ಷೀರಸರ್ಪಿಃ
  - ಸಂಸರ್ಗೇ ದೋಷವಿಶೇಷಾತ್ ಉಪಕ್ರಮಃ
  - ಅಭ್ಯಂಗಃ
  - ಸ್ನೇಹಪಾನಂ
  - ಸಂತರ್ಪಣಂ
  - ಘೃತನಸ್ಯಂ
  - ಕ್ಷೀರೋತ್ತರಯವಾಗೂಃ
  - ಮಹತೀಸರ್ಪಿಃ
  - ಕಫವೃದ್ಧೇ ಧೂಮಃ
- **ಕ್ಷಯ**
  - ಬಲಿನಃ ಮೃದುಸ್ನೇಹವಿರೇಚನಂ
  - ದೀಪನಂ, ಬೃಂಹಣಂ
  - ಸಘೃತಂಪಯಃಪಾನಂ
  - ಗುಹ್ಯಶೂನೇಽನುವಾಸನಂ
  - ಜಾಂಗಲಾಮಿಷಂ
  - ಸಿದ್ಧಲೇಹಾಃ

# ಹಿಕ್ಕಾಶ್ವಾಸನಿದಾನ

ವಿದಾಹಿ, ಗುರು, ವಿಷ್ಟಂಭಿ, ರೂಕ್ಷ ಮತ್ತು ಅಭಿಷ್ಯಂದಿ ಆಹಾರಗಳನ್ನು ತಿನ್ನುವುದರಿಂದಲೂ, ಶೀತಲವಾದ ಸ್ಥಳಗಳಲ್ಲಿ ವಾಸಿಸುವುದು. ಧೂಮ, ಧೂಳು, ಬಿಸಲುಗಳ ಸೇವನೆ, ವ್ಯಾಯಾಮ, ಭಾರ, ಮಾರ್ಗಾಯಾಸ, ವೇಗಧಾರಣ ಮತ್ತು ಲಂಘನ ಇವುಗಳಿಂದ ಪ್ರಕೋಪಹೊಂದಿದ ಉದಾನಯುಕ್ತ ಪ್ರಾಣ ವಾಯುವು ಹಿಕ್ಕಾ, ಶ್ವಾಸ ಮತ್ತು ಕಾಸಗಳಿಗೆ ಕಾರಣವಾಗುತ್ತದೆ. ಕಾರಣ ಒಂದೇ ಆದರೂ ದೋಷಭೇದದಿಂದ ಕಾಸವು ಐದು ಬಗೆ. ಹಿಕ್ಕಾಶ್ವಾಸಗಳು ಕಫ ಮತ್ತು ವಾತದೋಷಗಳಿಂದ ಕೂಡಿವೆ. ಇವೆರಡೂ ಪಿತ್ತಸ್ಥಾನದಲ್ಲಿ ಹುಟ್ಟು ವುವು ಮತ್ತು ಹೃದಯ ಹಾಗು ರಸಾದಿಧಾತುಗಳನ್ನು ಶೋಷಿಸುವುವು. ಇವೆರ ಡಕ್ಕೂ ಚಿಕಿತ್ಸೆಯು ಸರಿಯಾಗಿ ನಡೆಯದಿದ್ದರೆ ಜಾಗ್ರತೆಯಾಗಿ ಪ್ರಾಣಹಾನಿ ಯನ್ನು ಮಾಡುವುವು.

## ಹಿಕ್ಕಾ

ಮೇಲೆ ಹೇಳಿದ ಕಾರಣಗಳಿಂದ ಪ್ರಕುಪಿತ ವಾತವು ಯಕೃತ್, ಪ್ಲೀಹ ಮತ್ತು ಅಂತ್ರ ಇವುಗಳನ್ನು ಮೇಲ್ಮುಖವಾಗಿ ಸೆಳೆಯುತ್ತಾ ಪ್ರಾಣ, ಅನ್ನ ಮತ್ತು ಉದಕವಹಸ್ರೋತಸ್ಸುಗಳನ್ನು ಸೇರಿ ಹಿಗ್, ಹಿಗ್ ಎಂದು ಶಬ್ದ ಮಾಡುತ್ತಾ ಬಾಯಿಂದ ಹೊರಕ್ಕೆ ಬರುವುದು. ಇದರಿಂದ ಈ ವಿಕಾರಕ್ಕೆ ಹಿಕ್ಕಾ ಎಂದು ಹೆಸರು ಬಂದಿದೆ. ಇದು ಐದು ಪ್ರಕಾರ (೧) ಅನ್ನಜಾ, (೨) ಯಮಳಾ, (೩) ಕ್ಷುದ್ರಾ, (೪) ಗಂಭೀರಾ ಮತ್ತು (೫) ಮಹತೀ.

ಗಂಟಲು ಮತ್ತು ಎದೆಗಳಲ್ಲಿ ಗುರುತ್ವ, ಬಾಯಿ ಒಗರಾಗಿ ಇರುವುದು ಮತ್ತು ಉದರದಲ್ಲಿ ಆಟೋಪ ಹಿಕ್ಕಾದ (ಬಿಕ್ಕಳಿಕೆಯ) ಪೂರ್ವರೂಪವೆಂದು ತಿಳಿಯಬೇಕು.

**ಅನ್ನಜಾ**—ಆತುರದಿಂದ ಆಹಾರವನ್ನು ತಿನ್ನುವುದು ಅಥವಾ ಆಹಾರವು ಗಟ್ಟಿಯಾಗಿರುವುದು, ಇಲ್ಲವೇ ಕಟುತರವಾದ ಆಹಾರವನ್ನು ತೆಗೆದುಕೊಳ್ಳು ವುದು ಇವುಗಳಿಂದ ವಾಯು ಸರಿಯಾದ ವಿಸ್ತರಣವಿಲ್ಲದೆ ಕಷ್ಟದಿಂದ ಊರ್ಧ್ವಗ

ವಾಗಿ ಬರುವುದು. ಅನ್ನಜ ಹಿಕ್ಕಾದಲ್ಲಿ ಒಮ್ಮೊಮ್ಮೆ ಸ್ವಲ್ಪ ಸೀನುವುದುಂಟು. ಈ ಬಿಕ್ಕಳಿಕೆಯಿಂದ ರೋಗಿಗೆ ಮರ್ಮ ಅಥವಾ ಇಂದ್ರಿಯಗಳಿಗೆ ಬಾಧೆಯಿರುವುದಿಲ್ಲ. ಭೋಜನದನಂತರ ಈ ವಿಧ ಬಿಕ್ಕಳಿಕೆಯು ನಿಂತುಹೋಗುವುದು

**ಚಿರೇಣ ಯಮಳೈರ್ವೇಗೈರಾಹಾರೇಯಾ ಪ್ರವರ್ತತೇ ।**
**ಪರಿಣಾಮೋನ್ಮುಖೇ ವೃದ್ಧಿಂ ಪರಿಣಾಮೇ ಚ ಗಚ್ಛತಿ ॥**
**ಕಂಪಯಂತೀ ಶಿರೋಗ್ರೀವಮಾಧ್ಮಾತಸ್ಯಾತಿ ತೃಷ್ಯತಃ ।**
**ಪ್ರಲಾಪಃ ಛರ್ದ್ಯತೀಸಾರ ನೇತ್ರವಿಪ್ಲುತಜೃಂಭಿಣಃ ॥**
**ಯಮಳಾವೇಗಿನೀ ಹಿಧ್ಮಾ ಪರಿಣಾಮವತೀಚಸಾ ।**

ಅ.ಹೃ.ನಿ. ೪.

**ಯಮಳಾ**—ಈ ಬಿಕ್ಕಳಿಕೆಯು ಆಹಾರ ಜೀರ್ಣವಾಗುವ ಸಮಯದಲ್ಲಿ ಪ್ರಾರಂಭವಾಗಿ ಪೂರ್ತಿ ಪರಿಣಾಮವಾಗುವವರೆಗೂ ವೃದ್ಧಿಹೊಂದಿ ಎರಡೆರಡು ಬಿಕ್ಕಳಿಕೆಗಳು ಜೊತೆಯಲ್ಲಿ ಬರುವುವು. ತಲೆ, ಕುತ್ತಿಗೆಗಳು ಅದುರುವುದು, ಆಧ್ಮಾನ, ಬಾಯಾರಿಕೆ, ಪ್ರಲಾಪ, ಛರ್ದಿ, ಅತಿಸಾರ, ಕಣ್ಣುಗುಡ್ಡೆ ತೇಲುವುದು ಮತ್ತು ಆಕಳಿಕೆಗಳು ಇದರ ಲಕ್ಷಣಗಳು.

**ಕ್ಷುದ್ರಾ**—ಶರೀರಕ್ಕೆ ಆಯಾಸದಿಂದ ವಾತವು ಸ್ವಲ್ಪವಾಗಿಯೇ ವೃದ್ಧಿಯಾಗಿ ಜತ್ರುಮೂಲದಿಂದ ಮೇಲಕ್ಕೆ ಹೊರಡುವುದು. ನಿಧಾನವಾಗಿಯೂ ಮಂದವಾದ ವೇಗದಿಂದಲೂ ಕೂಡಿರುವ ಈ ಬಿಕ್ಕಳಿಕೆಯು ಕಷ್ಟದಾಯಕವಲ್ಲ ಮತ್ತು ಎದೆ, ತಲೆ ಅಥವಾ ಮರ್ಮಗಳನ್ನು ಪೀಡಿಸುವುದಿಲ್ಲ. ಉಸಿರಾಡಿಸುವುದಕ್ಕೂ, ಅನ್ನಪಾನಗಳಿಗೂ ತೊಂದರೆ ಇರುವುದಿಲ್ಲ. ಆಯಾಸದಿಂದ ವೃದ್ಧಿಯಾಗುವುದು. ಊಟಮಾಡಿದ ಕೂಡಲೇ ಕಡಿಮೆಯಾಗುವುದು. ಹೃದಯ, ಕ್ಲೋಮ, ಕಂಠ ಮತ್ತು ಕಾಲುಗಳು ಇದಕ್ಕೆ ಆಶ್ರಯಸ್ಥಾನಗಳು. ಹೆಚ್ಚು ವೇಗವಿಲ್ಲದಿರುವುದರಿಂದ ಇದಕ್ಕೆ ಕ್ಷುದ್ರಾ ಎಂದು ಹೆಸರು ಬಂದಿದೆ.

**ಗಂಭೀರಾ**— ವೇಗವು ನಾಭಿಯಿಂದ ಕಷ್ಟವಾಗಿ ಮೇಲಕ್ಕೆ ಹೊರಡುತ್ತಾ ಗಂಭೀರವಾದ ಬಿಕ್ಕಳಿಕೆಯ ಶಬ್ದವನ್ನುಂಟುಮಾಡುವುದು. ತುಟಿ, ಗಂಟಲು, ನಾಲಿಗೆ ಮತ್ತು ಬಾಯಿಗಳು ಒಣಗುವುವು, ಶ್ವಾಸ, ಪಕ್ಕೆನೋವು ಮುಂತಾದ ಅನೇಕ ಉಪದ್ರವಗಳನ್ನುಂಟುಮಾಡುವುದು.

**ಮಹಾಹಿಕ್ಕಾ**—ಮರ್ಮಗಳನ್ನು (ಬಸ್ತಿ, ಹೃದಯ, ಶಿರಸ್ಸು) ಹಿಂಡಿದಂತೆ ಯಾವಾಗಲೂ ಗಟ್ಟಿಯಾದ ಶಬ್ದದಿಂದ ಹೊರಡುವ ಬಿಕ್ಕಳಿಕೆಗೆ ಮಹತೀ ಎಂದು ಹೆಸರು. ಅತಿಯಾಗಿ ಬಾಯಾರಿಕೆಯಾಗುವುದು; ಮೈಯೆಲ್ಲಾ ನಡುಗುವುದು.

**ಸಾಧ್ಯಾಸಾಧ್ಯ**—ಅಂಗಗಳನ್ನು ಮಡಿಸಿಕೊಂಡಂತೆ ಬಗ್ಗಿಕೊಂಡು ಬಿಕ್ಕುವುದು, ಆ ಸಮಯದಲ್ಲಿ ದೃಷ್ಟಿಯನ್ನು ಮೇಲೆ ಮಾಡಿರುವುದು, ಬಹಳ ಹೊತ್ತು ಎಚ್ಚರ ತಪ್ಪಿರುವುದು, ಕ್ಷೀಣನಾಗಿರುವುದು, ಆಹಾರವನ್ನು ತೆಗೆದುಕೊಳ್ಳುವುದಕ್ಕಾಗದಿರುವುದು ಮತ್ತು ಕೆಮ್ಮುವುದು ಈ ಲಕ್ಷಣಗಳಿದ್ದರೆ ಅಸಾಧ್ಯ. ಗಂಭೀರಾ ಮತ್ತು ಮಹತೀಹಿಕ್ಕಾಗಳು ಸಾಧ್ಯವಾಗುವುದಿಲ್ಲ. ಯಮಳದಲ್ಲಿ ಧಾತು ಮತ್ತು ಇಂದ್ರಿಯಗಳು ಬಲಿಷ್ಠವಾಗಿದ್ದು, ಸತ್ವವೂ ಇದ್ದರೆ ಸಾಧ್ಯ. ಉಳಿದ ಎರಡು ಸುಲಭಸಾಧ್ಯಗಳು. ದೋಷಗಳು ಅತಿಯಾಗಿ ಸೇರಿರುವುದರಿಂದಲೂ ಆಹಾರವನ್ನು ತೆಗೆದುಕೊಳ್ಳದಿರುವುದರಿಂದಲೂ, ಬೇರೆ ವ್ಯಾಧಿಗಳಿಂದಲೂ ಕೃಶನಾಗಿದ್ದರೆ ಅಂತಹವನಿಗೆ ಉಂಟಾದ ಬಿಕ್ಕಳಿಕೆಯೂ, ವೃದ್ಧನ ಬಿಕ್ಕಳಿಕೆ ಮತ್ತು ಅತಿ ವ್ಯವಾಯದಿಂದ ಬಂದ ಬಿಕ್ಕಳಿಕೆ, ಇವು ಸಾಧ್ಯವಾಗುವುದಿಲ್ಲ.

## ಶ್ವಾಸ

ಹಿಕ್ಕಾ ಕಾರಣಗಳೇ ಶ್ವಾಸಕ್ಕೂ ಕಾರಣ. ಕಫದಿಂದ ಕೂಡಿದ ಪ್ರಾಣವಾತವು ಶ್ವಾಸಮಾರ್ಗವನ್ನು ಅಡ್ಡಗಟ್ಟಿ, ತಡೆದು ತಡೆದು ಕಷ್ಟದಿಂದ ಸಂಚರಿಸುವುದಕ್ಕೆ ಶ್ವಾಸ ಅಥವಾ ಉಬ್ಬಸವೆಂದು ಹೆಸರು. ಇದೂ ಸಹ ಐದು ಬಗೆ—(೧) ಮಹಾಶ್ವಾಸ, (೨) ಊರ್ಧ್ವಶ್ವಾಸ, (೩) ಛಿನ್ನಶ್ವಾಸ, (೪) ತಮಕಶ್ವಾಸ ಮತ್ತು (೫) ಕ್ಷುದ್ರಶ್ವಾಸ. ಇವುಗಳಲ್ಲೆಲ್ಲಾ ಶ್ವಾಸವು ಹೆಚ್ಚಾಗಿರುವುದು. ವಾತ ಪ್ರಾಧಾನ್ಯತೆಯಿಂದ ಕ್ಷುದ್ರಶ್ವಾಸವೂ, ಕಫ ಹೆಚ್ಚಾಗುವುದರಿಂದ ತಮಕವೂ, ವಾತಕಫಗಳೊಡನೆ ಪಿತ್ತವೂ ವೃದ್ಧಿಹೊಂದಿದ್ದರೆ ಛಿನ್ನಶ್ವಾಸವೂ, ವಾತವೊಂದೇ ಪ್ರಧಾನವಾಗಿದ್ದರೆ ಊರ್ಧ್ವ ಮತ್ತು ಮಹಾಶ್ವಾಸಗಳೂ ಸಂಭವಿಸುವುವು.

ಶ್ವಾಸ ಉಂಟಾಗುವುದಕ್ಕೆ ಮೊದಲು ಎದೆಯಲ್ಲಿ ಹಿಂಡಿದಂತಾಗುವುದು,

ಉದರದಲ್ಲಿ ಶೂಲೆ, ಆಧ್ಮಾನ ಮತ್ತು ಆಟೋಪಗಳು, ಅರುಚಿ, ಶಂಖಪ್ರದೇಶ ಗಳಲ್ಲಿ ಒಡೆತ ಇವುಗಳು ತೋರಿಬರುವುವು.

**ಮಹಾಶ್ವಾಸ**—ಬಹು ಕಷ್ಟದಿಂದಲೂ, ಮದಿಸಿದ ಗೂಳಿಯು ಉಸಿರು ಬಿಟ್ಟಂತೆ ಸಶಬ್ದದಿಂದ ದೀರ್ಘಶ್ವಾಸ, ತಿಳುವಳಿಕೆಯಿಲ್ಲದಿರುವುದು, ರೆಪ್ಪೆಗಳು ದೊಡ್ಡದಾಗಿ ಕಣ್ಣುಗುಡ್ಡೆಗಳು ಅತ್ತಿತ್ತ ಆಡುತ್ತಿರುವಿಕೆ, ಬಾಯಿ ತೆರೆದಿರುವುದು, ಅರ್ಧರ್ಧವಾಗಿ ಮಾತಾಡುವುದು, ದೀನನಾಗಿರುವುದು, ಶ್ವಾಸಬಿಡುತ್ತಿರುವುದು ದೂರದಿಂದಲೇ ಗೊತ್ತಾಗುವುದು ಇವು ಮಹಾಶ್ವಾಸದ ಲಕ್ಷಣಗಳು.

**ಊರ್ಧ್ವಶ್ವಾಸ**—ಸ್ರೋತಸ್ಸುಗಳಲ್ಲಿ ಶ್ಲೇಷ್ಮತಡೆಯಿಂದ ವಾತ ಪ್ರಕೋಪವಾಗಿ ದೀರ್ಘವಾಗಿ ಕಷ್ಟದಿಂದ ಉಸಿರನ್ನು ಬಿಡುತ್ತಲೂ ಒಳಕ್ಕೆ ಉಸಿರನ್ನು ತೆಗೆದುಕೊಳ್ಳಲಿಕ್ಕಾಗದಿರುವುದು; ಬಾಯಿ ಒಣಗುವುದು ಮತ್ತು ಬಾಧೆಯಿಂದ ಜ್ಞಾನತಪ್ಪುವುದು ಇವು ಊರ್ಧ್ವಶ್ವಾಸದ ಲಕ್ಷಣಗಳು.

**ಛಿನ್ನಶ್ವಾಸ**—ಪ್ರಾಣಗಳನ್ನು ಪೀಡಿಸಿದಂತೆ ಆಗಿ ಕಷ್ಟದಿಂದ ಉಸಿರನ್ನು ಆಡಿಸುವುದು ಅಥವಾ ಆಡಿಸಲಿಕ್ಕಾಗದೆ ಉಸಿರು ತಡೆದಿರುವುದು ಮತ್ತು ಮರ್ಮ ಛೇದವಾದಂತೆ ಬಾಧೆ, ಆನಾಹ, ಸ್ವೇದ, ಮೂರ್ಛೆ, ಬಸ್ತಿಯಲ್ಲಿ ಉರಿ, ಕಣ್ಣು ಗಳಲ್ಲಿ ನೀರು ತುಂಬಿಕೊಂಡಿರುವುದು, ಒಂದು ಕಣ್ಣು ಕೆಂಪಗಿರುವುದು, ಬಾಯಿ ಒಣಗುವುದು, ಮುಖವೈವರ್ಣ್ಯ ಮತ್ತು ಪ್ರಲಾಪ ಇವೆಲ್ಲವೂ ಛಿನ್ನಶ್ವಾಸದ ಲಕ್ಷಣಗಳು.

**ತಮಕಶ್ವಾಸ**—ಪ್ರಕುಪಿತವಾತವು ಕಫದಿಂದ ಪೂರಿತಸ್ರೋತಸ್ಸುಗಳಲ್ಲಿ ತಡೆಯಲ್ಪಟ್ಟು ಪ್ರತಿಲೋಮವಾಗಿ (ವಿರುದ್ಧ ಮಾರ್ಗವಾಗಿ) ಕಂಠ, ಶಿರಸ್ಸು ಗಳಲ್ಲಿ ಕಫವನ್ನು ಸೇರಿಸಿ ಪೀನಸವನ್ನುಂಟುಮಾಡುವುದು. ಇದರಿಂದ ಉಸಿರು ಘುರ್, ಘುರ್ ಎಂದು ಶಬ್ದಮಾಡುವುದು. ವೇಗವು ಹೆಚ್ಚಿ ಪ್ರಾಣಪೀಡೆ ಯಾಗುವುದು. ಕಷ್ಟದಿಂದ ಉಸಿರನ್ನು ಹೊರಬಿಡುವುದು ಮತ್ತು ಸ್ವಲ್ಪವೇ ಒಳಕ್ಕೆ ತೆಗೆದುಕೊಳ್ಳುವುದು, ಮುಖಬೆವರುವುದು, ಆಗಾಗ್ಗೆ ಎಚ್ಚರ ತಪ್ಪುವುದು (ತಮಕ), ಬಾಯಾರಿಕೆ, ಕೆಮ್ಮು, ಕೆಮ್ಮಿದಾಗ ಕಫವು ಬರದೆ ಬಹಳ ಕಷ್ಟ ಪಡುವುದು, ಕಫವು ಬಂದಮೇಲೆ ಸುಖವಾಗುವುದು, ಕುಳಿತಾಗ ಸ್ವಲ್ಪ ಸುಖವೂ ಮಲಗಿದರೆ ಪೀಡೆಯೂ ಇರುವುವು. ಉಷ್ಣದಿಂದ ಸುಖವೆನಿಸುವುದು. ಮೋಢ,

ಮಳೆ, ತಣ್ಣೀರು, ಎದುರುಗಾಳಿ ಮತ್ತು ಶ್ಲೇಷ್ಮಲಗಳಿಂದ ಹೆಚ್ಚುವುದು. ಈ ವಿಧ ಶ್ವಾಸಕ್ಕೆ ತಮಕವೆಂದು ಹೆಸರು. ಇದರೊಂದಿಗೆ ಜ್ವರ, ಮೂರ್ಛಾ, ಉದಾವರ್ತಗಳೂ ಸೇರಿದರೆ **ಸಂತಮಕ**ವೆಂದು ಹೇಳಲ್ಪಡುವುದು. ಅಜೀರ್ಣ, ಧೂಳು, ದುರ್ಗಂಧ, ಮಲಮೂತ್ರಾವರೋಧನಗಳಿಂದುಂಟಾಗುವುದು. ತಮಃಪ್ರವೇಶದಿಂದ ಹೆಚ್ಚುವುದು. ಶೈತ್ಯೋಪಚಾರದಿಂದ ಶಮನ ಹೊಂದುವುದು.

**ಕ್ಷುದ್ರಶ್ವಾಸ**—ಇದು ರೂಕ್ಷತೆ ಮತ್ತು ಆಯಾಸಗಳಿಂದ ಕೋಷ್ಠದಲ್ಲಿ ವಾತವು ಸ್ವಲ್ಪ ಮಾತ್ರ ಹೆಚ್ಚಿ ಶ್ವಾಸವುಂಟಾಗುವುದು ಇದರಿಂದ ಶರೀರಕ್ಕೆ ಹೆಚ್ಚಿನ ತೊಂದರೆ ಏನೂ ಇರುವುದಿಲ್ಲ ಅನ್ನಪಾನಗಳನ್ನು ಸೇವಿಸುವುದಕ್ಕೂ ಕಷ್ಟವಿರುವುದಿಲ್ಲ. ರೂಕ್ಷಾಯಾಸಗಳು ಹೋದರೆ ಶ್ವಾಸವಿರುವುದಿಲ್ಲ.

**ಸಾಧ್ಯಾಸಾಧ್ಯ**—ಕ್ಷುದ್ರಶ್ವಾಸವು ಸಾಧ್ಯ, ದುರ್ಬಲನಿಗೆ ಬಂದ ತಮಕ ಮತ್ತು ಮಹೋರ್ಧ್ವಛಿನ್ನಶ್ವಾಸಗಳು ಅಸಾಧ್ಯ. ಬಲಿಷ್ಠನಿಗೆ ತಮಕವು ಯಾಪ್ಯ.

## ಹಿಕ್ಕಾಶ್ವಾಸಚಿಕಿತ್ಸಾ

ಹಿಕ್ಕಾ ಮತ್ತು ಶ್ವಾಸಗಳ ಉತ್ಪತ್ತಿಗೆ ಕಾರಣಗಳು, ಸ್ಥಾನಗಳು ಮತ್ತು ದೋಷಗಳು ಒಂದೇ ಆಗಿರುವುದರಿಂದ ಚಿಕಿತ್ಸಾಕ್ರಮವೂ ಸಹ ಒಂದೇ ಎಂಬುದಾಗಿ ಅರಿಯಬೇಕು. ಹಿಕ್ಕಾ ಅಥವಾ ಶ್ವಾಸವಿರುವ ರೋಗಿಗೆ ಮೊದಲು ಸ್ನೇಹನವನ್ನು ಮಾಡಿಸಿ ಅನಂತರ ಸ್ವೇದನವನ್ನು ಮಾಡಿಸಬೇಕು. ಎದೆ, ಪಕ್ಕೆ ಮತ್ತು ಹಿಂಭಾಗಗಳಿಗೆ ಲವಣತೈಲವನ್ನು ತಿಕ್ಕಿ, ನಾಡೀ, ಪ್ರಸ್ತರ ಅಥವಾ ಸಂಕರವಿಧಾನದ ಸ್ವೇದವನ್ನು ಮಾಡಿಸುವುದರಿಂದ ಸ್ರೋತಸ್ಸುಗಳಲ್ಲಿ ಅಡಗಿಕೊಂಡಿರುವ ಗಟ್ಟಿಯಾಗಿರುವ ಕಫವು ಕರಗಿ ಕೋಷ್ಠಮಾರ್ಗವನ್ನು ಸೇರುವುದು, ಸ್ರೋತಸ್ಸುಗಳೂ ಮೃದುವಾಗುವುವು, ವಾತಾನುಲೋಮನವೂ ಆಗುವುದು. ಸ್ನಿಗ್ಧಾನ್ನ, ಸ್ನಿಗ್ಧಮಾಡಿರುವ ಆನೂಪ ಮಾಂಸರಸ(ಹಂದಿ, ಮೀನು ಮುಂತಾದುವು)ಗಳ ಭೋಜನವನ್ನು ಮಾಡಿಸಬೇಕು. ಅಥವಾ ಮೊಸರಿನ ತಿಳಿ(ಮಸ್ತು)ಯನ್ನು ಸೇರಿಸಿ ಅನ್ನವನ್ನು ತಿನ್ನಿಸಿ ಮೃದುವಾದ ವಮನವನ್ನು ಕೊಟ್ಟು ವಾಂತಿ ಮಾಡಿಸಬೇಕು. ಇದರಿಂದ ಕರಗಿರುವ ಕಫವು ಸುಲಭವಾಗಿ ಹೊರಗೆ ಬರು

ವುದು. ವಿಶೇಷವಾಗಿ ಕಾಸ, ಛರ್ದಿ, ಹೃದ್ಗ್ರಹ, ಸ್ವರಸಾದವಿರುವವರಿಗೆ ಹಿಪ್ಪಲಿ, ಸೈಂಧವಲವಣ ಮತ್ತು ಚಿಟ್ಟಜೇನುತುಪ್ಪ ಸೇರಿರುವ ಕಲ್ಕವನ್ನು ಕುಡಿಸಿದರೆ ವಾತಕ್ಕೆ ವಿರೋಧವಾಗಿಲ್ಲದ ರೀತಿಯಲ್ಲಿ ಮೃದುವಾಗಿ ಶಾಂತಿಯಾಗುವುದು. ಶ್ವಾಸವು ತಡೆಯಿಲ್ಲದಂತೆ ಸಂಚರಿಸುವುದು. ಹೊಟ್ಟೆಯುಬ್ಬರ, ಉದಾವರ್ತ, ತಮಕಗಳಿದ್ದರೆ ಮಾದಳ, ಪುನರ್ಪುಳಿ, ಹಿಂಗು, ಪೀಲು (ಅಕ್ರೋಟ್ ಭೇದ), ಬಿಡಲವಣಗಳನ್ನು ಸೇರಿಸಿ ಅನ್ನದೊಂದಿಗೆ ಸೇವಿಸಲು ಕೊಡುವುದರಿಂದ ವಾತಾನುಲೋಮನವುಂಟಾಗಿ ರೋಗಿಯು ನೆಮ್ಮದಿಯಾಗುವನು. ಹೀಗೆಯೇ ಪ್ರಾಣವಾಯುವಿನ ಮಾರ್ಗವು ಕಫದಿಂದ ತಡೆಯಲ್ಪಟ್ಟಿರುವಾಗ ಮಾರ್ಗಶುದ್ಧಿಮಾಡಲು ಸೈಂಧವಲವಣ, ಮುರ್ಗಿನಹುಳಿಗಳಿಂದ ಕೂಡಿರುವ ಸುಖೋಷ್ಣವಾದ ಮೃದುವಿರೇಚನವನ್ನು ಕೊಡಬಹುದು.

ಊರ್ಧ್ವ ಮತ್ತು ಅಧೋಮಾರ್ಗಗಳನ್ನು ಶುದ್ಧಿಮಾಡಿದನಂತರ ಇನ್ನೂ ಲೀನವಾಗಿ ನಿಂತಿರುವ ಮಲವನ್ನು ಧೂಮದಿಂದ ಹೋಗಲಾಡಿಸಬೇಕು. ಧೂಮಕ್ಕೆ ಹರಿದ್ರಾದಿ, ಮಧೂಚ್ಛಿಷ್ಟಾದಿ, ಶೃಂಗ್ಯಾದಿಯೋಗಗಳನ್ನು ಉಪಯೋಗಿಸಬಹುದು (ಅರಿಸಿನದ ಎಲೆ,[೧] ಹರಳುಬೇರು, ಅರಗು, ಮಣಿಶಿಲೆ, ದೇವದಾರು, ಹರಿದಳ ಮತ್ತು ಜಟಾಮಾಂಸಿ ಇವುಗಳ ಕಲ್ಕವನ್ನು ವರ್ತಿಮಾಡಿ ಒಣಗಿಸಿಟ್ಟುಕೊಂಡು ಸ್ವಲ್ಪ ತುಪ್ಪವನ್ನು ಸವರಿ ಧೂಮಪಾನಮಾಡಿಸಬೇಕು. ಅಥವಾ ಯವೆ ಮತ್ತು ತುಪ್ಪಗಳನ್ನು ಕಲಸಿ ಧೂಮಪಾನಮಾಡಿಸಬೇಕು. ಜೇನುಮಯಣ,[೨] ರಾಳ, ತುಪ್ಪ ಇವನ್ನಾದರೂ ಅಥವಾ ಹಸುವಿನ ಕೊಂಬು,[೩] ಬಾಲದ ಕೂದಲು ಮತ್ತು ಸ್ನಾಯುಗಳನ್ನು ಸ್ವಲ್ಪ ತುಪ್ಪದಲ್ಲಿ ಕಲಸಿ ಧೂಮಪಾನಮಾಡಿಸಬಹುದು.)

---

೧. ಹರಿದ್ರಾಪತ್ರಮೇರಂಡಮೂಲಂ ಲಾಕ್ಷಾಂ ಮನಃಶಿಲಾಮ್ ।
ಸದೇವದಾರ್ವಲಂ ಮಾಂಸೀಂ ಪಿಷ್ಟ್ವಾ ವರ್ತಿಂ ಪ್ರಕಲ್ಪಯೇತ್ ॥
ತಾಂ ಘೃತಾಕ್ತಾಂ ಪಿಬೇದ್ಧೂಮಂ ಯವೈರ್ವಾಘೃತಸಂಯುತೈಃ ।

೨. ಮಧೂಚ್ಛಿಷ್ಟಂ ಸರ್ಜರಸಂ ಘೃತಂ ಮಲ್ಲಕಸಂಪುಟೇ ॥

೩. ಕೃತ್ವಾಧೂಮಂ ಪಿಬೇಚ್ಛೃಙ್ಗಂವಾಲಂ ವಾ ಸ್ನಾಯುವಾಗವಾಮ್ ।

ಚ.ಚಿ.ಅ. ೧೭

ಹಿಕ್ಕಾ ಅಥವಾ ಶ್ವಾಸಪೀಡಿತನಿಗೆ ಸ್ವರಕ್ಷೀಣ, ಅತೀಸಾರ, ರಕ್ತಪಿತ್ತ, ಮೈಉರಿಗಳ ಅನುಬಂಧವಿದ್ದಲ್ಲಿ ಮಧುರ, ಸ್ನಿಗ್ಧ, ಶೀತ ಆದಿಯಾಗಿ ಉಪಚಾರ ಗಳನ್ನು ಮಾಡಬೇಕು.

**ನ ಸ್ವೇದ್ಯಾಃ ಪಿತ್ತದಾಹಾರ್ತಾ ರಕ್ತಸ್ವೇದಾತಿವರ್ತಿನಃ ।**
**ಕ್ಷೀಣಧಾತುಬಲಾರೂಕ್ಷಾಗರ್ಭಿಣ್ಯಶ್ಚಾಪಿ ಪಿತ್ತಲಾಃ ॥**

ಚ.ಚಿ.ಅ. ೧೭.

ಹಿಕ್ಕಾ ಮತ್ತು ಶ್ವಾಸರೋಗಿಗಳು ಪಿತ್ತದಿಂದ ಪೀಡಿತರೂ, ದಾಹಪೀಡಿತರೂ, ಅತಿಯಾಗಿ ರಕ್ತಸ್ರಾವ, ಅತಿಸ್ವೇದಪೀಡಿತರೂ ಆಗಿದ್ದರೆ, ಧಾತುಕ್ಷೀಣತೆ, ಬಲಹೀನತೆ, ರೂಕ್ಷತೆ ಇವುಗಳಿಂದಿದ್ದರೆ ಅಥವಾ ಗರ್ಭಿಣೀ ಅಥವಾ ಪಿತ್ತ ಪ್ರಕೃತಿಯಾಗಿದ್ದರೆ ಅಂತಹವರಿಗೆ ಸ್ವೇದನ ಮಾಡಿಸಬಾರದು.

ಸ್ವೇದಕ್ಕೆ ಅರ್ಹರಾಗಿರುವವರಿಗೆ ಹಿತವಾಗಿರುವಪ್ಪು ಸುಖೋಷ್ಣ ಸ್ನಿಗ್ಧ ದ್ರವ್ಯ ಮತ್ತು ಸಕ್ಕರೆ ಸೇರಿರುವ ದ್ರವ್ಯಗಳಿಂದ ಉರಃ ಕಂಠಪ್ರದೇಶಗಳಲ್ಲಿ ಕ್ಷಣ ಕಾಲ ಮೃದುವಾಗಿ ಉತ್ಕಾರಿಕಾ, ಉಪನಾಹಸ್ವೇದಗಳನ್ನು ಮಾಡಿಸಬೇಕು. ಎಳ್ಳು, ಅಗಸೆಬೀಜ, ಉದ್ದು, ಗೋಧಿ ಚೂರ್ಣಗಳೊಡನೆ ವಾತಘ್ನದ್ರವ್ಯ ಗಳನ್ನೂ, ಆಮ್ಲ ಮತ್ತು ಸ್ನೇಹದ್ರವ್ಯಗಳನ್ನೂ ಸೇರಿಸಿ ಉತ್ಕಾರಿಕಾ (ಹೋಳಿಗೆ) ಸ್ವೇದವನ್ನು ಮಾಡಿಸುವುದು ಹಿತಕರ. (ನವಜ್ವರ ಮತ್ತು ಆಮ ದೋಷಗಳಲ್ಲಿ ರೂಕ್ಷಸ್ವೇದವನ್ನೂ ಲಂಘನವನ್ನೂ ಮಾಡಿಸಿ ದೋಷ ಉತ್ಕ್ಲೇಶ ಹೊಂದಿದುದನ್ನು ನಿರೀಕ್ಷಿಸಿ ಲವಣೋದಕದಿಂದ ವಾಂತಿಯನ್ನು ಮಾಡಿಸ ಬೇಕು.) ವಮನಾತಿಯೋಗದಿಂದ ವೃದ್ಧವಾಗುವ ವಾತವನ್ನು ವಾತಹರಗಳಾದ ಮಾಂಸರಸಾದಿಗಳಿಂದಲೂ, ಅತಿಶೀತೋಷ್ಣಗಳಲ್ಲದ ಅಭ್ಯಂಗಗಳಿಂದಲೂ ಶಮನಗೊಳಿಸಬೇಕು.

ಕಫಾಧಿಕ ಹಿಕ್ಕಾ ಅಥವಾ ಶ್ವಾಸರೋಗಿಯು ಬಲಿಷ್ಠನಾಗಿದ್ದು ಅವನಿಗೆ ಶ್ಲೇಷ್ಮವೃದ್ಧಿಯಾಗಿದ್ದರೆ ವಮನ, ವಿರೇಚನ, ಪಥ್ಯಭೋಜನ, ಧೂಮಪಾನ ಮತ್ತು ಲೇಹಗಳನ್ನೂ, ಶಮನೌಷಧಗಳನ್ನೂ ಕೊಟ್ಟು ರೋಗವನ್ನು ಹೋಗ ಲಾಡಿಸಬೇಕು. ವಾತಾಧಿಕರು, ದುರ್ಬಲರು, ಬಾಲರು, ವೃದ್ಧರೂ ಆಗಿದ್ದರೆ ಅವರಿಗೆ ವಾತಹರಕ್ರಮಗಳಿಂದಲೂ, ತರ್ಪಣೌಷಧಗಳಿಂದಲೂ, ಸ್ನೇಹಯೂಷ

ಮತ್ತು ರಸಾದಿಗಳಿಂದಲೂ ಶಮನಮಾಡಿಸಬೇಕು. ದುರ್ಬಲರಲ್ಲಿ ಕಫವು ತಕ್ಕಷ್ಟು ಸೇರದಿರುವಾಗ ಸ್ವೇದನವನ್ನೂ ಮಾಡಿಸದೆ ಶೋಧನವನ್ನು ಮಾಡಿಸಿದರೆ ಮರ್ಮಸ್ಥಾನಗಳಲ್ಲಿ ವಾತವು ಹೆಚ್ಚುವುದಕ್ಕೆ ಅವಕಾಶವುಂಟಾಗುವುದು. ಈ ವಾತವು ಮರ್ಮಗಳನ್ನು ಶೋಷಿಸಿ ಪ್ರಾಣಹರಣ ಮಾಡುವುದು. ಅಂತಹ ವರಿಗೆ ದೃಢವಾಗಿ ನಿಂತಿರುವ ಕಫವನ್ನು ಹೊರಕ್ಕೆ ತರಲು ಆನೂಪವಾರಿಜ ಪ್ರಾಣಿಮಾಂಸ ಭೋಜನ ಮಾಡಿಸಿ, ಸ್ವೇದನಮಾಡಿಸಿ ಅನಂತರ ವಮನ ವಿರೇಚನ ಮಾಡಿಸಬೇಕು. ದುರ್ಬಲರಾಗಿ ಬಹುವಾತಪೀಡಿತರಾದವರಿಗೆ ದಶಮೂಲ ಕ್ವಾಥ ಅಥವಾ ಕುಲತ್ಥರಸಗಳಿಂದ ಮಾಡಿದ ಜಾಂಗಲಮೃಗಪಕ್ಷಿಗಳ (ನವಿಲು, ತಿತ್ತಿರಿ, ಕೋಳಿ ಮುಂತಾದುವುಗಳ) ಮಾಂಸರಸವನ್ನು ಕೊಟ್ಟು ಬೃಂಹಣ ಮಾಡಿಸಬೇಕು.

ಯೂಷಮಾಡುವುದಕ್ಕೆ[೧] ಹುರಳಿ, ಕಂಟಕಾರಿ, ಬಿಲ್ವತಿರಳು, ಕರ್ಕಾಟಕ ಶೃಂಗಿ, ಧನ್ವಯಾಸ, ನೆಗ್ಗಿಲು, ಗುಡೂಚೀ ಮತ್ತು ಚಿತ್ರಮೂಲಗಳನ್ನು ಅರ್ಧ ಶಿಷ್ಟಕ್ವಾಥಮಾಡಿ ಶೋಧಿಸಬೇಕು. ಇದರೊಂದಿಗೆ ತುಪ್ಪದಲ್ಲಿ ಹುರಿದ ಹಿಪ್ಪಲಿ, ಶುಂಠಿ, ಸೈಂದವಲವಣಗಳನ್ನು ತಕ್ಕಷ್ಟು ಸೇರಿಸಿ ಭೋಜನಗಳಲ್ಲಿ ಉಪ ಯೋಗಿಸಬಹುದು. ಹೀಗೆಯೇ ರಾಸ್ನೆ, ಬಲಾ, ಲಘುಪಂಚಮೂಲ ಮುಂತಾದುವುಗಳನ್ನೂ ಉಪಯೋಗಿಸಬಹುದು.

ಹಿಕ್ಕಾಶ್ವಾಸಪೀಡಿತರಿಗೆ ಬಾಯಾರಿಕೆಯಾದರೆ ದಶಮೂಲ ಕ್ವಾಥವನ್ನಾ ಗಲೀ, ದೇವದಾರು ಕ್ವಾಥವನ್ನಾಗಲೀ, ಮದ್ಯವನ್ನಾಗಲೀ ಕುಡಿಸಬೇಕು.

೧. ಸುರಾಮಂಡ(ತಿಳಿಮದ್ಯ)ದಲ್ಲಿ ಪಾಠಾ, ಮೂರ್ವಾ, ರಾಸ್ನೆ ಮತ್ತು ಸರಳದೇವದಾರುಗಳ ಚೂರ್ಣವನ್ನು ಕೆಲವು ದಿನಗಳವರೆಗೂ ನೆನೆಸಿ ಶೋಧಿಸಿ ಪ್ರಮಾಣವರಿತು ಸ್ವಲ್ಪ ಸೈಂಧವಲವಣದೊಡನೆ ಕುಡಿಸುವುದರಿಂದ ಹಿಕ್ಕಾಶ್ವಾಸಗಳು ಶಮನಗೊಳ್ಳುವುವು.

---

೧. ನಿದಿಗ್ಧಿಕಾಂ ಬಿಲ್ವಮಧ್ಯಂ ಕರ್ಕಟಾಖ್ಯಾಂ ದುರಾಲಭಾಮ್ ।
ತ್ರಿಕಂಟಕಂ ಗುಡೂಚೀಂ ಚ ಕುಲತ್ಥಾಂಶ್ಚ ಸ ಚಿತ್ರಕಾನ್ ॥
ಜಲೇ ಪಕ್ತ್ವಾ ರಸಃ ಪೂತಃ ಪಿಪ್ಪಲೀಘೃತಭರ್ಜಿತಃ ।
ಸನಾಗರಃ ಸಲವಣಃ ಸ್ಯಾದ್ಯೂಷೋ ಭೋಜನೇ ಹಿತಃ ॥ ಚ.ಚಿ.ಅ. ೧೩

೨. ಸೌವರ್ಚಲ ಲವಣ, ಎಳಚಿಹಣ್ಣಿನ ತಿರಳು, ಮಂಜಿಷ್ಠೆ, ಹಿಪ್ಪಲಿ ಮತ್ತು ಬಲಾ ಇವುಗಳನ್ನು ಮಾದಳರಸದಲ್ಲರೆದು ಆರನಾಳದಲ್ಲಿ ಕದಡಿ ಕುಡಿಸ ಬೇಕು.

೩. ಸೌವರ್ಚಲ, ಶುಂಠಿ, ಭಾರ್ಙೀ ಇವುಗಳ ಸಮಭಾಗಕ್ಕೆ ಎರಡ ರಷ್ಟು ಸಕ್ಕರೆ ಸೇರಿಸಿ ಬಿಸಿನೀರಿನಲ್ಲಿ ಕುಡಿಸುವುದರಿಂದ ಹಿಕ್ಕಾಶ್ವಾಸಗಳು ನಾಶ ವಾಗುವುವು.

೪. (i) ಮಧೂಲಿಕಾ (ಸಣ್ಣಗೋಧಿ), ಬಿದಿರುಪ್ಪು, ಶುಂಠಿ ಮತ್ತು ಹಿಪ್ಪಲಿಗಳನ್ನು ಕೂಡಿಸಿದ ತುಪ್ಪದ ಚಪ್ಪಾತಿಗಳನ್ನು ತಿನ್ನಿಸುವುದರಿಂದ ಪಿತ್ತಾನುಬಂಧಶ್ವಾಸವು ನಿಲ್ಲುವುದು.

(ii) ವಾತಾನುಬಂಧಶ್ವಾಸದಲ್ಲಿ ಮುಳ್ಳುಹಂದಿ, ಮೊಲಗಳ ಮಾಂಸ, ಕಾಡುಹಂದಿಯ ರಕ್ತ ಇವನ್ನು ತುಪ್ಪ ಮತ್ತು ಹಿಪ್ಪಲಿಗಳೊಂದಿಗೆ ತಿನ್ನಿಸಬೇಕು.

(iii) ಸುವರ್ಚಲಾ (ಸೂರ್ಯಕಾಂತಿ) ಕಷಾಯ, ಹಾಲು, ತುಪ್ಪ ಮತ್ತು ತ್ರಿಕಟುಗಳನ್ನು ಶಾಲ್ಯನ್ನದೊಡನೆ ಸೇವಿಸಿದರೆ ವಾತಪಿತ್ತಾನುಬಂಧ ದೋಷವು ಶಮನವಾಗುವುದು.

(iv) ಕಫಪಿತ್ತಾನುಬಂಧ ಹರವಾಗಿ ಬಾಗೆಹೂವಿನ ರಸ ಅಥವಾ ಸಪ್ತ ಪರ್ಣ ಹೂವಿನರಸಕ್ಕೆ ಹಿಪ್ಪಲಿ ಮತ್ತು ಜೇನುತುಪ್ಪಗಳನ್ನು ಕಲಸಿಕೊಡಬೇಕು.

(v) ಅತಿಮಧುರ, ಪಿಪ್ಪಲೀಮೂಲ, ಬೆಲ್ಲ ಮತ್ತು ಗೋಶಕೃದ್ರಸ ಗಳೊಡನೆ ತುಪ್ಪ, ಚಿಟ್ಟೆಜೇನುತುಪ್ಪಗಳನ್ನು ಬೆರಸಿ ಕೊಡುವುದರಿಂದ ಹಿಕ್ಕಾ, ಶ್ವಾಸ, ಕಾಸ, ಅಭಿಷ್ಯಂದಿಯುಳ್ಳವರು ನೆಮ್ಮದಿಯಾಗುವರು.

೫. ಕಫಪ್ರಕೋಪವಿರುವ ಹಿಕ್ಕಾ ಶ್ವಾಸಗಳಲ್ಲಿ (i) ಖರ, ಅಶ್ವ, ಉಷ್ಟ್ರ (ಒಂಟೆ), ವರಾಹ, ಮೇಷ, ಗಜ ಇವುಗಳಲ್ಲಿ ಯಾವುದಾದರೊಂದರ ಶಕೃದ್ರಸಕ್ಕೆ ಜೇನುತುಪ್ಪ ಹಾಕಿ ಕುಡಿಸಬೇಕು. (ii) ಅಶ್ವಗಂಧಿಯ ಕ್ಷಾರಕ್ಕೆ ತುಪ್ಪ ಮತ್ತು ಜೇನುತುಪ್ಪಗಳನ್ನು ಕಲಸಿ ನೆಕ್ಕಿಸಬೇಕು. (iii) ನವಿಲಿನ ಕಾಲುಮೂಳೆ (ಅಥವಾ ಗರಿಯ ಕಾಂಡದಭಸ್ಮ), ಮುಳ್ಳುಹಂದಿಯ ಮುಳ್ಳು, ಕಾಡುಹಂದಿಯ ರೋಮ, ಹಸುಬನಹಕ್ಕಿಯ ಮೊಟ್ಟೆ, ಕಾಡು ಗುಬ್ಬಚ್ಚಿ

ಕೂದಲು (ಗರಿ) ಇವುಗಳಲ್ಲಿ ಯಾವುದನ್ನಾದರೂ ಸುಟ್ಟು ಆ ಭಸ್ಮವನ್ನು ತುಪ್ಪ ಮತ್ತು ಜೇನುತುಪ್ಪಗಳೊಡನೆ ಸೇರಿಸಿ ನೆಕ್ಕಿಸಿದರೆ ಕಫದಿಂದ ತಡೆಯಲ್ಪಟ್ಟ ಶ್ವಾಸಮಾರ್ಗವು ಶುದ್ಧವಾಗಿ ರೋಗನಿವಾರಣೆಯಾಗುವುದು. ಕಫಪ್ರಕೋಪ ವಿಲ್ಲದಿದ್ದರೆ ಇವನ್ನು ಕೊಡಬಾರದು.

**ಕಾಸಿನೇ ಛರ್ದನಂ ದದ್ಯಾತ್ಸ್ವರಭಂಗೇ ಚ ಬುದ್ಧಿಮಾನ್ ।**
**ವಾತಶ್ಲೇಷ್ಮಹರೈರ್ಯುಕ್ತಂ ತಮಕೇ ತು ವಿರೇಚನಮ್ ॥**

ಚ.ಚಿ.ಅ ೧೭.

ಹಿಕ್ಕಾ ಅಥವಾ ಶ್ವಾಸವಿರುವವನಿಗೆ ಕಾಸವಾಗಲೀ, ಸ್ವರಭಂಗವಾಗಲೀ ಇದ್ದರೆ ವಾತಶ್ಲೇಷ್ಮಹರವಾದ ವಮನೌಷಧದಿಂದ ಶಾಂತಿಮಾಡಿಸಬೇಕು. ತಮಕವಿದ್ದರೆ ವಿರೇಚನವನ್ನು ಮಾಡಿಸಬೇಕು. ಇದರಿಂದ ವಾತವಹಮಾರ್ಗ ಗಳು ಕಫದಿಂದ ತಡೆಯಲ್ಪಡದೆ ಶುದ್ಧವಾಗುವುವು.

ಹಿಕ್ಕಾ ಮತ್ತು ತಮಕಶ್ವಾಸಗಳಲ್ಲಿ (i) ಶಟ್ಯಾದಿಚೂರ್ಣವನ್ನು ಉಪ ಯೋಗಿಸಬೇಕು. (ii) ಬೆಳ್ಳುಳ್ಳಿ ಅಥವಾ ಈರುಳ್ಳಿ ಬೇರನ್ನು ಅಥವಾ ರಕ್ತ ಚಂದನವನ್ನು ಕಲ್ಕಮಾಡಿ ಸ್ತನ್ಯವನ್ನು ಕಲಸಿ ಶೋಧಿಸಿ ಬಂದ ರಸವನ್ನು ನಸ್ಯ ಮಾಡಿಸಬೇಕು. (iii) ಸಕ್ಕರೆ ಮತ್ತು ಜೇನುತುಪ್ಪಗಳನ್ನು ಸೇರಿಸಿ ಪರ್ಯಾಯವಾಗಿ ಒಂದು ಸಾರಿ ಬಿಸಿ ಹಾಲು, ಒಂದು ಸಾರಿ ಆರಿದ ಹಾಲು ಹಾಕಿ ಪಾನ, ನಸ್ಯಗಳನ್ನು ಮಾಡಿಸಬೇಕು.

ವಿರೇಚನ ದ್ರವ್ಯಗಳನ್ನು ಸೇರಿಸಿ ಮಾಡಿರುವ ಘೃತವನ್ನು ಕುಡಿಸುವುದ ರಿಂದ ಬಿಕ್ಕಳಿಕೆಯು ಕೂಡಲೇ ನಿಲ್ಲುವುದು. ನೆಲ್ಲೀಕಾಯಿ ಮತ್ತು ಬೇಲದ ಹಣ್ಣುಗಳನ್ನು ಹಿಂಡಿ ತೆಗೆದ ರಸಕ್ಕೆ ಹಿಪ್ಪಲಿಚೂರ್ಣ ಮತ್ತು ಜೇನುತುಪ್ಪ ಗಳನ್ನು ಸೇರಿಸಿ ಕುಡಿಸಬಹುದು; ಅಥವಾ ಲಾಜಾ, ಲಾಕ್ಷಾ, ಮಧು, ದ್ರಾಕ್ಷೆ, ಹಿಪ್ಪಲಿಗಳನ್ನು ಚೂರ್ಣಿಸಿ ಕುದುರೆಶಕೃದ್ರಸದಲ್ಲಿ ಕಲಸಿ ನೆಕ್ಕಿಸ ಬಹುದು.

**ಶೀತಾಂಬುಸೇಕಃ ಸಹಸಾ ತ್ರಾಸ ವಿಕ್ಷೇಪಭೀಶುಚಃ ।**
**ಹರ್ಷೇರ್ಷ್ಯೋಚ್ಛ್ವಾಸಸಂರೋಧಾ ಹಿತಂಕೀಟೈಶ್ಚ ದಂಶನಮ್ ॥**

ಅ.ಹೃ.ಚಿ. ೪.

ಸಮಯೋಚಿತವಾಗಿ ಇದ್ದಕ್ಕಿದ್ದಂತೆಯೇ ರೋಗಿಯಮೇಲೆ ತಣ್ಣೀರನ್ನು ಸುರಿಯುವುದು, ತೊಂದರೆಪಡಿಸುವುದು, ಹೆದರಿಸುವುದು, ಪ್ರಿಯವಾಕ್ಯಗಳನ್ನಾಡುವುದು, ಸಂತೋಷಪಡಿಸುವುದು, ಅಸೂಯೆಯನ್ನುಂಟುಮಾಡುವುದು, ಉಸಿರನ್ನು ತಡೆಯುವಂತೆ ಮಾಡುವುದು, ಕೀಟಗಳಿಂದ ಕಚ್ಚಿಸುವುದು ಮತ್ತು ಬಿಕ್ಕಳಿಕೆಯನ್ನು ಮರೆಸುವ ಮಾತುಗಳನ್ನಾಡುವುದು (ವಿಸ್ಮಾಪನಂ) ಇವು ಹಿಕ್ಕಾ ನಿವಾರಣೋಪಾಯಗಳು. ಹಿಕ್ಕಾ ಉತ್ಪತ್ತಿಗೆ ಹೇಳಿರುವ ಕಾರಣಗಳನ್ನು ಸರ್ವಥಾ ತ್ಯಜಿಸಬೇಕು.

**ಹಿಕ್ಕಾಶ್ವಾಸಾನುಬಂಧಾ ಯೇ ಶುಷ್ಕೋರಃಕಂಠತಾಲುಕಾಃ ।**
**ಪ್ರಕೃತ್ಯಾ ರೂಕ್ಷದೇಹಾಶ್ಚ ಸರ್ಪಿರ್ಭಿಸ್ತಾನುಪಾಚರೇತ್ ॥**

ಚ.ಚಿ.ಅ. ೧೮.

ಉರಃಕಂಠತಾಲುಗಳು ಒಣಗುವುದೇ ಮುಂತಾದ ಉಪದ್ರವಗಳಿರುವ ಹಿಕ್ಕಾಶ್ವಾಸರೋಗಿಗಳು ಸ್ವಭಾವದಿಂದಲೇ ರೂಕ್ಷದೇಹವುಳ್ಳವರು. ಆದ್ದರಿಂದ ಇವರನ್ನು ಘೃತಗಳಿಂದ ಉಪಚರಿಸಬೇಕು. ಇದಕ್ಕೆ ದಶಮೂಲಾದಿಘೃತ[೧] ಅಥವಾ ವಾಸಾಘೃತ ಹಿತವಾದುದು.

**ಯತ್ಕಿಂಚಿತ್ಕಫವಾತಾಘ್ನಂ ಉಷ್ಣಂ ವಾತಾನುಲೋಮನಮ್ ।**
**ಭೇಷಜಂ ಪಾನಮನ್ನಂ ವಾತದ್ಧಿತಂ ಶ್ವಾಸಹಿಕ್ಕಿನೇ ॥**

ಚ.ಚಿ.ಅ. ೧೮.

**(ತತ್ಸೇವ್ಯಂ ಪ್ರಾಯಶೋಯಚ್ಚ ಸುತರಾಂ ಮಾರುತಾಪಹಮ್ ।)**

ಅ.ಹೃ.ಚಿ. ೪.

ಕಫ ಮತ್ತು ವಾತಗಳನ್ನು ಹೋಗಲಾಡಿಸುವ ಉಷ್ಣ ಮತ್ತು ವಾತಾನುಲೋಮನವಾದ ಅನ್ನಪಾನಗಳನ್ನು ಅದರಲ್ಲೂ ವಿಶೇಷವಾಗಿ ವಾತಹರ ದ್ರವ್ಯಗಳನ್ನು ಕೊಡಬೇಕು.

---

೧. ದಶಮೂಲರಸೇ ಸರ್ಪಿರ್ದಧಿಮಂಡೇ ಚ ಸಾಧಯೇತ್ ।
ಕೃಷ್ಣಾಸೌವರ್ಚಲಕ್ಷಾರವಯಃಸ್ಥಾ ಹಿಂಗುಚೋರಕೈಃ ।
ಕಾಯಸ್ಥಯಾ ಚ ತತ್ಪಾನಾದ್ಧಿಕ್ಕಾಶ್ವಾಸೌ ಪ್ರಣಾಶಯೇತ್ । ಚ.ಚಿ.ಅ. ೧೭.

ಹಿಕ್ಕಾಶ್ವಾಸ ಚಿಕಿತ್ಸೆಯಲ್ಲಿ ಕಫವಾತಹರಣವೇ ಮುಖ್ಯ. ಈ ಬಗೆಯ ಚಿಕಿತ್ಸೆಯನ್ನು ಮಾಡಿದಮೇಲೆ ಇನ್ನೂ ನಿಂತಿರುವ ದೋಷಗಳಲ್ಲಿ ಕಫಹರವಾಗಿ (ಲಂಘನ) ವಾತವನ್ನೂ, ವಾತಹರವಾಗಿ (ಬೃಂಹಣ) ಕಫವನ್ನೂ ಉಂಟು ಮಾಡುವಂತೆ ಮೇಲಿಂದಮೇಲೆ ದ್ವಿವಿಧೋಪಕ್ರಮವನ್ನು ನಡೆಸಬೇಕು. ಇವು ಗಳಲ್ಲಿ ವಾತಹರವಾದ ಬೃಂಹಣವೇ ಶ್ರೇಯಸ್ಕರವಾದುದು ಏಕೆಂದರೆ ಬೃಂಹಣ ಮಾಡಬೇಕಾಗಿರುವ ಕಾಸ, ಶ್ವಾಸ, ರಾಜಯಕ್ಷ್ಮ, ಛರ್ದಿ, ಹಿಕ್ಕಾ ಮತ್ತು ಇನ್ನಿತರ ವ್ಯಾಧಿಗಳಲ್ಲಿ ವಾತನಾಶಕವಾದ ಈ ಕ್ರಮದಿಂದ ಯಾವ ತೊಂದ ರೆಯೂ ಇಲ್ಲ. ಲಂಘನಚಿಕಿತ್ಸೆಯಿಂದ ಅಪಾಯವು ಇದ್ದೇ ಇರುವುದು. ಶಮನಚಿಕಿತ್ಸೆಯಲ್ಲಿ ಹೆಚ್ಚು ಅಪಾಯದ ಸಂಭವವಿರುವುದಿಲ್ಲ. ಆದುದರಿಂದ ರೋಗಿಯು ಶುದ್ಧನಾಗಿರಲಿ ಅಥವಾ ಇಲ್ಲದಿರಲಿ ಅವನನ್ನು ಶಮನ ಬೃಂಹಣ ಗಳಿಂದ ಚಿಕಿತ್ಸಿಸಬೇಕು.

## ಸಂಗ್ರಹ

(೧) ಪಟುತೈಲಾಭ್ಯಂಗಃ, ನಾಡೀಪ್ರಸ್ತರಸಂಕರೈಃ ಸ್ನಿಗ್ಧಸ್ವೇದಃ ।

(೨) ಸ್ನಿಗ್ಧೋದನಮ್ ರಸಂ ವಾ ಮಸ್ತುನಾ ।

(೩) ತತಃಶ್ಲೇಷ್ಮಸಂವೃದ್ಧೌ ವ್ಮೃದುವಮನಮ್ ವಾತಾವಿರೋಧಿನಾ ।

(೪) ದೋಷಶೇಷೇ ಧೂಮಃ ।

(೫) ಕಫಾಧಿಕ್ಯೇ ಬಲಸ್ಥೇ ಚ ವಮನಂ ಸವಿರೇಚನಮ್ ।<br>ಧೂಮಲೇಹಾದಿಭಿಃ ಶಮನಂ ।

(೬) ಬಾಲದುರ್ಬಲರೂಕ್ಷಾನ್ ಸ್ನೇಹಯೂಷರಸಾದಿಭಿಃ ತರ್ಪಯೇತ್ ।

(೭) ಅನುಲೋಮನಾರ್ಥೇ ಹಿಂಗುಸೌವರ್ಚಲಾದಿಯವಾಗೂಃ ।

(೮) ಸಿದ್ಧಯೋಗಾಃ ।

---

# ರಾಜಯಕ್ಷ್ಮನಿದಾನ

ರೋಗಗಳಲ್ಲೆಲ್ಲಾ ಬಹು ಬಲಿಷ್ಠವಾದುದು ಯಕ್ಷ್ಮವಾದುದರಿಂದ ಇದಕ್ಕೆ ರಾಜಯಕ್ಷ್ಮವೆಂದು ಹೆಸರು ಬಂದಿದೆ. ಓಜಸ್ಸನ್ನು ಕ್ಷೀಣವಮಾಡುವ ರೋಗವು ಯಕ್ಷ್ಮವೆಂದು ತಿಳಿಯಲ್ಪಟ್ಟಿದೆ. ಶೋಷ, ಯಕ್ಷ್ಮಾ, ಜ್ವರ, ರೋಗ, ದುಃಖ ಎಂಬ ಪದಗಳು ಒಂದೇ ಅರ್ಥವನ್ನು ಸೂಚಿಸುವುವು. ರಾಜಯಕ್ಷ್ಮವು ತ್ರಿದೋಷಾತ್ಮಕವಾದುದು ಮತ್ತು ನಾಲ್ಕು ಕಾರಣಗಳನ್ನುಳ್ಳದ್ದು : (೧) ವೇಗ ರೋಧ, (೨) ಧಾತುಕ್ಷಯ, (೩) ಸಾಹಸ ಮತ್ತು (೪) ವಿಷಮಾಶನ. ಅನು ಲೋಮ ಮತ್ತು ವಿಲೋಮ ಭೇದದಿಂದ ಯಕ್ಷ್ಮವು ಎರಡು ವಿಧ ಅನುಲೋಮ ದಲ್ಲಿ ಕಫವನ್ನೇ ಹೆಚ್ಚಾಗುಳ್ಳ ದೋಷಗಳು ರಸವಾಹಿಸ್ರೋತಸ್ಸುಗಳನ್ನು ಅಡ್ಡ ಗಟ್ಟುವುದರಿಂದ ಮುಂದಿನ ಧಾತುಗಳಾದ ರಕ್ತಮಾಂಸಾದಿಗಳು ಪುಷ್ಟಿಯನ್ನು ಹೊಂದಲಾರದೆ ಕ್ಷಯಿಸುವುವು. ಅತಿವ್ಯವಾಯ ಕಾರಣದಿಂದ ರೇತಸ್ಸು ಕ್ಷೀಣ ವಾಗಿ ವಿಲೋಮಕ್ಷಯವುಂಟಾಗುವುದು. ಶುಕ್ರಧಾತುವು ಸಾಕಷ್ಟು ಉತ್ಪತ್ತಿ ಯಾಗುವುದಕ್ಕೆ ಮೊದಲೇ ವ್ಯವಾಯನಿರತನಾಗುವುದರಿಂದ ಮಜ್ಜಾಧಾತುವು ನಷ್ಟವಾಗುವುದು. ಹೀಗೆ ಧಾತುಗಳು ಒಂದರಿಂದೊಂದು ಕಡಿಮೆಯಾಗುತ್ತ ಬರುವುದರಿಂದ ಮನುಷ್ಯನು ಒಣಗುತ್ತ ಬರುವನು.

**ಪೂರ್ವರೂಪ**—ಸ್ವಲ್ಪಮಾತ್ರ ಶ್ರಮದಿಂದಲೇ ಶ್ವಾಸ, ಅಂಗಮರ್ದ, ಕಫವನ್ನು ಕೇಕರಿಸುವುದು, ತಾಲುಶೋಷ, ವಾಂತಿ, ಅಗ್ನಿಸಾದ, ಮದ, ಪೀನಸ, ಕಾಸ, ಅತಿನಿದ್ರೆ, ಕಣ್ಣುಗಳು ಶಕ್ತಿಹೀನತೆಯಿಂದ ಬೆಳ್ಳಗಿರುವಿಕೆ, ಮಾಂಸ ಮತ್ತು ವ್ಯವಾಯಗಳಲ್ಲಿ ಹೆಚ್ಚಾದ ಅಪೇಕ್ಷೆ ಇವು ರಾಜಯಕ್ಷ್ಮದ ಪೂರ್ವರೂಪಗಳು. ರೋಗಿಯು ಸ್ವಪ್ನದಲ್ಲಿ ತಾನೇ ಕಾಗೆ, ಗಿಣಿ, ಮುಳ್ಳು ಹಂದಿ, ನವಿಲು, ಹದ್ದು, ಕಪಿ, ಗಿರ್‌ಗಿಟ್ ಹಕ್ಕಿ ಇವುಗಳಲ್ಲಿ ಯಾವುದರ ಮೇಲಾದರೂ ಸವಾರಿಮಾಡಿ ಹೋದಂತೆ ಮತ್ತು ನೀರಿಲ್ಲದ ನದಿ, ಕೆರೆಗಳನ್ನೂ, ಒಣಮರ, ಬಿರುಗಾಳಿ, ಹೊಗೆ, ಕಾಡುಕಿಚ್ಚು ಇವುಗಳನ್ನು ಕಾಣುವನು.

**ಸಾಮಾನ್ಯ ಲಕ್ಷಣ**—ಹೆಗಲು, ಪಕ್ಕೆಗಳು, ಅಂಗೈ ಮತ್ತು ಅಂಗಾಲು ಗಳಲ್ಲಿ ಉರಿ, ಶರೀರದಲ್ಲೆಲ್ಲಾ ಜ್ವರ ವ್ಯಾಪಿಸಿರುವುದು ರಾಜಯಕ್ಷ್ಮದ ಲಕ್ಷಣ ಗಳ .

**ಯಕ್ಷ್ಮದ ವಿವಿಧ ರೂಪಗಳು**—ಭಕ್ತದ್ವೇಷ, ಜ್ವರ, ಶ್ವಾಸ, ಕಾಸ, ಕೆಮ್ಮಿದರೆ ರಕ್ತ ಬೀಳುವುದು ಮತ್ತು ಸ್ವರಭೇದ ಇವು ಷಡ್ರೂಪಗಳು.

ವಾತದಿಂದ ಸ್ವರಭೇದ, ಅಂಸಪಾರ್ಶ್ವಗಳಲ್ಲಿ ಶೂಲ ಮತ್ತು ಸಂಕೋಚಗಳು, ಪಿತ್ತದಿಂದ ಜ್ವರ, ದಾಹ, ಅತೀಸಾರ ಮತ್ತು ರಕ್ತ ಹೋಗುವುದು; ಕಫದಿಂದ ತಲೆಯಲ್ಲಿ ಏನೋ ತುಂಬಿಗಂತಿರುವುದು, ಊಟಮಾಡದಿದ್ದರೂ ತೃಪ್ತಿಯಾಗಿರುವುದು (ಅನ್ನದ್ವೇಷ), ಕಾಸ, ಕಂಠಭೇದ ಇವು ಏಕಾದಶ ರೂಪಗಳು.

**ಸಾಧ್ಯಾಸಾಧ್ಯ**—ಷಡ್ರೂಪ ಮತ್ತು ಏಕಾದಶರೂಪಗಳಿಂದ ಕೂಡಿದ ಯಕ್ಷ್ಮವು ಅಸಾಧ್ಯ. ಕಾಸ, ಶ್ವಾಸ ಮತ್ತು ರಕ್ತಷ್ಠೀವನಗಳಿಂದ ಕೂಡಿದ್ದರೂ, ಷಡ್ರೂಪ ಮತ್ತು ಏಕಾದಶಗಳಲ್ಲಿ ಅರ್ಧದಷ್ಟು ಲಕ್ಷಣಗಳಿದ್ದರೂ ಅಥವಾ ಮಾಂಸಕ್ಷೀಣತೆ ಮತ್ತು ಬಲಹೀನತೆಗಳಿದ್ದರೂ ಅಸಾಧ್ಯ. ಹೆಚ್ಚು ಊಟ ಮಾಡುತ್ತಿದ್ದರೂ ಶರೀರ ಕ್ಷೀಣವಾಗುತ್ತಲೇ ಇದ್ದರೆ, ಅತೀಸಾರವಿದ್ದರೆ ಅಥವಾ ಮುಷ್ಕ ಮತ್ತು ಉದರಗಳಲ್ಲಿ ಶೋಥವಿದ್ದರೆ ಅಸಾಧ್ಯ. ಕಣ್ಣು ಬೆಳ್ಳಗಾಗಿ, ಅನ್ನದ್ವೇಷಿಸುತ್ತ, ಊರ್ಧ್ವಶ್ವಾಸದಿಂದ ನರಳುತ್ತಿರುವ ಹಾಗು ಬಹುಕಷ್ಟದಿಂದ ಮೂತ್ರವಿಸರ್ಜನೆ ಮಾಡುತ್ತಿರುವ ರೋಗಿಯು ಶೀಘ್ರದಲ್ಲೇ ಸಾಯುತ್ತಾನೆ.

**ಜ್ವರಾನುಬಂಧರಹಿತಂ ಬಲವಂತಂ ಕ್ರಿಯಾಸಹಮ್ ।**
**ಉಪಕ್ರಮೇದಾತ್ಮವಂತಂ ದೀಪ್ತಾಗ್ನಿಮಕೃಶಂ ನರಮ್** ॥ ಮಾ. ನಿ. ೧೦

**ಪ್ರತಿಶ್ಯಾಯ**—ನಾಸಾಮೂಲದಲ್ಲಿ ಸೇರಿರುವ ಶ್ಲೇಷ್ಮ, ರಕ್ತ ಅಥವಾ ಪಿತ್ತವು ವಾತಕ್ಕೆ ಎದುರಾಗಿ ಮೇಲಕ್ಕೆ ಹೋಗಲಾರವು. ವಾತದಿಂದ ತಳ್ಳಲ್ಪಟ್ಟು ನಾಸಾದ್ವಾರದಿಂದ ಸ್ರವಿಸುತ್ತಿರುವುವು. ಈ ಸ್ಥಿತಿಗೆ ಪ್ರತಿಶ್ಯಾಯವೆಂದು ಹೆಸರು. ಇದರಿಂದ ತಲೆನೋವು, ತಲೆಭಾರ, ಗಂಧಗ್ರಹಣ ಮಾಡಲು ಘ್ರಾಣೇಂದ್ರಿಯದ ಅಸಾಮರ್ಥ್ಯತೆ, ಜ್ವರ, ಕಾಸ, ಕಫೋತ್ಕ್ಲೇಶ, ಸ್ವರಭೇದ, ಅರುಚಿ, ಕ್ಲಮ ಮತ್ತು ಇತರ ಇಂದ್ರಿಯಗಳ ಅಸಾಮರ್ಥ್ಯತೆಗಳುಂಟಾಗುವುವು. ಇವೆಲ್ಲವೂ ರಾಜಯಕ್ಷ್ಮಕ್ಕೆ ಕಾರಣಗಳಾಗುವುವು. ರಾಜಯಕ್ಷ್ಮದ ಪ್ರತಿಶ್ಯಾಯದಲ್ಲಿ ಕೆಮ್ಮಿದಾಗ ಪಿಚ್ಛಿಲವಾದ ದುರ್ಗಂಧಯುಕ್ತ ಹಸುರು, ಬಿಳಪು, ಹಳದಿ ಬಣ್ಣಗಳ ಅಧಿಕವಾದ ಕಫದಿಂದ ಕೂಡಿದ ರಸಧಾತು ಹೊರಬರುವುದು.

**ಸ್ವರಭೇದ**—ವಾತ, ಪಿತ್ತ, ಕಫ ಮತ್ತು ರಕ್ತಗಳಿಂದಲೂ, ಕಾಸ ವೇಗದಿಂದಲೂ, ಪೀನಸದಿಂದಲೂ ಸ್ವರಭೇದವುಂಟಾಗುತ್ತದೆ. ವಾತದಿಂದ ಧ್ವನಿಯು ರೂಕ್ಷ, ಹೀನ, ಚಂಚಲ ಮತ್ತು ಕಠಿಣವಾಗಿರುತ್ತದೆ. ಪಿತ್ತದಿಂದ ತಾಲು, ಕಂಠಗಳಲ್ಲಿ ತಾಪವುಂಟಾಗಿ ಮಾತನಾಡುವುದಕ್ಕಾಗದಿರುವುದು. ಕಫ ದಿಂದ ಅಡ್ಡಕಟ್ಟಲ್ಪಟ್ಟಿರುವ ಮಾರ್ಗವು ವಾತದಿಂದ ಭೇದಿಸಲ್ಪಟ್ಟು ಸ್ವರವು ಗುರಗುರ ಶಬ್ದದೊಂದಿಗೆ ಹೊರಡುತ್ತದೆ. ಇದೇ ರೀತಿಯಲ್ಲಿ ರಕ್ತದಿಂದಾಗಿದ್ದರೆ ಸ್ವರವು ಕಷ್ಟದಿಂದ ಬರುತ್ತದೆ. ಕಾಸವೇಗದಿಂದುಂಟಾದ ಸ್ವರವು ಹೀನಸ್ವರವು. ಪೀನಸದಿಂದಾದುದು ಕಫ ಮತ್ತು ವಾತಸ್ವರಭೇದಲಕ್ಷಣಗಳಿಂದ ಕೂಡಿರುತ್ತದೆ. ಪಾರ್ಶ್ವಶೂಲೆ ಮತ್ತು ನಿಯಮವಿಲ್ಲದೆ ಪಕ್ಕೆಗಳ ಸಂಕೋಚ ಮತ್ತು ವಿಕಾಸ ಗಳುಂಟಾಗುತ್ತವೆ.

**ಅರೋಚಕ**—ವಾತಾದಿದೋಷಗಳು ಪ್ರತ್ಯೇಕವಾಗಿ ಅಥವಾ ಒಟ್ಟಿಗೆ ಪ್ರಕೋಪಹೊಂದಿ ನಾಲಿಗೆ ಮತ್ತು ಹೃದಯಗಳನ್ನು ಸೇರಿ ಅರೋಚಕ ವನ್ನುಂಟುಮಾಡುತ್ತವೆ. ಮನಸ್ಸಿಗೆ ಹಿತವಲ್ಲದ ಆಹಾರಗಳಿಂದಲೂ ಅರುಚಿ ಯುಂಟಾಗುತ್ತದೆ. ವಾತದಿಂದ ನಾಲಿಗೆಗೆ ಒಗರು, ಪಿತ್ತದಿಂದ ತಿಕ್ತ ಮತ್ತು ಕಫದಿಂದ ಮಧುರ ರುಚಿಗಳುಂಟಾಗುತ್ತವೆ ಮಾನಸಿನ ಅರೋಚಕವು ಆಹಾರದ ಮೇಲೆ ಅಸಹ್ಯದಿಂದಾಗುತ್ತದೆ. ತ್ರಿದೋಷದಿಂದಾದ ಅರೋಚಕವು ಮೂರು ದೋಷಗಳ ಅರುಚಿ ಲಕ್ಷಣಗಳಿಂದಲೂ ಸೇರಿರುತ್ತದೆ.

## ರಾಜಯಕ್ಷ್ಮಚಿಕಿತ್ಸಾ

(೧) ಪ್ರತಿಶ್ಯಾಯ, (೨) ಶಿರಃಶೂಲ, (೩) ಕಾಸ, (೪) ಶ್ವಾಸ, (೫) ಸ್ವರಕ್ಷಯ ಮತ್ತು (೬) ಪಾರ್ಶ್ವಶೂಲ ಇವು ರಾಜಯಕ್ಷ್ಮದ ವಿಶೇಷ ಉಪದ್ರವಗಳು.

ಬಲಿಷ್ಠನಾಗಿರುವ ರಾಜಯಕ್ಷ್ಮಿಗೆ ದೋಷಗಳು ಹೆಚ್ಚಾಗಿದ್ದರೆ ಬಲ ಕಡಿಮೆಯಾಗದಷ್ಟು ಮಿತವಾಗಿ ಪಂಚಕರ್ಮಗಳನ್ನು ಮಾಡಬೇಕು. ಮೊದಲು ಸ್ನೇಹವನ್ನೂ, ಸ್ವೇದವನ್ನೂ ಮಾಡಿಸಿ ಅನಂತರ ಸ್ನಿಗ್ಧದ್ರವ್ಯಗಳಿಂದ ಮೃದುವಮನ ಮತ್ತು ವಿರೇಚನಗಳನ್ನು ಮಾಡಿಸಬೇಕು. ವಮನಕ್ಕೆ ಮದನ

ಫಲ ಮತ್ತು ಹಾಲುಗಳನ್ನು ಸೇರಿಸಿ ಅಥವಾ ವಮನದ್ರವ್ಯಗಳಿಂದ ಮಾಡಿದ ಘೃತ, ಯವಾಗೂ, ಮಧುರವಾದ ಮಾಂಸರಸ ಇವುಗಳಲ್ಲಿ ಯಾವುದನ್ನಾದರೂ ಉಪಯೋಗಿಸಬಹುದು. ವಿರೇಚನಕ್ಕೆ ಲಾಲ್‌ತಿಗಡೆ, ಕರಿತಿಗಡೆ, ಕಕ್ಕೆ ಮಯಣ ಇವುಗಳಲ್ಲೊಂದನ್ನು ಸಕ್ಕರೆ, ಜೇನುತುಪ್ಪ ಮತ್ತು ತುಪ್ಪಗಳೊಂದಿಗೆ ಅಥವಾ ಕ್ಷೀರದೊಡನೆ, ಇಲ್ಲವೆ ಸಕ್ತುವಿನೊಡನೆ ಉಪಯೋಗಿಸಬಹುದು. ಹೀಗೆ ಊರ್ಧ್ವಾಧಃಶೋಧನವಾದ ಮೇಲೆ ಅವನಿಗೆ ಬೃಂಹಣ, ದೀಪನ ಮತ್ತು ಹೃದ್ಯಗಳಾದ ಹಾಗು ವಾತಹರಗಳಾದ ಸುಲಭವಾಗಿ ಜೀರ್ಣವಾಗುವ ಅನ್ನಪಾನಗಳನ್ನು ಕೊಡಬೇಕು. ದ್ರಾಕ್ಷೆ, ನೆಲಗುಂಬಳ, ಕಾಶ್ಮರೀ ಮುಂತಾದುವನ್ನು ಒಳಗೊಂಡ ಅಥವಾ ಮಾಂಸರಸ ಸೇರಿರುವ ಆಹಾರಗಳು ಯೋಗ್ಯವಾದುವು. ಶಾಲಿ, ಷಷ್ಟಿಕ, ಗೋಧಿ, ಯವೆ, ಹೆಸರು ಮುಂತಾದ ಧಾನ್ಯಗಳನ್ನೂ, ಆಡಿನ ಹಾಲು, ಮಾಂಸ, ತುಪ್ಪಗಳನ್ನೂ, ಮಾಂಸಾಹಾರಿ ಪ್ರಾಣಿಗಳ ಮಾಂಸಗಳನ್ನೂ ಕೊಡುವುದರಿಂದ ಶೋಷವು ನಷ್ಟವಾಗಿ ರೋಗಿಯು ಬಲಪುಷ್ಟಿಗಳಿಂದ ಚೇತರಿಸಿಕೊಳ್ಳುವನು. ರೋಗಿಯು ಮಾಂಸ ರಸವನ್ನು ತೆಗೆದುಕೊಳ್ಳಲು ಒಪ್ಪದಿದ್ದಲ್ಲಿ ಅವನಿಗೆ ತಿಳಿಯದ ರೀತಿಯಲ್ಲಿ ಬೇರೆ ಹೆಸರನ್ನು ಹೇಳಿ ತಿನ್ನಿಸಬೇಕು. ಹಾಗೆ ಒಂದುವೇಳೆ ತಿಳಿದರೆ ಅದರಲ್ಲಿ ಜಿಗುಪ್ಸೆಯುಂಟಾಗಿ ವಾಂತಿ ಮಾಡಿಕೊಳ್ಳುತ್ತಾನೆ. ಇದರಿಂದ ಬಲ, ಓಜಸ್ಸು ಗಳುಂಟಾಗುವುದಿಲ್ಲ. ವಾತದೋಷಪ್ರಧಾನವಿರುವ ಯಕ್ಷ್ಮರೋಗಿಗೆ ಪ್ರಸಹಾ ಪ್ರಾಣಿಮಾಂಸವನ್ನೂ, ಪಿತ್ತಕಫ ಪ್ರಧಾನವಿರುವವನಿಗೆ ಜಿಂಕೆ, ಮೊಲ ಮೊದಲಾದುವುಗಳ ಮಾಂಸಗಳನ್ನೂ, ಇವುಗಳಿಗೆ ಹಿತವಾಗಿರುವ ವೇಸವಾರ (ಮಸಾಲೆ)ಗಳನ್ನೂ ಸೇರಿಸಿ ಉಪಯೋಗಿಸಬೇಕು. ಮಸಾಲೆಗಳನ್ನು ಹುರಿ ಯುವುದಕ್ಕೆ ತುಪ್ಪ ಅಥವಾ ಸಾಸಿವೆ ಎಣ್ಣೆಯನ್ನು ಉಪಯೋಗಿಸಬಹುದು. ಯೂಷವನ್ನು ಮಾಡಲು ಮೂಲಂಗಿ, ಹುರಳಿಗಳನ್ನು ಸೇರಿಸಬಹುದು.

೧. **ಪೀನಸ**—ಸ್ವೇದ, ಅಭ್ಯಂಗ, ಧೂಮ, ಆಲೇಪನ, ಪರಿಷೇಕ ಮತ್ತು ಅವಗಾಹಸ್ನಾನಗಳನ್ನು ಮಾಡಿಸಬೇಕು. ಯವೆಯನ್ನು ಹುರಿದು ಗಂಜಿ ಮುಂತಾದುವನ್ನು ಅಥವಾ ಲಾವ, ತಿತ್ತಿರಿ (ವೇದಪಕ್ಷಿ), ಕೋಳಿ, ಗುಬ್ಬಚ್ಚಿಗಳ ಯಾವುದಾದರೊಂದರ ಮಾಂಸರಸಕ್ಕೆ ಲವಣ, ಅಮ್ಲ, ಕಟು

ರಸಗಳನ್ನೂ, ಉಷ್ಣವೀರ್ಯ ದ್ರವ್ಯಗಳನ್ನೂ ತುಪ್ಪದೊಡನೆ ಸೇವಿಸಲು ಕೊಡಬೇಕು.

(i) ಹಿಪ್ಪಲಿ,[೧] ಯವೆ, ಹುರುಳಿ, ಶುಂಠಿ, ದಾಳಿಂಬೆರಸ ಮತ್ತು ತುಪ್ಪಗಳನ್ನು ಹಾಕಿರುವ ಮಾಂಸರಸವು ಪೀನಸವೇ ಮೊದಲಾದ ಆರು ವಿಕಾರಗಳನ್ನೂ ಹೋಗಲಾಡಿಸುವುದು.

(ii) ಮೂಲಂಗಿ, ಹುರುಳಿಕಟ್ಟುಗಳಿಗೆ ಹಿಂಗು, ಆಮ್ಲ ಮತ್ತು ಲವಣಗಳನ್ನು ಸೇರಿಸಿ ಯವೆ, ಗೋಧಿ, ಶಾಲ್ಯನ್ನಗಳನ್ನು ಭೋಜನಮಾಡಿಸಬಹುದು. ಅನುಪಾನಕ್ಕೆ ಹಳೆದಾದ ತಿಳಿ ಮದ್ಯ ಅಥವಾ ಪಂಚಮೂಲ ಕಷಾಯವನ್ನು ಕುಡಿಸಬೇಕು.

(iii) ಆಹಾರಪದಾರ್ಥಗಳನ್ನು ಧನಿಯ ಮತ್ತು ಶುಂಠಿಕ್ವಾಥ ಅಥವಾ ಚತುಷ್ಪರ್ಣಿ (ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಕಾಡುದ್ದು ಮತ್ತು ಕಾಡುಹೆಸರು) ಕ್ವಾಥ ಅಥವಾ ನೆಲನೆಲ್ಲೀಕ್ವಾಥದಲ್ಲಿ ಬೇಯಿಸಿ ತಿನ್ನಿಸಬಹುದು.

೨. ಶಿರಃಪಾರ್ಶ್ವಾಂಸ ಶೂಲ—(ನಾಡೀಸ್ವೇದ, ಉಪನಾಹ, ಆಲೇಪನ, ನಾವನ, ಧೂಮ, ಭಕ್ತೋತ್ತರ ಸ್ನೇಹಪಾನ ಮತ್ತು ಬಸ್ತಿಕರ್ಮಗಳು.)

ಕೃಶರ,[೨] ಉತ್ಕಾರಿಕಾಗಳಿಂದಲಾಗಲೀ,[೩] ಮಾಷ, ಕುಲತ್ಥ ಯವೆಗಳಿಂದ ಮಾಡಿದ ಪಾಯಸದಿಂದಲಾಗಲೀ,[೪] ಕತ್ತು, ಪಾರ್ಶ್ವ, ಎದೆ ಮತ್ತು ಶಿರಸ್ಸುಗಳಿಗೆ ಸಂಕರಸ್ವೇದ ಮಾಡಬೇಕು. ಸುಖೋಷ್ಣವಾದ ಪತ್ರಭಂಗ ಕಷಾಯದಿಂದ ತಲೆಗೆ ಸ್ನಾನಮಾಡಿಸಬೇಕು. ಬಲಾಗುಡೂಚೀಮಧುಕ ಕ್ವಾಥದಿಂದ ನಾಡೀಸ್ವೇದವನ್ನು ಮಾಡಿಸಬೇಕು. ಕಂಠ, ಶಿರಸ್ಸು ಮತ್ತು ಪಾರ್ಶ್ವಗಳಿಗೆ

---

೧. ಸಪಿಪ್ಪಲೀಕಂ ಸಯವಂ ಸಕುಲತ್ಥಂ ಸನಾಗರಮ್ ।
ದಾಡಿಮಾಮಲಕೋಪೇತಂ ಸ್ನಿಗ್ಧಮಾಜಂ ರಸಂ ಪಿಬೇತ್ ॥
ತೇನ ಷಡ್ವಿನಿವರ್ತಂತೇ ವಿಕಾರಾಃ ಪೀನಸಾದಯಃ । ಚ.ಚಿ.ಅ. ೮.

೨. ಕೃಶರವೆಂದರೆ ಅಕ್ಕಿ, ಎಳ್ಳು ಮತ್ತು ಉದ್ದುಗಳಿಂದ ಮಾಡಿದ ಭಕ್ಷ್ಯಗಳು.

೩. ಉತ್ಕಾರಿಕಾ ಎಂದರೆ ರೊಟ್ಟಿ, ಹೋಳಿಗೆ ಮುಂತಾದ ಅಗಲವಾಗಿರುವ ಭಕ್ಷ್ಯಗಳು.

೪. ಪಾಯಸವೆಂದರೆ ಹಾಲು ಸೇರಿರುವ ಸಾಂದ್ರದ್ರವ.

ವಾತಹರದ್ರವ್ಯ ಕ್ವಾಥದಿಂದಲಾದರೂ ನಾಡೀಸ್ವೇದವನ್ನು ಮಾಡಿಸಬಹುದು. ಸಿಹಿಹಾಲೆ, ಸಬ್ಬಸಿಗೆ ಬೀಜ, ಕಳ್ಳಂಗಡಲೆ, ಅತಿಮಧುರ, ಬಜೆ, ವೇಸವಾರ[೧] ಮುಂತಾದುವುಗಳಿಗೆ ನಾಲ್ಕು ಬಗೆ ಸ್ನೇಹಗಳನ್ನು ಹಾಕಿರುವ ಸುಖೋಷ್ಣವಾದ ಉಪನಾಹವು ತಲೆ, ಪಕ್ಕೆ ಮತ್ತು ಹೆಗಲುಗಳ ನೋವುಗಳನ್ನು ಹೋಗಲಾಡಿಸುವುದು. ಲೇಪಕ್ಕೆ ಶತಪುಷ್ಪಾ, ಮಧುಕ, ಚಂಗಲ್ಕೋಷ್ಠ, ಗ್ರಂಥಿಕತಗರ, ಶ್ರೀಗಂಧ ಮತ್ತು ರಕ್ತಚಂದನಗಳನ್ನು ಚೂರ್ಣಿಸಿ ತುಪ್ಪದಲ್ಲಿ ಕಲಸಿ ಲೇಪ ಹಾಕಬೇಕು. ನಾವನ, ಧೂಮಪಾನ ಮತ್ತು ಊಟದನಂತರ ಘೃತಪಾನಗಳನ್ನು ಮಾಡಿಸಬೇಕು. ತೈಲಾಭ್ಯಂಗ ಮತ್ತು ಬಸ್ತಿಗಳು ಒಳ್ಳೆಯವು.

ಇಷ್ಟು ವಿಧ ಉಪಾಯಗಳಿಂದಲೂ ತಲೆ, ಪಕ್ಕೆ ಅಥವಾ ಹೆಗಲು ಭಾಗದ ಶೂಲೆಯು ನಿಲ್ಲದಿದ್ದರೆ ಆ ರೋಗಿಯ ದೋಷಕ್ಕೆ ತಕ್ಕಂತೆ ವಾತದಲ್ಲಿ[೨] ಶೃಂಗದಿಂದಲೂ, ಪಿತ್ತದಲ್ಲಿ ಜಲೂಕದಿಂದಲೂ ಮತ್ತು ಕಫದಲ್ಲಿ ಅಲಾಬುವಿನಿಂದಲೂ ದುಷ್ಟ ರಕ್ತವನ್ನು ತೆಗೆದುಬಿಡಬೇಕು ಅನಂತರ ಉಳಿದಿರುವ ದೋಷವನ್ನು ಸಂಶಮನ, ಲೇಪ ಮತ್ತು ಅಭ್ಯಂಗಗಳಿಂದ ಹೋಗಲಾಡಿಸಬೇಕು. ಪದ್ಮಕ, ಉಶೀರ ಮತ್ತು ರಕ್ತಚಂದನ ಕಲ್ಕವನ್ನು ತುಪ್ಪದಲ್ಲಿ ಬೆರಸಿ, ಅಥವಾ ಗರಿಕೆ, ಅತಿಮಧುರ, ಮಂಜಿಷ್ಠೆ ಮತ್ತು ನಾಗಕೇಸರಿ ಕಲ್ಕವನ್ನು ತುಪ್ಪದಲ್ಲಿ ಬೆರಸಿ ಲೇಪಿಸಬಹುದು. ಮೇಲೆ ಹಚ್ಚುವುದಕ್ಕೆ ಚಂದನಾದಿ ತೈಲ ಅಥವಾ ಶತಧೌತ ಘೃತವನ್ನು ಉಪಯೋಗಿಸಿ ಹಾಲಿನಿಂದಲಾಗಲೀ, ಅತಿಮಧುರ ಕ್ವಾಥದಿಂದಲಾಗಲೀ ಅಥವಾ ಶ್ರೀಗಂಧವೇ ಮೊದಲಾದ (ಚಂದನಾದಿಗಣ) ದ್ರವ್ಯಗಳನ್ನು ಮಳೆನೀರಿನಲ್ಲಿ ಕ್ವಾಥಮಾಡಿ ಆರಿಸಿ ಅದರಿಂದಲಾಗಲೀ ಸ್ನಾನಮಾಡಿಸಬೇಕು. (ಸ್ಥಾನಿಕವಾಗಿಯಾದರೂ ದ್ರವವನ್ನು ಹನಿಸಬೇಕು.)

ಶೋಷವಿರುವವನಿಗೆ ದೌರ್ಬಲ್ಯವುಂಟಾಗದ ರೀತಿಯಲ್ಲಿ ಎಂದರೆ ಅಲ್ಪ ಪ್ರಮಾಣದಲ್ಲಿ ಮಾತ್ರ ಶೋಧನಾದಿಕರ್ಮಗಳನ್ನು ನಡೆಸಬೇಕು. ಏಕೆಂದರೆ

---

೧. ನಿರಸ್ಥಿಪಿಶಿತಂ ಪಿಷ್ಟಂ ಸ್ವಿನ್ನಂ ಘೃತಗುಡಾನ್ವಿತಮ್
ಕೃಷ್ಣಾ ಮರಿಚಸಂಯುಕ್ತಂ ವೇಸವಾರ ಇತಿ ಸ್ಮೃತಃ ||

೨. ಪಿತ್ತಾನ್ವಿತಂ ಜಲೌಕೋಭಿರಲಾಬ್ವಾ ತು ಕಫಾನ್ವಿತಮ್ |
ಶೋಣಿತಂ ವಾತದುಷ್ಟಂ ತು ವಿಷಾಣೇನಾಶುನಿರ್ಹರೇತ್ ||

ಮೊದಲೇ ಧಾತುಕ್ಷೀಣತೆಯಿಂದ ದುರ್ಬಲನಾಗಿರುವವನಿಗೆ ಪುನಃ ಮಲ, ರಕ್ತ ಮುಂತಾದುವು ನಷ್ಟವಾದರೆ ಶರೀರ ನಾಶವಾಗುವುದು. ಕೇವಲ ಮಲವೊಂದೇ ವಿಶೇಷವಾಗಿ ವಿಸರ್ಜನೆಯಾದರೂ ರೋಗಿಯು ಸಾಯುವನು; ಇನ್ನು ವಮನ, ವಿರೇಚನ ಮತ್ತು ರಕ್ತಮೋಕ್ಷಣಗಳಿಂದ ಹೆಚ್ಚು ಅಪಾಯ ಸಂಭವಿಸುವುದರಲ್ಲಿ (ಶೀಘ್ರವಾಗಿ ಸಾಯುವುದರಲ್ಲಿ) ಸಂದೇಹವೇ ಇಲ್ಲ.

**೩. ಕಾಸ, ಶ್ವಾಸ ಮತ್ತು ಸ್ವರಭೇದ**—ದೋಷಾನುಸಾರವಾಗಿ ಆಯಾ ವ್ಯಾಧಿಯಲ್ಲಿ ಹೇಳಿದ ರೀತಿಯಲ್ಲಿ ಚಿಕಿತ್ಸಿಸಬೇಕು. ಸ್ವರಭೇದವಿರುವವನಿಗೆ ಕೋಷ್ಠವನ್ನು ಶುದ್ಧಿಮಾಡಿ ಬಲಾವಿದಾರಿಗಂಧಾದಿ ಘೃತದಿಂದ ನಸ್ಯ ಮಾಡಿಸಬೇಕು. ಪ್ರಪೌಂಡರೀಕ, ಅತಿಮಧುರ, ಹಿಪ್ಪಲಿ, ಹೆಗ್ಗುಳ್ಳ ಮತ್ತು ಕಳ್ಳಂಗಡಲೆ ಇವನ್ನು ಕಷಾಯಮಾಡಿ ಅದಕ್ಕೆ ಹಾಲು ಮತ್ತು ತುಪ್ಪಗಳನ್ನು ಹಾಕಿ ಸಿದ್ಧಪಡಿಸಿದ ಘೃತದಿಂದ ನಾವನ ಮಾಡಿಸಲು ಸ್ವರವೃದ್ಧಿಯಾಗುವುದು. ಈ ಘೃತವನ್ನೇ ಊಟದನಂತರ ಸೇವಿಸಿದರೆ ಶಿರಃಪಾರ್ಶ್ವಾಂಸ ಶೂಲೆಗಳೂ, ಕಾಸಶ್ವಾಸಗಳೂ ನಿವಾರಣೆಯಾಗುವುವು. ಹೀಗೆಯೇ ದಶಮೂಲಕ್ಷೀರ, ಮಾಂಸರಸ ಮತ್ತು ತುಪ್ಪಗಳನ್ನು ಬಲಾಕ್ವಾಥಕ್ಕೆ ಸೇರಿಸಿ ಮಾಡಿದ ಘೃತವನ್ನು ಭೋಜನೋತ್ತರ ಸೇವಿಸುವುದರಿಂದ ಈ ವ್ಯಾಧಿಗಳು ಕೂಡಲೇ ಹಿಮ್ಮೆಟ್ಟುವುವು.

ಅಗ್ನಿಬಲಕ್ಕೆ ತಕ್ಕಂತೆ ರೋಗಿಯು ಊಟದನಂತರ ಅಥವಾ ಊಟದ ಮಧ್ಯೆ ರಾಸ್ನಾಘೃತ[೧] ಅಥವಾ ಬಲಾಘೃತವನ್ನು[೨] ಸೇವಿಸುವುದರಿಂದ ಈ ಉಪದ್ರವಗಳೆಲ್ಲಾ ಹೋಗುವುವು.

(i) ಖರ್ಜೂರ, ದ್ರಾಕ್ಷೆ, ಸಕ್ಕರೆ ಮತ್ತು ಹಿಪ್ಪಲಿಗಳನ್ನು ಚೂರ್ಣಿಸಿ ತುಪ್ಪ ಮತ್ತು ಜೇನುತುಪ್ಪಗಳೊಡನೆ ಕಲಸಿ ಸೇವಿಸುವುದರಿಂದ ಸ್ವರಭೇದ, ಕಾಸ, ಶ್ವಾಸ ಮತ್ತು ಜ್ವರಗಳು ನಿವಾರಣೆಯಾಗುತ್ತವೆ.

(ii) ದಶಮೂಲಕ್ಷೀರದಿಂದ ಬಂದ ತುಪ್ಪವನ್ನು ಹಿಪ್ಪಲಿ ಚೂರ್ಣಕ್ಕೆ ಕಲಸಿ ನೆಕ್ಕುವುದರಿಂದ ಸ್ವರವೃದ್ಧಿಯಾಗುವುದು. ಶಿರಃಪಾರ್ಶ್ವಾಂಸಶೂಲಹರ.

---

೧. ಕಾಸಚಿಕಿತ್ಸಾ.

೨. ವಾತರಕ್ತಚಿಕಿತ್ಸಾ. ಚ.ಚಿ.

(iii) ಪಂಚಮೂಲಗಳ ಕ್ವಾಥ ನಾಲ್ಕು ಭಾಗ, ಹಾಲು ನಾಲ್ಕು ಭಾಗ ಮತ್ತು ತುಪ್ಪ ಒಂದು ಭಾಗ; ಇವುಗಳಿಂದ ಸಿದ್ಧಪಡಿಸಿದ ಘೃತವು ರಾಜಯಕ್ಷ್ಮದ ಏಳು ವಿಧ[೧] ಉಪದ್ರವಗಳನ್ನೂ ನಿವಾರಿಸುತ್ತದೆ.

(iv) ಷಟ್ಪಲ ಘೃತವು ಸ್ರೋತಃಶೋಧನ ಮಾಡುವುದರಿಂದ ರಾಜಯಕ್ಷ್ಮ, ಗುಲ್ಮ ಮುಂತಾದುವುಗಳಲ್ಲಿ ಶ್ರೇಷ್ಠವಾದುದು.

(v) ಶುಂಠಿ, ಚಿತ್ರಮೂಲ, ಭತ್ತದ ಅರಳು, ಹಿಪ್ಪಲಿ, ನೆಲ್ಲೀಚಟ್ಟುಮತ್ತು ಬೆಲ್ಲಗಳಿಂದ ಮಾಡಿದ ವಟಿಯು ಕಾಸ, ಶ್ವಾಸಾದಿಗಳನ್ನು ಹೋಗಲಾಡಿಸುತ್ತದೆ.

(vi) ಸಿತೋಪಲಾದಿ ಚೂರ್ಣ, ತಾಳೀಸಾದಿವಟಿಗಳು ಹೀಗೆಯೇ ಉತ್ತಮವಾದ ಔಷಧಗಳು. ಶೋಷ, ಹೃದಯ ಮತ್ತು ಪಾರ್ಶ್ವಶೂಲೆಗಳಲ್ಲಿ ಮಾಂಸಸರ್ಪಿಯನ್ನು[೨] ಕುಡಿಸಬೇಕು. ಈ ಸರ್ಪಿಯನ್ನು ಮಾಂಸರಸದೊಡನೆಯಾದರೂ ಕುಡಿಸಬಹುದು. ಇದು ವಾತ ಪಿತ್ತದೋಷಗಳಿಂದಾದ ಕಾಸ ಶ್ವಾಸಾದಿ ರೋಗಗಳನ್ನು ಪರಿಹರಿಸುತ್ತದೆ. ಉರಃಕ್ಷತದಲ್ಲಿ ಹೇಳಿರುವ ಘೃತ, ವಟ್ಯಾದಿಗಳನ್ನು ಕ್ಷಯಕಾಸ ಮುಂತಾದ ಉಪದ್ರವಗಳಲ್ಲೂ ಉಪಯೋಗಿಸಬಹುದು.

೪. **ಸ್ವರಸಾದ**ದಲ್ಲಿ ವಿಶೇಷವಾಗಿ ನಸ್ಯ, ಧೂಮ ಮುಂತಾದುವನ್ನುಪಯೋಗಿಸಬೇಕು. ವಾತದಲ್ಲಿ ರೋಗಿಯು ಊಟಮಾಡಿದನಂತರ ಸುಖೋಷ್ಣವಾದ ಘೃತಪಾನಮಾಡಬೇಕು. ಕಾಸಮರ್ದ (ಚಗತೆ), ಹೆಗ್ಗುಳ್ಳ, ಭೃಂಗರಾಜ ಇವುಗಳ ಸ್ವರಸದಿಂದ ಸಿದ್ಧಮಾಡಿದ ಘೃತವನ್ನು ಕುಡಿಯುವುದು ಒಳ್ಳೆ

---

೧. ಕಾಸ, ಶ್ವಾಸ, ಹಿಕ್ಕಾ, ಸ್ವರಕ್ಷಯ, ಶಿರಃ, ಪಾರ್ಶ್ವ ಮತ್ತು ಅಂಸಶೂಲ

೨. ಅಶ್ವಗಂಧಾತ್ ಶೃತಾತ್ಕ್ಷೀರಾದ್ ಘೃತಂ ಚ ಸಸಿತಾಪಯಃ ।
ಸಾಧಾರಣಾಮಿಷತುಲಾಂ ತೋಯದ್ರೋಣದ್ವಯೇ ಪಚೇತ್ ॥
ತೇನಾಷ್ಟಭಾಗಶೇಷೇಣ ಜೀವನೀಯೈಃ ಪಲೋನ್ಮಿತೈಃ ।
ಸಾಧಯೇತ್ಸರ್ಪಿಷಃ ಪ್ರಸ್ಥಂ ವಾತಪಿತ್ತಾಮಯಾಪಹಮ್ ॥
ಮಾಂಸಸರ್ಪಿರಿದಂ ಪೀತಂ ಯುಕ್ತಂ ಮಾಂಸರಸೇನ ವಾ ।
ಕಾಸಶ್ವಾಸಸ್ವರಭ್ರಂಶಶೋಷಹೃತ್ಪಾರ್ಶ್ವಶೂಲಜಿತ್ ॥ ಅ.ಹೃ.ಚಿ. ೫

ಯದು. ತುಪ್ಪದಲ್ಲಿ ಹುರಿದ ಬದರೀಪತ್ರ ಕಲ್ಕಕ್ಕೆ ಸ್ವಲ್ಪ ಸೈಂಧವಲವಣವನ್ನು ಸೇರಿಸಿ ತಿನ್ನಿಸಬಹುದು. ನಸ್ಯಕ್ಕೆ ಅತಿಮಧುರ, ದ್ರಾಕ್ಷೆ, ಹಿಪ್ಪಲಿ, ವಾಯುವಿಳಂಗ, ನೈದಿಲೆಗೆಡ್ಡೆ ಮತ್ತು ಹಂಸಪಾದಿ ಇವುಗಳಿಂದ ಮಾಡಿದ ತೈಲವನ್ನು ಉಪಯೋಗಿಸಬೇಕು. ತುಪ್ಪ. ಬೆಲ್ಲ ಸೇರಿರುವ ಅನ್ನವನ್ನು ತಿನ್ನಿಸಿ ಸುಖೋಷ್ಣ ಜಲಾನುಪಾನ ಮಾಡಿಸಬೇಕು. ಇವುಗಳ ಪಾಯಸವನ್ನು ಕುಡಿಸಿ, ಸ್ನಿಗ್ಧತೆಯನ್ನು ಮಾಡಿ ಸ್ವೇದಮಾಡಿಸಬೇಕು.

**ಪಿತ್ತದಿಂದಾದ** ಸ್ವರಸಾದದಲ್ಲಿ ಕ್ಷೀರವೃಕ್ಷಗಳ ಅಂಕುರಗಳಿಂದ ಸಿದ್ಧಮಾಡಿದ ಘೃತಕ್ಕೆ ಜೇನುತುಪ್ಪವನ್ನು ಸೇರಿಸಿ ಕುಡಿಸಿ, ಕಾದಾರಿದ ಹಾಲನ್ನು ಅನುಪಾನಕ್ಕೆ ಕೊಡಬೇಕು. ಏಲಕ್ಕಿ, ಒಂದೆಲೆಹೊನ್ನೆ, ನೆಲಗುಂಬಳದ ಗೆಡ್ಡೆರಸ, ಅತಿಮಧುರ ಮತ್ತು ಸ್ವಲ್ಪ ಸೈಂಧವಲವಣ ಇವುಗಳಿಂದ ಸಿದ್ಧಪಡಿಸಿದ ಘೃತವನ್ನು ನಸ್ಯಕ್ಕೆ ಉಪಯೋಗಿಸಬೇಕು.

**ಕಫಸ್ವರಸಾದ**ದಲ್ಲಿ ತ್ರಿಕಟುವನ್ನು ಗೋಮೂತ್ರದೊಡನೆ ಕುಡಿಸಬೇಕು. ರೂಕ್ಷಭೋಜನವು ಹಿತವಾದುದು. ಯವೆಯಿಂದ ಮಾಡಿದ ಯವಾಗೂವಿಗೆ ಹಿಪ್ಪಲಿ, ಆಮಲಕೀಚೂರ್ಣ, ತುಪ್ಪ ಮತ್ತು ಎಳ್ಳೆಣ್ಣೆಗಳನ್ನು ಸೇರಿಸಿ ಕುಡಿಸಬೇಕು. ಅನಂತರ ತೀಕ್ಷ್ಣವಾದ ವಮನವನ್ನು ಕೊಡಬೇಕು. ಮಧುರ ದ್ರವ್ಯಗಳ ಕ್ಷೀರಪಾಕಕ್ಕೆ ಸಕ್ಕರೆ ಜೇನುತುಪ್ಪಗಳನ್ನು ಹಾಕಿ ಕುಡಿಸಬೇಕು.

## ಇತರ ಉಪದ್ರವಗಳು

೧. ಹಸ್ತ, ಪಾದ ಮತ್ತು ಅಂಗಾಂಗಗಳಲ್ಲಿ ಉರಿ, ಜ್ವರ ಅಥವಾ ಊರ್ಧ್ವಮಾರ್ಗಗಳಲ್ಲಿ ರಕ್ತಹೋಗುತ್ತಿದ್ದರೆ ವಾಸಾಘೃತ[೧] ಅಥವಾ ಶತಾವರೀ ಘೃತ[೨] ಹಿತವಾದುದು.

೨. **ಅರುಚಿ**ಯಲ್ಲಿ ರೋಗಿಯ ಮನಸ್ಸಿಗೆ ಹಿತವಾಗಿರುವಂತೆ ವಿಧವಿಧವಾದ ಆಹಾರಗಳನ್ನು ಕೊಡಬೇಕು. ಮನಸ್ಸನ್ನು ಸಮಾಧಾನಪಡಿಸಬೇಕು. ಅರುಚಿಯನ್ನು ಹೋಗಲಾಡಿಸುವ ಬೇವಿನಕಡ್ಡಿ, ಕಗ್ಗಲಿ ಮುಂತಾದುವುಗಳಿಂದ

---

೧. ರಕ್ತಪಿತ್ತ ಚಿಕಿತ್ಸೆ. ೨. ಯೋನಿವ್ಯಾಪತ್ ಚಿಕಿತ್ಸೆ.

ಬೆಳಿಗ್ಗೆ ಮತ್ತು ಸಂಜೆ ದಂತಧಾವನ ಮಾಡಿಸಬೇಕು. ನಾಲಿಗೆಗೆ ತೋರುವ ರುಚಿಗೆ ವಿಪರೀತ ರಸವುಳ್ಳದಂತಹ ಕಾಸ್ಮವು ಒಳ್ಳೆಯದು. ಶರೀರದ ಬಾಹ್ಯಾಭ್ಯಂತರ ಶುದ್ಧನಾದ ರೋಗಿಗೆ ಮನಸ್ಸಿಗೆ ಸಮಾಧಾನ ಮಾಡುವ ಹೃದ್ಯವಾದ ಔಷಧಗಳನ್ನು ಉಪಯೋಗಿಸಬೇಕು ಬಾಯನ್ನು ಕಷಾಯಗಳಿಂದ ತೊಳೆಯಬೇಕು. ತಾಳೀಸಾದಿವಟಿ, ಕರ್ಪೂರ ಮತ್ತು ಸಕ್ಕರೆಗಳು ಅರುಚಿಯನ್ನು ಹೋಗಲಾಡಿಸುತ್ತವೆ. ವಾತದಲ್ಲಿ ತಿಳಿಮದ್ಯದ ಅನುಪಾನದೊಡನೆ ಹಿಪ್ಪಲಿ, ವಾಯುವಿಳಂಗ ಮುಂತಾದುವುಗಳನ್ನು ಅಥವಾ ಏಲಾದಿಚೂರ್ಣವನ್ನು ತುಪ್ಪದೊಂದಿಗೆ ತಿನ್ನಿಸಬಹುದು. ಬಜೆ ಕಷಾಯದಿಂದ ವಾಂತಿಮಾಡಿಸಬೇಕು. ಪಿತ್ತ ಅರುಚಿಯಲ್ಲಿ ಬೆಲ್ಲದ ಪಾನಕವನ್ನು ಕುಡಿಸಬೇಕು. ಅಥವಾ ಸಕ್ಕರೆ, ತುಪ್ಪ, ಸೈಂಧವಲವಣ ಮತ್ತು ಚಿಟ್ಟಿಜೇನುತುಪ್ಪವನ್ನು ಕಲಸಿ ನೆಕ್ಕಿಸಬಹುದು. ಕಫಾರೋಚಕದಲ್ಲಿ ನಿಂಬಕ್ವಾಥದಿಂದ ವಮನಮಾಡಿಸಿದನಂತರ ಬೇವು, ವೋಮ ಮತ್ತು ಕಕ್ಕೆ ಇವುಗಳ ಕ್ವಾಥವನ್ನು ಕುಡಿಸಬೇಕು. ಅಥವಾ ವಾಂತಿಮಾಡಿಸಿದನಂತರ ತೀಕ್ಷ್ಣವಾದ ಅರಿಷ್ಟವನ್ನಾಗಲೀ, ಮಧ್ವಾಸವವನ್ನಾಗಲೀ ಕುಡಿಸಬಹುದು. ಏಲಾದಿ ಅಥವಾ ತಾಳೀಸಾದಿ ಚೂರ್ಣವನ್ನು ಬಿಸಿನೀರಿನಲ್ಲಿ ಕುಡಿಸುವುದರಿಂದ ಅರುಚಿ, ಕಾಸ, ಶ್ವಾಸಗಳು ಹೋಗುವುವು.

೩. **ಕಫಪ್ರಸೇಕ**ದಲ್ಲಿ ಸ್ನಿಗ್ಧೋಷ್ಣದ್ರವ್ಯಗಳನ್ನುಪಯೋಗಿಸಬೇಕು. ಪೀನಸದಲ್ಲೂ ವಾಂತಿಯಲ್ಲೂ ಇದೇ ಕ್ರಮವನ್ನನುಸರಿಸಬೇಕು. ಪೀನಸದಲ್ಲಿ ವಿಶೇಷವಾಗಿ ಸ್ನೇಹಸ್ವೇದನಗಳನ್ನನುಸರಿಸಬೇಕು. ತಲೆ, ಪಕ್ಕೆ ಮತ್ತು ಕುತ್ತಿಗೆ ಪ್ರದೇಶಗಳಲ್ಲಿ ಸ್ನಿಗ್ಧವಾದ ಉತ್ಕಾರಿಕಾ ಅಥವಾ ಪಿಂಡಸ್ವೇದಗಳನ್ನು ಕೊಡಬೇಕು. ಲವಣ, ಅಮ್ಲ ಮತ್ತು ಕಟುರಸಗಳನ್ನುಳ್ಳ ಸ್ನಿಗ್ಧವಾದ ಮಾಂಸರಸ, ಜಲಚರ, ಆನೂಪಮಾಂಸಾದಿಗಳಿಂದ ಉಪನಾಹ ಮಾಡಿಸಬೇಕು.

೪. **ಪಿಚ್ಛಾತಿಸಾರದಲ್ಲಿ** ಅತಿಸಾರ ಮತ್ತು ಗ್ರಹಣೀಗಳಲ್ಲಿ ಹೇಳಿರುವ ಚಿಕಿತ್ಸೆಯನ್ನು ನಡೆಸಬೇಕು. ರಾಜಯಕ್ಷ್ಮಿಗೆ ಧಾತುಗಳೆಲ್ಲಾ ಕ್ಷೀಣವಾಗುತ್ತಿರುವುದರಿಂದ ಮಲವೊಂದರಿಂದಲಾದರೂ ಬಲವಿರುತ್ತದೆ. ಅತೀಸಾರದಿಂದ ಇದೂ ಕಳೆದು ಹೋದರೆ ರೋಗಿಯು ಶೀಘ್ರವಾಗಿ ಸಾಯುತ್ತಾನೆ. ಆದುದರಿಂದ ಪ್ರಯತ್ನಪೂರ್ವಕವಾಗಿ ಅವನ ಮಲವನ್ನು ರಕ್ಷಿಸಬೇಕು. ಇದೇ

ಕಾರಣದಿಂದ ಕ್ಷಯರೋಗಿಗೆ ತೀಕ್ಷ್ಣವಿರೇಚಕಗಳು ನಿಷಿದ್ಧವಾಗಿವೆ. ಯುಕ್ತಿಯಿಂದ ಮಾಂಸವನ್ನೇ ತಿನ್ನಿಸುತ್ತಾ ಮೃದ್ವೀಕಾಸವ ಅಥವಾ ದ್ರಾಕ್ಷಾರಿಷ್ಟವನ್ನು ಕುಡಿಸುತ್ತ ಬಂದರೆ ಮಲಸಂಗ್ರಹವಾಗುವುದು ಮತ್ತು ಬಲವೂ ಹೆಚ್ಚುವುದು. ಮಾಂಸದಿಂದ ದೇಹಪುಷ್ಟಿಯೂ, ಸೀಧು, ಅರಿಷ್ಟ ಮುಂತಾದ ಅನುಪಾನಗಳಿಂದ ಸ್ರೋತಶ್ಶೋಧನವೂ ಉಂಟಾಗಿ ಬಲ ಮತ್ತು ಓಜಸ್ಸುಗಳ ಅಭಿವೃದ್ಧಿಗಳಾಗುವುವು. ಸ್ನಿಗ್ಧಕೋಷ್ಠವುಳ್ಳವನಿಗೆ ಅಭ್ಯಂಜನ ಮತ್ತು ಅವಗಾಹಸ್ನಾನಗಳು ಹಿತವಾದುವು. ರೋಗಿಯ ಮೈಗೆ ಜೀವಂತ್ಯಾದಿ[೧] ಕಲ್ಕವನ್ನು ತಿಕ್ಕಿಕೊಂಡು ಆಯಾ ಋತುವಿಗೆ ಹಿತವಾಗಿರುವಂತೆ ಸುಖೋಷ್ಣಸ್ನಾನ ಮಾಡಬೇಕು. ಸುಗಂಧ ದ್ರವ್ಯಗಳ ಲೇಪನ, ಹೂಗಳನ್ನೂ, ಸಂತೋಷಕರವಾದ ವಸ್ತ್ರಾಭರಣಗಳನ್ನೂ ಧರಿಸುವುದು, ಸ್ನೇಹಿತರನ್ನು ಸೇರುವುದು, ಸುಖವಾದ ಆಸನ, ಮನೋಹರವಾದ ವಿಷಯಗಳು (ನೃತ್ಯ, ಗೀತ ಇತ್ಯಾದಿ), ಮೃದು ಉದ್ವರ್ತನ ಮುಂತಾದುವು ಅವನಿಗೆ ಪ್ರಿಯವಾಗಿರುತ್ತವೆ ಮತ್ತು ಮನಸ್ಸಿಗೆ ಧೈರ್ಯಕೊಡುತ್ತವೆ. ರೋಗಿಗೆ ಈ ವ್ಯಾಧಿಯು ಗುಣವಾಗುವುದೆಂಬ ಧೈರ್ಯವು ಚೆನ್ನಾಗಿದ್ದರೆ ಯಕ್ಷ್ಮವು ಜಾಗ್ರತೆಯಾಗಿ ದೂರವಾಗುವುದು. ದೈವವ್ಯಪಾಶ್ರಯವಾಗಿದ್ದರೆ ಅದನ್ನು ಪರಿಹರಿಸಲು ಸಂಪ್ರದಾಯಾನುಸಾರ ದಾನ, ಪೂಜೆ, ಶಾಂತಿ ಮುಂತಾದುವನ್ನು ನಡೆಸಬೇಕು. ಬ್ರಹ್ಮಚರ್ಯೆ, ದೈವಭಕ್ತಿ, ಗುರುಸೇವೆ ಮತ್ತು ಅಹಿಂಸೆ ಇವೆಲ್ಲವೂ ಧೈರ್ಯವನ್ನು ಹೆಚ್ಚಿಸುವುವು.

---

೧. ಸಿರಿಹಾಲೆ, ಶತಾವರೀ, ಮಂಜಿಷ್ಠೆ, ಕೊಮ್ಮೆ, ಅಶ್ವಗಂಧಿ, ಉತ್ತರಣೆ, ತಗ್ಗಿ, ಅತಿಮಧುರ, ಬಲಾಮೂಲ, ನೆಲಗುಂಬಳ, ಬಿಳಿಸಾಸುವೆ, ಚಂಗಲ್ಕೋಷ್ಠ, ಅಕ್ಕಿ, ಅಗಸೆಬೀಜ, ಉದ್ದು, ಎಳ್ಳು ಮತ್ತು ಕಿಣ್ವ ಇವೆಲ್ಲಕ್ಕೂ ಮೂರರಷ್ಟು ಯವೆ; ಇಷ್ಟನ್ನೂ ಚೂರ್ಣಿಸಿ ಮೊಸರು ಮತ್ತು ಸ್ವಲ್ಪ ಜೇನುತುಪ್ಪಗಳನ್ನು ಸೇರಿಸಿ ಉದ್ವರ್ತನ ಮಾಡುವುದರಿಂದ ಪುಷ್ಟಿ, ವರ್ಣ ಮತ್ತು ಬಲಗಳುಂಟಾಗುತ್ತವೆ.

ಅ.ಹೃ.ಚಿ ೫.



ರಾಜಯಕ್ಷ್ಮ
ಪ್ರತಿಶ್ಯಾಯ
ಸ್ವೇದ, ಅಭ್ಯಂಗ, ಧೂಮ,
ಆಲೇಪ, ಪರಿಷೇಕ,
ಅವಗಾಹ;
ಯಾವಕ, ವಾಟ್ಯ, ರಸ,
ಅಜಾಕ್ಷೀರ ಮತ್ತು ಘೃತ
ಶಿರಃಶೂಲ
ನಾಡೀಸ್ವೇದ
ಉಪನಾಹ
ಪರಿಷೇಕ
ಲೇಪನ
ನಾವನ
ಭಕ್ತೋತ್ತರ ಸ್ನೇಹಪಾನ
ಅಭ್ಯಂಗ
ಬಸ್ತಿ
ಅಶಾನ್ತೌ ರಕ್ತಮೋಕ್ಷಣಮ್ ।
ದಾಹೇಚಂದನಾದಿತೈಲಮ್ ।
ಶತಧೌತಘೃತಲೇಪಃ ।
ದೋಷಾಧಿಕ್ಯೇಶುದ್ಧಿಃ ।
ಕಾಸ
ಶ್ವಾಸ
ಯಥಾದೋಷ
ಸ್ತಥೋಪಕ್ರಮಃ
ಸ್ವರಕ್ಷಯ
ಶುದ್ಧಸ್ಯಸ್ನೇಹಃ
ನಾವನಮ್
ದಶಮೂಲಕ್ಷೀರಮ್
ಅಜಾಕ್ಷೀರಂ ಮಾಂಸಂಚ
ಕಫಪ್ರಸೇಕೇವಮನಮ್
ದೀಪನಂ ಭೋಜನಮ್
ಪಾರ್ಶ್ವಶೂಲ
ಶಿರಃಶೂಲವತ್

# ಉರಃಕ್ಷತನಿದಾನ

ಎದೆಯಲ್ಲಿರುವ ಅಭ್ಯಂತರ ಭಾಗಗಳಿಂದ ಕಂಠಮಾರ್ಗವಾಗಿ ರಕ್ತ ಬರುವುದಕ್ಕೆ **ಉರಃಕ್ಷತ**ವೆಂದೂ ಹೆಸರು. ರಕ್ತ ನಷ್ಟವಾಗಿ ಶರೀರ ಕ್ಷೀಣ ವಾಗುವುದರಿಂದ ಇದಕ್ಕೆ **ಕ್ಷತಕ್ಷೀಣ**ವೆಂದೂ ಹೇಳುವುದುಂಟು. ಸಾಹಸ ಕಾರ್ಯವನ್ನು ಮಾಡುವುದು, ಶಕ್ತಿಮೀರಿ ಕೆಲಸ ಮಾಡುವುದು, ತನಗಿಂತಲೂ ಬಲಿಷ್ಠರೊಡನೆ ಕುಸ್ತಿ ಮಾಡುವುದು, ಭಾರವನ್ನು ಎತ್ತುವುದು ಅಥವಾ ಹೊರು ವುದು, ವಿಶೇಷವಾಗಿ ಭಾಷಣ, ಸಂಗೀತ, ಸ್ತ್ರೀಸಂಗ ಮಾಡುವುದು ಮುಂತಾದ ಕಾರಣಗಳಿಂದ ಬಲಹೀನನಾದವನಿಗೆ ಎಂದರೆ ರೂಕ್ಷ ಮತ್ತು ಅಲ್ಪಾಹಾರ ಗಳನ್ನು ಸೇವಿಸುವವನಿಗೆ ಉರಸ್ಸಿನಲ್ಲಿರುವ ಸ್ರೋತಸ್ಸುಗಳು ಒಡೆದುಹೋಗಿ ರಕ್ತಸ್ರಾವವುಂಟಾಗುವುದು. ಇದರಿಂದ ಎದೆಯಲ್ಲಿ ಬಹಳ ನೋವುಂಟಾಗು ವುದು—ಭೇದಿಸಿದಂತೆ, ಹಿಂಡಿದಂತೆ, ಬಡಿದಂತೆ ನಾನಾವಿಧ ಬಾಧೆಗಳಾಗು ವುವು. ಎದೆ ಪಕ್ಕೆಗಳಲ್ಲಿ ಹೆಚ್ಚಾಗಿ ಹಿಂಡಿದಂತಾಗಿ ಶರೀರವು ಕೃಶವಾಗುವುದು ಮತ್ತು ನಡುಗುವುದು. ಕ್ರಮೇಣ ಶಾರೀರಕ ಮಾನಸಿಕ ಬಲಗಳು, ಶರೀರದ ವರ್ಣ, ರುಚಿ, ಅಗ್ನಿಗಳು ಕಡಿಮೆಯಾಗುತ್ತವೆ. ಜ್ವರ, ವ್ಯಥೆ, ಮನೋದೈನ್ಯ, ಕೆಲವಾರು ಸಲ ಮಲಪ್ರವೃತ್ತಿ, ಕೆಮ್ಮಿದರೆ ದುಷ್ಟ ಮತ್ತು ದುರ್ಗಂಧವಾದ, ಕಪ್ಪು ಹಳದಿ ಮಿಶ್ರವಾದ ಶ್ಲೇಷ್ಮವು ಬೀಳುವುದು. ಇದು ಹೆಚ್ಚಾಗಿಯೂ ಗಂಟುಗಂಟಾಗಿಯೂ ಸ್ವಲ್ಪ ರಕ್ತವಾಗಿಯೂ ಇರುವುದು. ಶುಕ್ರ ಮತ್ತು ಓಜಸ್ಸುಗಳು ಕ್ಷೀಣವಾಗುತ್ತವೆ.

ಉರಃಕ್ಷತವಾಗುವುದಕ್ಕೆ ಮೊದಲು ಲಕ್ಷಣಗಳು ಸ್ಪಷ್ಟವಾಗಿ ತಿಳಿಯುವು ದಿಲ್ಲ.

## ಉರಃಕ್ಷತಚಿಕಿತ್ಸಾ

ಎದೆನೋವು, ವಾಂತಿಯಲ್ಲಿ ರಕ್ತಬೀಳುವುದು, ದುಷ್ಟಕಾಸ, ರಕ್ತಮಿಶ್ರ ವಾದ ಮೂತ್ರ, ಪಾರ್ಶ್ವ, ಬೆನ್ನು ಮತ್ತು ಸೊಂಟ ಹಿಡಿದಿರುವುದು ಇವು ಉರಃ ಕ್ಷತದ ಮುಖ್ಯ ಲಕ್ಷಣಗಳು. ಬಲಿಷ್ಠನಾಗಿರುವವನಿಗೆ ಅಗ್ನಿಬಲವು ಚೆನ್ನಾಗಿದ್ದು,

ರೋಗವು ತರುಣಾವಸ್ಥೆಯಲ್ಲಿದ್ದು ಮತ್ತು ಅದರ ಲಕ್ಷಣಗಳು ಅಲ್ಪವಾಗಿದ್ದರೆ ಚಿಕಿತ್ಸೆಯು ಸಾಧ್ಯವಾಗುವುದು. ಒಂದು ವರ್ಷ ಹಳೆಯದಾದುದು ಯಾಪ್ಯ. ಎಲ್ಲಾ ಲಕ್ಷಣಗಳಿರುವ ಮತ್ತು ಹಳೆದಾದ ಹಾಗು ದುರ್ಬಲನಿಗೆ ಬಂದಿರುವ ಉರಃಕ್ಷತವು ಅಸಾಧ್ಯ. ಉರಃಕ್ಷತವುಂಟಾಗಿದೆಯೆಂದು ನಿರ್ಣಯವಾದಮೇಲೆ ಎದೆಯಿಂದ ಬರುತ್ತಿರುವ ರಕ್ತವನ್ನು ನಿಲ್ಲಿಸಲು ಕೂಡಲೇ ಚಿಕಿತ್ಸೆಯನ್ನು ಮಾಡಬೇಕು.

**ಯದ್ಯತ್ಸಂತರ್ಪಣಂ ಶೀತಂ ಅವಿದಾಹಿ ಹಿತಂ ಲಘು |**
**ಅನ್ನಪಾನಂ ನಿಷೇವ್ಯಂ ತತ್ ಕ್ಷತಕ್ಷೀಣೈಃ ಸುಖಾರ್ಥಿಭಿಃ ||**
**ಯಚ್ಚೋಕ್ತಂ ಯಕ್ಷ್ಮಿಣಾಂ ಪಥ್ಯಂ ಕಾಸಿನಾಂ ರಕ್ತಪಿತ್ತಿನಾಮ್ |**
**ತಚ್ಚ ಕುರ್ಯಾದವೇಕ್ಷ್ಯಾಗ್ನಿಂ ವ್ಯಾಧಿಂ ಸಾತ್ಮ್ಯಂ ಬಲಂ ತಥಾ ||**
**ಚ.ಚಿ. ೧೧.**

ರೋಗಿಯು ಬೃಂಹಣವಾದ, ಶೀತವೀರ್ಯದ, ವಿದಾಹವನ್ನುಂಟು ಮಾಡದೆ ಇರುವಂತಹ, ಹಿತ ಮತ್ತು ಲಘುವಾದ ಎಲ್ಲಾ ಅನ್ನಪಾನಗಳನ್ನೂ ಸೇವಿಸಬೇಕು. ಈ ರೋಗಿಗೆ ಅಗ್ನಿಬಲಕ್ಕೆ ತಕ್ಕಂತೆ ಅಭ್ಯಾಸವಿರುವ ಆಹಾರ ವನ್ನು ಕೊಡಬೇಕು. ಕ್ಷಯ, ಕಾಸ ಮತ್ತು ರಕ್ತಪಿತ್ತ ರೋಗಿಗಳಿಗೆ ಹೇಳಿರುವ ಪಥ್ಯಕ್ರಮಗಳನ್ನನುಸರಿಸಬೇಕು. ಉಪೇಕ್ಷೆಮಾಡಿದ್ದೇ ಆದರೆ ಕ್ಷಯರೋಗ ಉಂಟಾಗುವುದು. ಆದಕಾರಣ ರೋಗದ ಲಕ್ಷಣಗಳು ವೃದ್ಧಿಹೊಂದುವುದ ರೊಳಗಾಗಿಯೇ ಇದನ್ನು ಜಾಗ್ರತೆಯಾಗಿ ಗೆಲ್ಲಬೇಕು.

ಈ ರೋಗವನ್ನು ತಿಳಿದಕೂಡಲೇ ರೋಗಿಗೆ ಹಾಲಿಗೆ ಅರಗುಚೂರ್ಣ ಮತ್ತು ಜೇನುತುಪ್ಪಗಳನ್ನು ಹಾಕಿ ಕುಡಿಸಬೇಕು. ಅದು ಜೀರ್ಣವಾದ ಮೇಲೆ ಹಾಲು ಸಕ್ಕರೆಗಳನ್ನು ಹಾಕಿ ಊಟಮಾಡಿಸಬೇಕು. ಪಾರ್ಶ್ವ, ವಸ್ತಿ ಮೊದ ಲಾದುವುಗಳಲ್ಲಿ ನೋವಿದ್ದು, ಪಿತ್ತ ಮತ್ತು ಅಗ್ನಿಗಳು ಕಡಿಮೆಯಾಗಿದ್ದರೆ ಲಾಕ್ಷಾರಸದೊಂದಿಗೆ ಸ್ವಲ್ಪ ಮದ್ಯವನ್ನು ಸೇರಿಸಿ ಕುಡಿಸಬೇಕು. ಭೇದಿಯಾಗು ತ್ತಿದ್ದರೆ ಲಾಕ್ಷಾರಸಕ್ಕೆ ಮುಸ್ತಾ, ಅತಿವಿಷಾ, ಪಾಠಾ ಮತ್ತು ಕುಟಜತ್ವಕ್‌ಗಳ ಕಷಾಯವನ್ನು ಮಿಶ್ರಮಾಡಿ ಕುಡಿಸಬೇಕು. ಹಸಿವು ಚೆನ್ನಾಗಿದ್ದರೆ ಲಾಕ್ಷ, ತುಪ್ಪ, ಜೇನುಮಧುಕ, ಜೀವನೀಯಗಣ, ಸಕ್ಕರೆ ಮತ್ತು ಬಿದಿರುಪ್ಪು ಇವನ್ನು

ಹಾಲಿನೊಡನೆ ಕಾಯಿಸಿ ಕುಡಿಸಬೇಕು. ಕಬ್ಬಿನಬೇರು, ತಾವರೆಯ ದಂಟು, ಗೆಡ್ಡೆ ಮತ್ತು ಹೂವುಗಳು ಮತ್ತು ಚಂದನ ಇವುಗಳ ಕ್ಷೀರಪಾಕವನ್ನು ಜೇನು ತುಪ್ಪದೊಂದಿಗೆ ಕುಡಿಸುವುದರಿಂದ ಉರಃಸಂಧಾನವಾಗುವುದು. ಜ್ವರ ಮತ್ತು ದಾಹಗಳಲ್ಲಿ ಯವೆಹಿಟ್ಟನ್ನು ಹಾಲಿನಲ್ಲಿ ಕುದಿಸಿ ತುಪ್ಪವನ್ನು ಸೇರಿಸಿ ಕೊಡ ಬೇಕು; ಅಥವಾ ಅರಳುಹಿಟ್ಟು, ಸಕ್ಕರೆ ಮತ್ತು ಜೇನುತುಪ್ಪಗಳನ್ನು ಹಾಲಿಗೆ ಬೆರಸಿಕೊಡಬೇಕು. ಹಿಪ್ಪೆಹೂವು, ಅತಿಮಧುರ, ದ್ರಾಕ್ಷೆ, ಬಿದಿರುಪ್ಪು, ಹಿಪ್ಪಲಿ ಮತ್ತು ಕಳ್ಳಂಗಡಲೆಗಳನ್ನು ಕಲ್ಕಮಾಡಿ ಅದಕ್ಕೆ ತುಪ್ಪ ಮತ್ತು ಜೇನುತುಪ್ಪ ಗಳನ್ನು ಹಾಕಿ ನೆಕ್ಕಿಸುವುದರಿಂದ ಕೆಮ್ಮು, ಪಾರ್ಶ್ವಶೂಲ ಮತ್ತು ಅಸ್ಥಿಶೂಲೆ ಗಳು ಗುಣವಾಗುವುವು. ಏಲಾದಿಗುಟಿಕೆಯು ಕ್ಷತಕ್ಷೀಣಿಗೆ ಬಹಳ ಉಪ ಯೋಗವಾದುದು. ರಕ್ತವು ಬಹಳವಾಗಿ ಹೋಗುತ್ತಿದ್ದರೆ ಧಾನ್ಯಗಳ ಯೂಷ ಅಥವಾ ಸೀರಿನೊಡನೆ ಕೋಳಿಮೊಟ್ಟೆ ಅಥವಾ ಗುಬ್ಬಚ್ಚಿಮೊಟ್ಟೆಗಳ ಬಿಳಿಯ ಸಾರವನ್ನು ಅಥವಾ ಆಡು ಮುಂತಾದ ಜಾಂಗಲ ಪ್ರಾಣಿಮಾಂಸದ ರಕ್ತವನ್ನು ಕುಡಿಸಬೇಕು. ಬಿಳಿಕೊಮ್ಮೆಬೇರು, ಕೆಂಪು ಅಕ್ಕಿ ಮತ್ತು ಸಕ್ಕರೆಗಳ ಚೂರ್ಣ ವನ್ನು ದ್ರಾಕ್ಷೆಕಷಾಯಕ್ಕೆ ಬೆರಸಿ ಸ್ವಲ್ಪ ಹಾಲು ಮತ್ತು ತುಪ್ಪಗಳನ್ನು ಹಾಕಿ ಕುಡಿಸುವುದರಿಂದ ಕೆಮ್ಮಿದಾಗ ಬರುವ ರಕ್ತವು ನಿಲ್ಲುವುದು. ಮೂಢವಾತವನ್ನು ಹೋಗಲಾಡಿಸಲು ಆಡಿನ ಮೇದಸ್ಸನ್ನು ಸುರೆಯೊಂದಿಗೆ ಹುರಿದು ಸ್ವಲ್ಪ ಸೈಂಧವಲವಣವನ್ನು ಹಾಕಿ ತಿನ್ನಿಸಬೇಕು. ಕೃಶನಾಗಿಯೂ, ದುರ್ಬಲ ನಾಗಿಯೂ ಇರುವ ಉರಃಕ್ಷತರೋಗಿಗೆ ನಿದ್ದೆಯು ಬಾರದೆ, ಹಸಿವು ಮಾತ್ರ ಚೆನ್ನಾಗಿದ್ದರೆ ಹಾಲಿನ ಕೆನೆಗೆ ಸ್ವಲ್ಪ ತುಪ್ಪ ಮತ್ತು ಸಕ್ಕರೆಗಳನ್ನು ಕಲಸಿ ತಿನ್ನಿಸಬೇಕು.

ಆಹಾರಕ್ಕಾಗಿ ಯವೆ, ಗೋಧಿಹಿಟ್ಟು, ಜೀವಕ ಮತ್ತು ವೃಷಭಕಗಳ ಚೂರ್ಣಕ್ಕೆ ಸಮ ಸಕ್ಕರೆ ಬೆರಸಿ ಜೇನುತುಪ್ಪವನ್ನು ಹಾಕಿ ನೆಕ್ಕಿಸಿ, ಕಾಯಿಸಿ ಆರಿಸಿದ ಹಾಲನ್ನು ಕುಡಿಸಬೇಕು. ಮಾಂಸರಸವನ್ನು ತುಪ್ಪದಲ್ಲಿ ಕುದಿಸಿ (ಮಾಂಸವನ್ನು ತಿನ್ನುವ ಪ್ರಾಣಿಯ ಮಾಂಸ) ಅದಕ್ಕೆ ಹಿಪ್ಪಲಿ ಮತ್ತು ಜೇನು ತುಪ್ಪಗಳನ್ನು ಸೇರಿಸಿ ಕುಡಿಸುವುದರಿಂದ ರಕ್ತಮಾಂಸಗಳ ವೃದ್ಧಿಯುಂಟಾಗು ವುದು. ಪಂಚವಲ್ಕಲ, ಪಿಯಂಗು, ತಾಳೀಸೋತ್ರೆ, ನೇರಿಳೆಚೆಕ್ಕೆ, ಚಾರು ಪೊಪ್ಪು ಮತ್ತು ಪದ್ಮಕಗಳ ಕ್ಷೀರಪಾಕದಿಂದ ತುಪ್ಪ ತೆಗೆದು ಶಾಲ್ಯನ್ನಕ್ಕೆ ಹಾಕಿ

ತಿನ್ನಿಸಬೇಕು. ಮಧುಯಷ್ಟೀಘೃತ[1] ಅಥವಾ ಕೋಲಲಾಕ್ಷಾಘೃತವನ್ನಾದರೂ[2] ಉಪಯೋಗಿಸಬಹುದು. ಅನುಪಾನಕ್ಕೆ ಹಾಲನ್ನೇ ಕೊಡಬೇಕು.

ಅಮೃತಪ್ರಾಶಘೃತ, ಶ್ವದಂಷ್ಟ್ರಾದಿಘೃತ ಮತ್ತು ಧಾತ್ರ್ಯಾದಿಘೃತಗಳು ಫಲಕಾರಿಯಾದ ಯೋಗಗಳು. ಘೃತವನ್ನು ಅಲ್ಪಪ್ರಮಾಣದಲ್ಲಿ ಕೊಡುವುದರಿಂದ ಅಗ್ನಿಮಾಂದ್ಯವಾಗುವುದಿಲ್ಲ. ಆದರೆ ವಾತ ಮತ್ತು ಪಿತ್ತದೋಷಗಳು ಶಮನವಾಗುವುವು. ಕೃಶರು ಮತ್ತು ದುರ್ಬಲರು ಈ ಘೃತಗಳಲ್ಲಿ ಯಾವುದಾದರೊಂದನ್ನು ಬಿದಿರುಪ್ಪು, ಹಿಪ್ಪಲಿ ಮತ್ತು ಭತ್ತದರಳುಗಳ ಚೂರ್ಣಕ್ಕೆ ಗಟ್ಟಿಯಾಗುವಂತೆ ಕಲಸಿ ಜೇನುತುಪ್ಪ ಹಾಲುಗಳೊಂದಿಗೆ ಕುಡಿಯುವುದರಿಂದ ಅವರಿಗೆ ಜಾಗ್ರತೆಯಾಗಿ ಬಲವೀರ್ಯಪುಷ್ಟಿಗಳು ವೃದ್ಧಿಯಾಗುವುವು. ಈ ಯೋಗಕ್ಕೆ **ಸರ್ಪಿರ್ಗುಡ**ವೆಂದು ಹೆಸರು. ಈ ಬಗೆಯ ಸರ್ಪಿರ್ಗುಡಗಳು ರಕ್ತಪಿತ್ತದಲ್ಲೂ ಉಪಯೋಗವಾಗುವುವು.

ಅತಿವ್ಯವಾಯದಿಂದ ಬಸ್ತಿಯಲ್ಲಿ ಶೂಲೆ ಮುಂತಾದ ವಿಕಾರಗಳಿದ್ದರೆ ವಾತಹರವಾದ ಬೃಂಹಣಚಿಕಿತ್ಸೆಯನ್ನು ಮಾಡಿ ವೃಷ್ಯರಸಾಯನಗಳನ್ನು ಕೊಡಬೇಕು. ಕಾಸಜ್ವರಗಳನ್ನು ಹೋಗಲಾಡಿಸಲು ಕ್ಷತಕಾಸ ಚಿಕಿತ್ಸೆಯನ್ನು ಮಾಡಬೇಕು. ಹಾಲಿಗೆ ಸಕ್ಕರೆ ಮತ್ತು ಹಿಪ್ಪಲಿಗಳನ್ನು ಹಾಕಿ ಕುದಿಸಿ ತುಪ್ಪ ಮತ್ತು ಜೇನುತುಪ್ಪಗಳನ್ನು ಸೇರಿಸಿ ಕುಡಿಸಬೇಕು. ದಾಳಿಂಬೆ ಅಥವಾ ನೆಲ್ಲೀರಸಗಳನ್ನು ತುಪ್ಪದಲ್ಲಿ ಕುದಿಸಿ ಅದಕ್ಕೆ ನೆಲಗುಂಬಳ ಮತ್ತು ಕಬ್ಬಿನರಸಗಳನ್ನು ಸೇರಿಸಿ ಯೂಷದೊಂದಿಗೆ ಕೊಡುವುದರಿಂದ ಸ್ತ್ರೀಸಂಗದಿಂದುಂಟಾದ ಕಾರ್ಶ್ಯ ದೌರ್ಬಲ್ಯಗಳು ನಾಶವಾಗಿ ಬಲವೃದ್ಧಿಯಾಗುವುದು. ಯವೆಯನ್ನದ ಅಭ್ಯಾಸ

---

೧. ಅತಿಮಧುರ ಮತ್ತು ನಾಗಬಲಾ(ತುತ್ತಿಗಿಡ)ಗಳ ಕಷಾಯಮಾಡಿ ಅದಕ್ಕೆ ಸಮಭಾಗ ಹಾಲನ್ನು ಹಾಕಿ ಒಟ್ಟು ದ್ರವದ ನಾಲ್ಕನೆಯ ಒಂದು ಭಾಗ ತುಪ್ಪ ಹಾಕಿ ಪಾಕಮಾಡಿದ ಘೃತವು ಉರಃಕ್ಷತಿಗೆ ಹಿತವು.

೨. ಎಳಚಿಚಿಕ್ಕೆ ಮತ್ತು ಅರಗುಗಳನ್ನು ಕಷಾಯಮಾಡಿ, ಸಮಭಾಗ ತುಪ್ಪ ಮತ್ತು ತುಪ್ಪಕ್ಕೆ ಎಂಟರಷ್ಟು ಹಾಲು; ಕಲ್ಕಕ್ಕೆ ಹೆಮ್ಮರ, ಮರದರಿಸಿನ, ಕೊಡಸಿಗೆ ಇವುಗಳ ತೊಗಟೆ ಮತ್ತು ಇಂದ್ರಯವೆಗಳನ್ನು ಹಾಕಿ ಘೃತವನ್ನು ಸಿದ್ಧಪಡಿಸಬೇಕು.

ವಿರುವ ರೋಗಿಗೆ ಹಸಿವು ಚೆನ್ನಾಗಿದ್ದರೆ ಯವೆಯ ಸಕ್ತುವನ್ನು ವಸ್ತ್ರಗಾಳನೆ ಮಾಡಿ ಮೊಸರು, ತುಪ್ಪ ಮತ್ತು ಜೇನುತುಪ್ಪಗಳನ್ನು ಹಾಕಿ ಮಂಥವನ್ನು ಮಾಡಿ ಕುಡಿಸಬೇಕು. ತುಪ್ಪದಲ್ಲಿ ಹುರಿದ ಜಾಂಗಲ ಮಾಂಸರಸಕ್ಕೆ ಜೀವನೀಯದ್ರವ್ಯಗಳನ್ನೂ, ಸಕ್ಕರೆಯನ್ನೂ ಹಾಕಿ ತಿನ್ನಿಸಬೇಕು. ಯವಾನ್ನ, ಹೆಸರುಕಟ್ಟು ಮತ್ತು ತುಪ್ಪ ಸೇರಿರುವ ಫಲಾನ್ನಗಳನ್ನು ಕೊಡಬೇಕು. ಮಂದಾಗ್ನಿ ಮತ್ತು ಅತೀಸಾರಗಳಿದ್ದರೆ ರಾಜಯಕ್ಷ್ಮದಲ್ಲಿ ನಡೆಸುವಂತೆ ಚಿಕಿತ್ಸೆಯನ್ನು ಮಾಡಬೇಕು. ಸೈಂಧವಾದಿಚೂರ್ಣವು ಕ್ಷತಕ್ಷೀಣನಿಗೆ ದೀಪನ, ರುಚ್ಯ ಮತ್ತು ಬಲ್ಯವಾದುದರಿಂದ ಅನ್ನಪಾನಗಳಲ್ಲಿ ಉಪಯೋಗಿಸಬೇಕು. ಇದರಿಂದ ಪಾರ್ಶ್ವಶೂಲ, ಕಾಸ ಮತ್ತು ಶ್ವಾಸಗಳು ಹೋಗುವುವು.

ಕ್ಷತಕ್ಷೀಣನಿಗೆ ಈ ವಿಧವಾದ ಔಷಧ ಮತ್ತು ಆಹಾರಗಳನ್ನು ಕೊಟ್ಟ ನಂತರ ರಸಾಯನ ವಿಧಿಯನ್ನು ಪ್ರಯೋಗಿಸಬೇಕು. ಇದಕ್ಕಾಗಿ ನಾಗಬಲಾ ಬೇರನ್ನು ಹಾಲಿನಲ್ಲರೆದು ದಿನಕ್ಕೆ ಅರ್ಧಕರ್ಷದಂತೆ ಒಂದು ಪಲದವರೆಗೆ ಹೆಚ್ಚಿಸುತ್ತಾ ಅನಂತರ ಪ್ರತಿದಿನವೂ ಒಂದು ಪಲ ಪ್ರಮಾಣ ಕಲ್ಕವನ್ನು ಒಂದು ತಿಂಗಳುಕಾಲ ಕುಡಿಸಿ ಕೇವಲ ಹಾಲನ್ನೇ ಕೊಡುತ್ತಿರಬೇಕು. ಅನ್ನವನ್ನು ಕೊಡಬಾರದು. ಇದೇ ರೀತಿಯಲ್ಲಿ ಮಂಡೂಕಪರ್ಣಿಯನ್ನಾಗಲೀ, ಶುಂಠಿ ಅತಿಮಧುರಯೋಗವನ್ನಾಗಲೀ ಪ್ರಯೋಗಿಸಬಹುದು.

## ಸಂಗ್ರಹ

ಲಾಕ್ಷಾಕ್ಷೀರಂ ಸಂಗ್ರಹಣಮ್ ।
ಬೃಂಹಣಮವಿದಾಹಿ ಲಘೂನಿ ಸಾತ್ಮ್ಯಾನ್ನಾನಿ ।
ಕಾಸಕ್ಷಯರಕ್ತಪಿತ್ತಾಹಾರಾಃ ಪಥ್ಯಾಃ ।
ಪಾರ್ಶ್ವವಸ್ತ್ಯಾದಿ ಶೂಲೇಷು ಮಂದೇಗ್ನೌ ಚ ಲಾಕ್ಷಾದಿಪಾನಮ್ ।
ದೀಪ್ತೇಗ್ನೌ ಜೀವನೀಯಾನಿ, ಕ್ಷೀರಪಾಕಾಶ್ಚ ।
ಮೂಢವಾತೇ ಅಜಾಮೇದಃ ।
ರಸಾಯನಾನಿ ವೃಷ್ಯಾನಿ ।
ಯವಗೋಧೂಮಾದಯಃ ।

---

# ಪಾಂಡು ಮತ್ತು ಕಾಮಿಲಾನಿದಾನ

ಶರೀರದಲ್ಲಿರುವ ರಕ್ತದ ಪ್ರಮಾಣ, ವರ್ಣ ಮತ್ತು ಆಕೃತಿಗಳು ಹೀನವಾಗಿರುವ ಸ್ಥಿತಿಗೆ **ಪಾಂಡುರೋಗ**ವೆಂದು ಹೆಸರು. ರಕ್ತ, ಮಾಂಸಗಳು ವಿದಗ್ಧವಾಗಿ ಪಿತ್ತವು ಮಲವಾಗಿ ನಿಂತರೆ **ಕಾಮಿಲಾ** ಎಂದು ಹೇಳಲ್ಪಡುವುದು. ಈ ಎರಡು ವ್ಯಾಧಿಗಳಲ್ಲಿ ಪಿತ್ತವು ಪ್ರಧಾನವಾಗಿರುವುದು.

ಪಾಂಡುವಿನಲ್ಲಿ ಪಿತ್ತಪ್ರಧಾನದೋಷಗಳು ಧಾತುಗಳಲ್ಲಿ ಶೈಥಿಲ್ಯ ಮತ್ತು ಗೌರವಗಳನ್ನು ಉಂಟುಮಾಡುತ್ತವೆ. ಅಲ್ಲದೆ ಓಜಸ್ಸಿನ ಗುಣಗಳಾದ ಬಲ, ವರ್ಣ, ಸ್ನೇಹ, ಸೌಮ್ಯತೆ ಮುಂತಾದುವನ್ನೂ ಕಡಿಮೆ ಮಾಡುತ್ತವೆ. ಇವುಗಳಿಂದ ಅಲ್ಪರಕ್ತತೆ, ಅಲ್ಪ ಮೇದಸ್ಸು, ಇಂದ್ರಿಯ ಶೈಥಿಲ್ಯ ಮತ್ತು ವೈವರ್ಣ್ಯಗಳಾಗುತ್ತವೆ.

ವಿಶೇಷವಾಗಿ ಕ್ಷಾರ, ಅಮ್ಲ, ಲವಣ, ಅತ್ಯುಷ್ಣ, ವಿರುದ್ಧ ಮತ್ತು ಅಸಾತ್ಮ್ಯಗಳಾದ ಆಹಾರಗಳನ್ನು ಸೇವಿಸುವುದರಿಂದ ಅವು ವಿದಗ್ಧಪಾಕಗಳನ್ನು ಹೊಂದುವುವು. ಆ ಕಾಲದಲ್ಲಿ ದಿವಾಸ್ವಪ್ನ, ವ್ಯಾಯಾಮ, ವ್ಯವಾಯಗಳನ್ನು ಮಾಡುವುದರಿಂದಲೂ, ಪಂಚಕರ್ಮಗಳಲ್ಲಿ ಅಪಚಾರ (ನಿಯಮಗಳನ್ನು ಪಾಲಿಸದೆ) ನಡೆಯುವುದರಿಂದಲೂ, ಋತುಚರ್ಯೆಗಳಲ್ಲಿ ವ್ಯತ್ಯಾಸ, ವೇಗಧಾರಣ, ಕಾಮ, ಚಿಂತಾ, ಭಯ, ಕ್ರೋಧ ಮತ್ತು ಶೋಕ ಇವುಗಳಿಂದಲೂ ಪಿತ್ತ ಪ್ರಕೋಪವಾಗಿ ಹೃದಯಸ್ಥವಾದ ವಾತದೊಡನೆ ಸೇರಿ ಅಲ್ಲಿಂದ ಹೊರಡುವ ಧಮನಿಗಳ ಮೂಲಕ ಶರೀರವನ್ನೆಲ್ಲಾ ವ್ಯಾಪಿಸುವುದು. ಇದು ತ್ವಕ್ ಮತ್ತು ಮಾಂಸಗಳ ನಡುವೆ ಇರುವ ಕಫ, ವಾತ ಮತ್ತು ರಕ್ತಗಳನ್ನು ದೂಷಿಸಿ, ಬಿಳುಪು, ಹಳದಿ, ಹಸುರು ಬಣ್ಣಗಳನ್ನು ಉಂಟುಮಾಡುವುದು. ಇವುಗಳ ಪೈಕಿ ಪಾಂಡುವರ್ಣವೇ ಹೆಚ್ಚಾಗಿರುವುದರಿಂದ ಇದಕ್ಕೆ ಪಾಂಡುರೋಗವೆಂದು ಹೆಸರು ಬಂದಿದೆ ಇದು ಐದು ವಿಧ—(೧) ವಾತ, (೨) ಪಿತ್ತ, (೩) ಕಫ, (೪) ಸನ್ನಿಪಾತ ಮತ್ತು (೫) ಮೃದ್ಭಕ್ಷಣ.

**ಪೂರ್ವರೂಪ—ಹೃದಯಸ್ಪಂದನಂ ರೌಕ್ಷ್ಯಂ**
**ಸ್ವೇದಾಭಾವಃ ಶ್ರಮಸ್ತಥಾ ॥** ಚ.ಚಿ ೧೬.

ತ್ವಸ್ಫೋಟನಂಷ್ಠೀವನಗಾತ್ರಸಾದೌ
ಮೃದ್ಭಕ್ಷಣಂ ಪ್ರೇಕ್ಷಣಕೂಟಶೋಥಃ ।
ವಿಣ್ಮೂತ್ರಪೀತತ್ವಮಥಾವಿಪಾಕೋ
ಭವಿಷ್ಯತಸ್ತಸ್ಯ ಪುರಃಸರಾಣಿ ॥ ಸು.ಉ ೪೪.

ಹೃದಯದ ಸ್ಪಂದವು ಹೆಚ್ಚಾಗುವುದು, ಮೈ ರೂಕ್ಷವಾಗುವುದು, ಬೆವರು ಬಾರದಿರುವುದು, ಕೆಲಸ ಮಾಡದಿದ್ದರೂ ಆಯಾಸ ತೋರುವುದು ಇವು ಪಾಂಡುವಿನ ಪೂರ್ವ ಲಕ್ಷಣಗಳು. ಚರ್ಮ ಬಿರಿಯುವುದು, ಕೇಕರಿಸುವುದು, ದೌರ್ಬಲ್ಯ, ಮಣ್ಣು ತಿನ್ನಬೇಕೆಂಬ ಆಸೆ, ಕಣ್ಣು ಸುತ್ತ (ಅಕ್ಷಿಕೂಟ) ಊತ, ಮಲ, ಮೂತ್ರಗಳು ಹಳದಿಯಾಗಿರೋಣ ಮತ್ತು ಮಂದಾಗ್ನಿ ಇವು ಮುಂಗಡ ವಾಗಿರುವುವು.

ವಾತಪಾಂಡುವಿನಲ್ಲಿ ತ್ವಕ್, ಮೂತ್ರ, ಕಣ್ಣು ಮುಂತಾದುವು ರೂಕ್ಷ ವಾಗಿಯೂ, ಕೃಷ್ಣ ಅಥವಾ ಅರುಣವಾಗಿಯೂ ಇರುವುವು. ತೋದ, ಕಂಪ, ಆನಾಹ, ಭ್ರಮ ಮುಂತಾದುವು ಇರುವುವು.

ಪಿತ್ತದಲ್ಲಿ ಮಲಮೂತ್ರ ಮತ್ತು ಕಣ್ಣುಗಳು ಪೀತವಾಗಿರುವುವು. ಉರಿ, ಬಾಯಾರಿಕೆ, ಜ್ವರ, ಒಡಕುಮಲಪ್ರವೃತ್ತಿಗಳಿರುವುವು.

ಕಫಪಾಂಡುವಿನಲ್ಲಿ ಪ್ರಸೇಕ, ಶೋಥ, ತಂದ್ರ, ಆಲಸ್ಯ, ಮೈಭಾರ, ಕಣ್ಣು, ಚರ್ಮ, ಮೂತ್ರ ಮತ್ತು ಮುಖಗಳು ಬಿಳಿಚಿಕೊಂಡಿರುವುವು.

ಸನ್ನಿಪಾತದಲ್ಲಿ ಎಲ್ಲಾ ಲಕ್ಷಣಗಳೂ ಸೇರಿರುತ್ತವೆ.

ಒಗರು ಮಣ್ಣನ್ನು (ಜೇಡಿಮಣ್ಣು, ರಂಗೋಲಿ) ತಿನ್ನುವುದರಿಂದ ವಾತವೂ, ಚೌಳುಮಣ್ಣನ್ನು ತಿನ್ನುವುದರಿಂದ ಪಿತ್ತವೂ, ಮಧುರಮಣ್ಣನ್ನು (ಕೆಮ್ಮಣ್ಣು ಮುಂತಾದುವನ್ನು) ತಿನ್ನುವುದರಿಂದ ಕಫವೂ ಪ್ರಕೋಪವಾಗುವುವು. ಮಣ್ಣು ಪಾಕವಾಗದೆ ರಸವಹ ಸ್ರೋತಸ್ಸುಗಳನ್ನು ಮುಚ್ಚುತ್ತದೆ. ಇದರಿಂದ ರೂಕ್ಷತೆಯೂ, ಇಂದ್ರಿಯದೌರ್ಬಲ್ಯವೂ ಉಂಟಾಗಿ, ಶರೀರಶಕ್ತಿ ಮತ್ತು ಓಜಸ್ಸುಗಳು ಕ್ಷೀಣವಾಗುವುವು. ಬಲ, ವರ್ಣ ಮತ್ತು ಅಗ್ನಿಗಳು ನಷ್ಟವಾಗಿ ಪಾಂಡುರೋಗ ಸಂಭವಿಸುವುದು.

ಮೃತ್ಪಾಂಡುವಿನಲ್ಲಿ ಅಕ್ಷಿಕೂಟ, ಗಂಡ, ಹುಬ್ಬುಗಳು, ನಾಭಿ, ಮೇಹನ

ಗಳು ಊದಿರುವುವು. ಕೋಷ್ಠದಲ್ಲಿ ಕ್ರಿಮಿಗಳುತ್ಪತ್ತಿಯಾಗುವುವು. ರಕ್ತ, ಕಫ ಮತ್ತು ಮಣ್ಣಿನೊಂದಿಗೆ ಭೇದಿಯಾಗುವುದು.

**ಸಾಧ್ಯಾಸಾಧ್ಯ**—ಬಹು ರೂಕ್ಷವಾದ ಹಳೆಯದಾದ ಪಾಂಡುರೋಗವು ಗುಣವಾಗುವುದಿಲ್ಲ. ಕಣ್ಣಿಗೆಲ್ಲವೂ ಪೀತವಾಗಿ ಕಾಣಿಸುವ ರೋಗಿಯ ಮತ್ತು ಶೋಥವಿರುವ, ಮಲಬಂಧ ಅಥವಾ ಅತಿಸಾರವಿರುವ ರೋಗಿಯ ಪಾಂಡುತ್ವವು ಗುಣವಾಗುವುದಿಲ್ಲ. ಮುಖ, ಕೈ ಮತ್ತು ಕಾಲುಗಳಲ್ಲಿ ಶೋಥ, ಮಧ್ಯೆ ಮೈ ಬಾಡಿರುವುದು ಅಥವಾ ಮಧ್ಯಶರೀರ ಮಾತ್ರ ಊದಿರುವುದು; ಗುದ, ಶೇಫ ಮತ್ತು ಮುಷ್ಕಗಳು ಊದಿರುವುದು; ಮೂರ್ಛೆ, ಅತೀಸಾರ, ಜ್ವರಗಳಿಂದ ಕೂಡಿರುವುದು ಅಸಾಧ್ಯ

ಸಾಮಾನ್ಯವಾಗಿ ಪಾಂಡುರೋಗವಿರುವವನು ಪಿತ್ತವನ್ನುಂಟುಮಾಡುವ ಆಹಾರಾದಿಗಳನ್ನು ಸೇವಿಸುವುದರಿಂದ ಪ್ರಕೋಪ ಹೊಂದಿದ ಆ ದೋಷವು ಅವನ ರಕ್ತ ಮತ್ತು ಮಾಂಸಗಳನ್ನು ದೂಷಿಸಿ (ದಗ್ಧಮಾಡಿ) ಕಣ್ಣು, ಚರ್ಮ, ಉಗುರು ಮತ್ತು ಮುಖಗಳಲ್ಲಿ ವಿಶೇಷವಾಗಿ ಹಾರಿದ್ರ (ಅರಿಸಿನದ) ವರ್ಣ ವನ್ನುಂಟುಮಾಡುವುದು. ಮಲಮೂತ್ರಗಳು ಕೆಂಪು ಮತ್ತು ಹಳದಿ ವರ್ಣ ಯುಕ್ತವಾಗಿರುವುವು. ಇಂದ್ರಿಯ ದೌರ್ಬಲ್ಯ, ಉರಿ, ಅಜೀರ್ಣ, ಅರುಚಿ ಮತ್ತು ಕಾರ್ಶ್ಯಗಳಿರುವುವು ಈ ರೋಗವು ಕೋಷ್ಠಮಾರ್ಗವನ್ನೂ, ಶಾಖಾ ಮಾರ್ಗವನ್ನೂ ಆಶ್ರಯಿಸಿರುತ್ತದೆ.

ಕೋಷ್ಠವನ್ನು ಆಶ್ರಯಿಸಿರುವ ಕಾಮಾಲೆಯು ಬಹಳ ಹಳೆಯದಾದರೆ ರೂಕ್ಷತೆಯು ಹೆಚ್ಚಿ ಅಸಾಧ್ಯವಾಗುವುದು. ಈ ಸ್ಥಿತಿಗೆ **ಕುಂಭಕಾಮಿಲಾ** ಎಂದು ಹೆಸರು.

ಮಲಮೂತ್ರಗಳು ಕೃಷ್ಣ ಅಥವಾ ಪೀತವಾಗಿದ್ದು, ಶೋಥ ಮತ್ತು ಕಣ್ಣುಗಳು ಕೆಂಪಾಗಿರುವ, ರಕ್ತವನ್ನು ವಾಂತಿಮಾಡುವ, ಜ್ಞಾನ ತಪ್ಪುವ ಕಾಮಿಲಾರೋಗಿಯು ಬದುಕುವುದಿಲ್ಲ. ದಾಹ, ತೃಷ್ಣಾ, ಅರುಚಿ, ಆನಾಹ, ಸಂಜ್ಞಾನಾಶಗಳಿದ್ದರೂ ಅಸಾಧ್ಯ.

ವಾಂತಿ, ಹೃಲ್ಲಾಸ, ಜ್ವರ, ಸಂಕಟ, ಶ್ವಾಸ, ಕಾಸ ಮತ್ತು ಅತಿಸಾರ ಗಳಿರುವ ಕುಂಭಕಾಮಿಲಾ ರೋಗಿಯು ನಾಶವಾಗುತ್ತಾನೆ

ವಾತಪಿತ್ತದೋಷದಿಂದ ಪಾಂಡುರೋಗಿಗೆ ಹಸುರು ಹಳದಿ ಮತ್ತು ನಸುಗಪ್ಪುಗಳುಂಟಾಗಿ ಬಲ ಉತ್ಸಾಹಗಳು ಕ್ಷೀಣವಾಗಿ, ತಂದ್ರಾ, ಮಂದಾಗ್ನಿ, ಮೃದುಜ್ವರ, ಭ್ರಮ ಮುಂತಾದುವುಗಳಿದ್ದರೆ ಅದು **ಹಲೀಮಕ**ವೆನ್ನಲ್ಪಡುತ್ತದೆ.

## ಪಾಂಡು ಮತ್ತು ಕಾಮಿಲಾ ಚಿಕಿತ್ಸಾ

ಪಾಂಡು ಮತ್ತು ಕಾಮಿಲಾ ರೋಗಗಳನ್ನು ಕಾರಣಗಳಿಗನುಸಾರವಾಗಿ ಚಿಕಿತ್ಸಿಸಬೇಕು. ಈ ಎರಡು ವ್ಯಾಧಿಗಳಲ್ಲೂ ಪಿತ್ತದೋಷವೇ ಪ್ರಧಾನವಾದುದರಿಂದ ಅದನ್ನು ಪರಿಹರಿಸಲು ಸ್ನೇಹ ಮತ್ತು ಸಂಶೋಧನಗಳನ್ನು ನಡೆಸಬೇಕು. ಜ್ವರ, ರಕ್ತಪಿತ್ತ ಮುಂತಾದ ರೋಗಗಳ ಪರಿಣಾಮವಾಗಿ ಪಾಂಡುತ್ವವುಂಟಾಗುವುದರಿಂದ ಆಯಾ ವ್ಯಾಧಿಹರಚಿಕಿತ್ಸೆಗಳನ್ನು ನಡೆಸಿ ಅನಂತರ ಪಾಂಡುಹರ ಕ್ರಮಗಳನ್ನು ಅನುಸರಿಸುವುದರಿಂದ ರೋಗಿಯು ನೆಮ್ಮದಿಯಾಗುವನು. ಕಾಮಿಲೆಯಲ್ಲಿ ಪಾಂಡುರೋಗಹರ ಚಿಕಿತ್ಸೆಯನ್ನೇ ಅವಲಂಬಿಸಬೇಕು. ಅತಿ ಸ್ನಿಗ್ಧತೆಯಿಂದ ಉಂಟಾದ ಪಾಂಡುವಿನಲ್ಲಿ ರೂಕ್ಷತೀಕ್ಷ್ಣ ಶೋಧನವು ಒಳ್ಳೆಯದು. ರಕ್ತವಿದಗ್ಧತೆಯಿಂದ ಕಾಮಿಲಾರೋಗವುಂಟಾಗುವುದರಿಂದ ಪಿತ್ತಹರ ಕ್ರಮಗಳನ್ನನುಸರಿಸಬೇಕು. ತೀಕ್ಷ್ಣವಿರೇಚನ ಮತ್ತು ಅಂಜನಗಳನ್ನು ಮಾಡಿಸಬೇಕು.

## ಪಾಂಡು

### ಸಾಮಾನ್ಯ ಕ್ರಮ

ಸಾಧ್ಯವಾಗುವ ಪಾಂಡುರೋಗಿಗಳಿಗೆ ಸ್ನೇಹಕರ್ಮವಮಾಡಿಸಿ ತೀಕ್ಷ್ಣವಮನೌಷಧಗಳಿಂದ ವಾಂತಿಮಾಡಿಸಬೇಕು. ಇದಕ್ಕಾಗಿ ಅವನಿಗೆ ಮೊದಲು ಕಲ್ಯಾಣಘೃತ, ಪಂಚಗವ್ಯಘೃತ, ಮಹಾತಿಕ್ತಘೃತ, ಆರಗ್ವಧಾದಿಘೃತ ಇವುಗಳಲ್ಲಿ ಯಾವುದಾದರೊಂದನ್ನು ಕುಡಿಸಿ ಅನಂತರ ಮದನಕಲ್ಪ ಅಥವಾ ಮೂಲಿಸೀ ಕಲ್ಪದಿಂದ ವಾಂತಿಯನ್ನು ಮಾಡಿಸಬೇಕು; ಅಥವಾ ಹಾಲಿನೊಂದಿಗೆ ಗೋಮೂತ್ರವನ್ನಾಗಲೀ, ಕೇವಲ ಹಾಲನ್ನೇ ಆಗಲೀ ಅನೇಕ ಸಲ ಕುಡಿಸಬೇಕು. ಮೂತ್ರದಲ್ಲಿ ತ್ರಿಫಲಾಚೂರ್ಣವನ್ನು ಅರೆದು ಕುಡಿಸಬಹುದು;

ಸ್ವರ್ಣಕ್ಷೀರಿ,೧ ಬಿಳಿತಿಗಡೆ, ಕರಿತಿಗಡೆ, ದೇವದಾರು ಮತ್ತು ಶುಂಠಿಗಳನ್ನು ಗೋಮೂತ್ರದಲ್ಲಿ ಕಲ್ಕ ಮಾಡಿಯಾಗಲೀ, ಕ್ಷೀರಪಾಕ ಮಾಡಿಯಾಗಲೀ ಕುಡಿಸಲು ದೋಷಗಳ ಅನುಲೋಮನಗಳುಂಟಾಗುತ್ತವೆ. ಶುದ್ಧ ಲೋಹ ಭಸ್ಮವನ್ನು ಗೋಮೂತ್ರದಲ್ಲಿ ಏಳು ದಿನ ಭಾವನೆಮಾಡಿ ಹಾಲಿನೊಡನೆ ಕುಡಿಸ ಬೇಕು. ಇದು ಜೀರ್ಣಿಸಿದಮೇಲೆ ಹಾಲಿನೊಡನೆ ಹಳೇಶಾಲಿ, ಯವೆ, ಅಥವಾ ಗೋಧಿ ಅನ್ನವನ್ನು ಅಥವಾ ಮಧುರವಾದ ಮಾಂಸರಸವನ್ನು ತಿನ್ನಿಸ ಬೇಕು. ಹುರುಳಿ, ಗಣಿಕೆಸೊಪ್ಪು ಮತ್ತು ಪಾರಿವಾಳ ಮಾಂಸಗಳನ್ನು ಸೇವಿಸಬಾರದು. ಹೀಗೆ ಊರ್ಧ್ವ ಮತ್ತು ಅಧೋಮಾರ್ಗಗಳು ಶುದ್ಧವಾದ ಮೇಲೆ ಹರೀತಕಿಯನ್ನು ತುಪ್ಪ ಮತ್ತು ಜೇನುತುಪ್ಪಗಳಲ್ಲಿ ಕಲಸಿ ನೆಕ್ಕಿಸ ಬೇಕು. ನವಾಯಸಚೂರ್ಣ, ಮಂಡೂರವಟಿ, ಲೋಹಾಸವ, ಶಿಲಾಜತುವಟಿ, ದ್ರಾಕ್ಷಾದಿಲೇಹಗಳನ್ನು೨ ಉಪಯೋಗಿಸಬೇಕು. ಪಾಂಡು ಮತ್ತು ಕಾಮಿಲಾ ರೋಗಿಗಳಿಗೆ ಪಾನಭೋಜನಗಳಲ್ಲಿ ಲಘುಪಂಚಮೂಲ ಕ್ವಾಥ, ದ್ರಾಕ್ಷೆ ಮತ್ತು ನೆಲ್ಲೀಕಾಯಿರಸಗಳು ಶ್ರೇಷ್ಠವಾದುವು.

## ವಿಶೇಷ ಕ್ರಮ

ವಾತಪಾಂಡುವಿನಲ್ಲಿ ವಿಶೇಷವಾಗಿ ಘೃತಗಳನ್ನೇ ಉಪಯೋಗಿಸಬೇಕು. ಪಿತ್ತದಲ್ಲಿ ತಿಕ್ತ ಮತ್ತು ಶೀತವೀರ್ಯದ್ರವ್ಯಗಳನ್ನೂ, ಶ್ಲೇಷ್ಮದಲ್ಲಿ ಕಟು ಮತ್ತು ರೂಕ್ಷೋಷ್ಣ ದ್ರವ್ಯಗಳನ್ನೂ ಉಪಯೋಗಿಸಬೇಕು. ಸನ್ನಿಪಾತದಲ್ಲಿ ದೋಷ

---

೧. ಸ್ವರ್ಣಕ್ಷೀರೀತ್ರಿವೃಚ್ಛ್ಯಾಮಾ ಭದ್ರದಾರು ಮಹೌಷಧಮ್ ।
ಗೋಮೂತ್ರಾಂಜಲಿನಾ ಪಿಷ್ಟಂ ಶೃತಂ ತೇನೈವವಾ ಪಿಬೇತ್ ॥
ಸಾಧಿತಂ ಕ್ಷೀರಮೇಭಿರ್ವಾ ಪಿಬೇದ್ದೋಷಾನುಲೋಮನಮ್ । ಅ ಹೃ. ಚಿ. ೧೬

೨. ದ್ರಾಕ್ಷಾಪ್ರಸ್ಥಂ ಕಣಾಪ್ರಸ್ಥಂ ಶರ್ಕರಾರ್ಧತುಲಾಂ ತಥಾ ।
ದ್ವಿಪಲಂ ಮಧುಕಂ ಶುಂಠೀ ತ್ವಕ್ಷೀರೀಂಚ ವಿಚೂರ್ಣಿತಮ್ ॥
ಧಾತ್ರೀಫಲರಸದ್ರೋಣೇ ತತ್ಕ್ಷಿಪ್ತ್ವಾ ಲೇಹವತ್ಪಚೇತ್ ।
ಶೀತಾನ್ಮಧುಪ್ರಸ್ಥಯುತಾನ್ ಲಿಹ್ಯಾತ್ಪಾಣಿತಲಂ ತತಃ ॥
ಹಲೀಮಕಂ ಪಾಂಡುರೋಗಂ ಕಾಮಿಲಾಂಚ ನಿಯಚ್ಛತಿ । ಅ.ಹೃ.ಚಿ. ೧೬

ಬಲಾಬಲಗಳಿಗನುಸಾರವಾಗಿ ಮಿಶ್ರ ಚಿಕಿತ್ಸೆಯನ್ನು ಮಾಡಬೇಕು. ಮೃತ್ಪಾಂಡುವಿನಲ್ಲಿ ಯುಕ್ತಿಯಿಂದ ರೋಗಿಗೆ ಮಣ್ಣು ತಿನ್ನುವ ಅಭ್ಯಾಸವನ್ನು ತಪ್ಪಿಸಿ ಅವನ ಬಲಕ್ಕೆ ತಕ್ಕಂತೆ ತೀಕ್ಷ್ಣವಿರೇಚನಮಾಡಿಸಬೇಕು. ಶರೀರ ಶುದ್ಧವಾದನಂತರ ಬಲವನ್ನು ಹೆಚ್ಚಿಸುವ ಯೋಗ್ಯವಾದ ಘೃತಪಾನಮಾಡಿಸಬೇಕು ವ್ಯೋಷಾದಿ ಘೃತವು ಹಿತವಾದುದು. ಮಣ್ಣುತಿನ್ನುವ ಚಪಲವನ್ನು ತಪ್ಪಿಸಲು ಮಣ್ಣಿನ ಮೇಲೆ ದ್ವೇಷವುಂಟಾಗುವಂತೆ ಔಷಧಮಿಶ್ರಮಾಡಿಬೇಕು. ವಾಯುವಿಳಂಗ,[೧] ಏಲಕ್ಕಿ, ಅತಿಬಜೆ, ಬೇವಿನಸೊಪ್ಪು, ಅಗಳುಶುಂಠಿ, ಬದನೆಬೇರು, ಕಟುಕರೋಹಿಣಿ, ಕೊಡಸಿಗೆಬೀಜ, ಕೊರಟಿಗೆ (ಮೂರ್ವಾ) ಇವುಗಳ ಚೂರ್ಣಗಳಿಂದ ಮಿಶ್ರವಾಗಿರುವ ಮಣ್ಣು ಅದರ ಮೇಲೆ ದ್ವೇಷವನ್ನುಂಟುಮಾಡುವುದು. ಮೃತ್ಪಾಂಡುವಿನಲ್ಲೂ ಕುಪಿತದೋಷಾನುಸಾರವಾಗಿಯೇ ಚಿಕಿತ್ಸೆಯನ್ನು ಮಾಡಬೇಕು.

## ಕಾಮಿಲಾ

ಕಾಮಾಲೆಯಲ್ಲಿ ಪಾಂಡುರೋಗಕ್ಕೆ ವಿರೋಧವಲ್ಲದ ಪಿತ್ತಹರಚಿಕಿತ್ಸೆಯನ್ನು ನಡೆಸಬೇಕು. ಮೃದುವಿರೇಚನಗಳಿಂದ ಕೋಷ್ಠವನ್ನು ಶುದ್ಧಿಪಡಿಸಬೇಕು. ಪಾಂಡುವಿನಲ್ಲಿ ಹಿತವಾದ ಹಳೆಶಾಲಿ, ಷಷ್ಟಿಕ, ಯವೆ, ಗೋಧಿಗಳ ಅನ್ನ; ಹೆಸರು, ತೊಗರಿ, ಸಾರಂಗಿಬೇಳೆಗಳ ಕಟ್ಟು, ಜಾಂಗಲಮಾಂಸರಸಗಳು ಕಾಮಾಲೆರೋಗಿಗೂ ಹಿತಕರ. ಪಾಂಡುರೋಗಹರಗಳಾದ ಪಂಚಗವ್ಯ ಮುಂತಾದ ಘೃತಗಳನ್ನುಪಯೋಗಿಸಬೇಕು. ವಿದಗ್ಧಾಜೀರ್ಣವಿರುವವರಿಗೆ ಘೃತಗಳನ್ನು ಕೊಡಬಾರದು. ಪಿತ್ತಹರಚಿಕಿತ್ಸೆಮಾಡಿ ಕಾಮಿಲಾ ಸಿದ್ಧೌಷಧಗಳನ್ನು ಕೊಡಬೇಕು.

(i) ಕಕ್ಕೆ ಎಲೆಯ ಕ್ವಾಥ ಅಥವಾ ಕಬ್ಬಿನಹಾಲಿನೊಂದಿಗಾಗಲೀ, ನೆಲ್ಲೀಕಾಯಿಯ ರಸದೊಂದಿಗಾಗಲೀ ಸ್ವಲ್ಪ ತ್ರಿಕಟು ಸೇರಿಸಿ ಪಲದಷ್ಟನ್ನು ಕುಡಿಸಬೇಕು.

---

೧. ವಿಡಂಗೈಲಾತಿವಿಷಯಾ ನಿಂಬಪತ್ರೇಣ ಪಾಠಯಾ ।
ವಾರ್ತಾಕೈಃ ಕಟುರೋಹಿಣ್ಯಾ ಕೌಟಜೈರ್ಮೂರ್ವಯಾಪಿ ವಾ ॥ ಚ.ಚಿ. ೧೬

(ii) ಜಲಭೇದಿಸೊಪ್ಪಿನ ಕಲ್ಕ(ಒಂದು ಕರ್ಷ ಪ್ರಮಾಣ)ವನ್ನು ಎರಡ ರಷ್ಟು ತಣ್ಣೀರಿನೊಡನೆ ಕುಡಿಸಬೇಕು.

(iii) ತಿಗಡೆ ಮತ್ತು ತ್ರಿಫಲಾಗಳನ್ನು ಚೂರ್ಣಿಸಿ ಜೇನುತುಪ್ಪದಲ್ಲಿ ಕಲಸಿ ತಿನ್ನಿಸಬಹುದು.

(iv) ತ್ರಿಫಲಾ ಮತ್ತು ಗುಡೂಚೀಕ್ವಾಥಕ್ಕೆ ಅಥವಾ ಮರದರಿಸಿನ ಮತ್ತು ಬೇವಿನಚೆಕ್ಕೆ ಕ್ವಾಥಕ್ಕೆ ಜೇನುತುಪ್ಪ ಸೇರಿಸಿ ನಿತ್ಯವೂ ಬೆಳಗ್ಗೆ ಕುಡಿಸು ವುದರಿಂದ ಕಾಮಿಲಾರೋಗವು ನಿವಾರಣೆಯಾಗುತ್ತದೆ.

(v) ಅರಿಸಿನ, ಗೈರಿಕ ಮತ್ತು ಆಮಲಕೀಗಳಿಂದ ಅಂಜನ ತಯಾರಿಸಿ ಕಣ್ಣಿಗೆ ಹಾಕುವುದರಿಂದ ಕಾಮಿಲಾ ಗುಣವಾಗುವುದು.

ಕಾಮಿಲಾರೋಗಿಯ ಮಲವು ಎಳ್ಳುಹಿಂಡಿಯ ಬಣ್ಣಕ್ಕಿದ್ದರೆ ಪಿತ್ತ ಮಾರ್ಗವು ಕಫದಿಂದ ತಡೆಯಲ್ಪಟ್ಟಿದೆಯೆಂದು ತಿಳಿದು, ಕಫಹರ ಔಷಧ ಗಳನ್ನು ಕೊಡಬೇಕು ರೂಕ್ಷ, ಶೀತ, ಗುರು, ಸ್ವಾದುದ್ರವ್ಯಗಳನ್ನು ಸೇವಿಸಿ ವ್ಯಾಯಾಮ ಮಾಡುವುದು, ವೇಗಗಳನ್ನು ತಡೆಯುವುದು ಇವುಗಳಿಂದ ಕಫ ದಿಂದ ಕೂಡಿದ ವಾತವು ಪಿತ್ತವನ್ನು ಸ್ವಸ್ಥಾನದಿಂದ ಹೊರಡಿಸುವುದು. ಈ ಪಿತ್ತವು ಕಣ್ಣು, ಮೂತ್ರ, ಚರ್ಮಗಳನ್ನು ಅರಿಸಿನ ವರ್ಣ ಮಾಡುತ್ತದೆ. ಮಲವು ಮಾತ್ರ ಬಿಳುಪಾಗಿ(ಹಾರಿದ್ರ ರಹಿತವಾಗಿ)ರುತ್ತದೆ. ಕೋಷ್ಠದಲ್ಲಿ ಗುಡುಗುಡು ಶಬ್ದ, ಮಲಬಂಧ, ಹೃದಯಗೌರವ, ದೌರ್ಬಲ್ಯ, ಅಗ್ನಿನಾಶ, ಪಾರ್ಶ್ವಶೂಲೆ, ಹಿಕ್ಕಾಶ್ವಾಸ, ಅರುಚಿ, ಜ್ವರಗಳುಂಟಾಗುತ್ತವೆ. ಪಿತ್ತವು ಸ್ವಲ್ಪಸ್ವಲ್ಪವಾಗಿ ಶಾಖೆಗಳಲ್ಲೂ ತುಂಬಿಕೊಳ್ಳುತ್ತದೆ.

ಇಂತಹ ರೋಗಿಗೆ ನವಿಲು, ತಿತ್ತಿರಿ, ಕೋಳಿಗಳ ಮಾಂಸಗಳನ್ನು ರೂಕ್ಷ ವಾಗಿಯೇ (ತುಪ್ಪವಿಲ್ಲದಂತೆ) ಸ್ವಲ್ಪ ಆಮ್ಲಕಟುಯುಕ್ತವಾಗಿ ಕೊಡಬೇಕು. ಒಣಗಿದ ಮೂಲಂಗಿ, ಹುರಳಿಕಟ್ಟು (ಕಫವಾತಹರ) ಅನ್ನಗಳನ್ನು ತಿನ್ನಿಸ ಬೇಕು. ಮಾದಳ ರಸ, ತ್ರಿಕಟು ಮತ್ತು ಜೇನುತುಪ್ಪಗಳನ್ನು ಕಲಸಿ ಕೊಡಿ ಸುವುದರಿಂದ ಪಿತ್ತವು ತನ್ನ ಸ್ಥಾನವನ್ನು ಸೇರುವುದು. ಮಲವು ಪಿತ್ತವರ್ಣ ವಾಗಿ ವಾತಶಮನವಾಗುವವರೆಗೂ ಆ ರೋಗಿಗೆ ಕಟು, ತೀಕ್ಷ್ಣ, ಉಷ್ಣ, ಲವಣ ಮತ್ತು ಅತಿಯಾದ ಹುಳಿರಸದ್ರವ್ಯಗಳನ್ನು ಕೊಡಬೇಕು. ಪಿತ್ತವು

ಸ್ವಸ್ಥಾನಕ್ಕೆ ಸೇರಿಕೊಂಡು ಮಲಕ್ಕೆ ವರ್ಣಬಂದನಂತರ ಕಾಮಿಲಾರೋಗಕ್ಕೆ ಹಿಂದಿನಂತೆ ಚಿಕಿತ್ಸೆ ಮಾಡಬೇಕು.

ಹಲೀಮಕವಿರುವ ರೋಗಿಗೆ ಗುಡೂಚೀ ರಸ, ಹಾಲು ಮತ್ತು ಎಮ್ಮೆ ತುಪ್ಪಗಳಿಂದ ಸಿದ್ಧಮಾಡಿದ ಘೃತವನ್ನು ಕುಡಿಸಿ ಆಮಲಕ ರಸಕ್ಕೆ ತ್ರಿವೃತ್ತನ್ನು ಸೇರಿಸಿ ವಿರೇಚನಕ್ಕೆ ಕೊಡಬೇಕು. ವಾತಪಿತ್ತಹರಗಳಾದ ದ್ರಾಕ್ಷಾದಿಲೇಹ, ಮಧುರಪ್ರಾಯಘೃತ, ಯಾಪನವಸ್ತಿ, ಕ್ಷೀರವಸ್ತಿ ಮತ್ತು ಅನುವಾಸನವಸ್ತಿ ಗಳನ್ನು ಕೊಡಬೇಕು. ಅಗ್ನಿವೃದ್ಧಿಗಾಗಿ ದ್ರಾಕ್ಷಾರಿಷ್ಟವನ್ನು ಕೊಡಬಹುದು. ಕಾಸವಿದ್ದಲ್ಲಿ ಅಳಲೆಕಾಯಿ ಲೇಹವನ್ನೂ ಹಿಪ್ಪಲಿ, ಅತಿಮಧುರ ಮತ್ತು ಬಲಾ ಗಳನ್ನು ಚೂರ್ಣಿಸಿ ಅದನ್ನು ಹಾಲಿನೊಡನೆ ಕುಡಿಸಬೇಕು.

---


ಪಾಂಡು
ವಾತ
ಸ್ನೇಹಃ
ಪಿತ್ತ
ಶೀತಂ
ಕಫ
ಕಟುತೀಕ್ಷ್ಣೋಷ್ಣಂ
ಸನ್ನಿಪಾತ
ಮಿಶ್ರಕ್ರಮಃ
ಸ್ನಿಗ್ಧಸ್ಯ ತೀಕ್ಷ್ಣಂ ವಮನಂ
ಅನುಲೋಮನಂಚ |
ಮೃಜ್ಜ
ಸುತೀಕ್ಷ್ಣಂಶೋಧನಂ
ಶುದ್ಧೇಸರ್ಪಿಂಷಿ ಬಲಾದಾನಾನಿ
ಶುದ್ಧಸ್ಯಮೂತ್ರಭಾವಿತಲೋಹಚೂರ್ಣಂ |
ಮಂಡೂರವಟೀ, ಶಿಲಾಜತುವಟೀ ಚ |

# ಅತೀಸಾರನಿದಾನ

ಶರೀರದಲ್ಲಿರುವ ಅಪ್ ಧಾತುವು ಮಲದೊಡನೆ ಮಿಶ್ರವಾಗಿ ಕೋಷ್ಠದಲ್ಲಿ ಹೆಚ್ಚಾಗಿ ಅಧೋಮಾರ್ಗವಾಗಿ ನಿಸೃತವಾಗಿ ಹೋಗುವುದಕ್ಕೆ **ಅತೀಸಾರ**ವೆಂದು ಹೆಸರು.

ಅತೀಸಾರವು ಆರು ಬಗೆ: (೧) ವಾತ, (೨) ಪಿತ್ತ, (೩) ಕಫ, (೪) ಸನ್ನಿಪಾತ, (೫) ಶೋಕ ಮತ್ತು (೬) ಆಮ.

**ಪೂರ್ವರೂಪ**—ಹೃದಯ, ಗುದ, ಉದರ(ವಿಶೇಷವಾಗಿ ನಾಭಿ)ಗಳಲ್ಲಿ ತೋದ, ಕಾರ್ಶ್ಯ, ವಾತದ ತಡೆ, ಮಲಬಂಧ, ಆಧ್ಮಾನ ಮತ್ತು ಆಹಾರ ಪಾಕವಾಗದಿರುವುದು ಅತೀಸಾರದ ಮುನ್ಸೂಚನೆಗಳು.

ವಾತಾತೀಸಾರದಲ್ಲಿ ಮಲವು ನೊರೆನೊರೆಯಾಗಿ ಅರುಣವಾಗಿಯೂ, ರೂಕ್ಷವಾಗಿಯೂ, ಸ್ವಲ್ಪಪ್ರಮಾಣದಲ್ಲಿ ಬಾರಿಬಾರಿಗೂ ಆಮಮಿಶ್ರವಾಗಿ, ಶಬ್ದದಿಂದ ವಿಸರ್ಜನೆಯಾಗುತ್ತದೆ.

ವಾತವೃದ್ಧಿಯಾಗುವ ಕಾರಣಗಳಿಂದ ಎಂದರೆ ರೂಕ್ಷಾಹಾರ, ತಂಗಾಳಿ, ಬಿಸಿಲು, ವ್ಯಾಯಾಮ ಇವುಗಳನ್ನು ಅತಿಯಾಗಿ ಸೇವಿಸುವುದು, ಅಲ್ಪಭೋಜನ, ಉಪವಾಸ, ತೀಕ್ಷ್ಣಮದ್ಯ, ಅಧಿಕ ವ್ಯವಾಯ, ವೇಗಗಳನ್ನು ಉದೀರಣ ಮಾಡುವುದು (ಮುಕ್ಕುವುದು) ಇವುಗಳಿಂದ ಪ್ರಕುಪಿತವಾದ ವಾತವು ಅಗ್ನಿಯನ್ನು ಕಡಿಮೆ ಮಾಡಿ ಸ್ವೇದ, ಮೂತ್ರಗಳ ದ್ರವಾಂಶವನ್ನೆಲ್ಲಾ ಕೋಷ್ಠಕ್ಕೆ ಸೆಳೆದು ಮಲದೊಡನೆ ಮಿಶ್ರಮಾಡಿ ಅದನ್ನು ಅಳ್ಳಕವಾಗಿ ಮೇಲಿಂದ ಮೇಲೆ ಹೊರಡಿಸುತ್ತದೆ.

ಪಿತ್ತಾತೀಸಾರದಲ್ಲಿ ಮಲವು ಪೀತ, ನೀಲ ಮತ್ತು ಸ್ವಲ್ಪ ಕೆಂಪು ವರ್ಣವಾಗಿ ಭೇದಿಯಾಗಿ ಹೋಗುತ್ತದೆ. ಮಲವು ದುರ್ಗಂಧವಾಗಿರುವುದು. ರೋಗಿಗೆ ತೃಷ್ಣಾ, ದಾಹ, ಸ್ವೇದ, ಮೂರ್ಛಾ, ಶೂಲೆ ಮತ್ತು ಗುದದಲ್ಲಿ ವಿಶೇಷವಾಗಿ ಉರಿ ಇವೆಲ್ಲಾ ಇರುತ್ತವೆ ಕಟು, ಅಮ್ಲ, ಲವಣ, ಕ್ಷಾರ, ಉಷ್ಣ, ತೀಕ್ಷ್ಣ ಪದಾರ್ಥಗಳನ್ನು ಸೇವಿಸುವುದರಿಂದಲೂ ಬಿಸಿಲಿನ ತಾಪ ಮುಂತಾದುವುಗಳಿಂದ ಪಿತ್ತವು ಉದ್ರೇಕವಾಗಿ ತನ್ನ ದ್ರವಸ್ವಭಾವದಿಂದ ಅಗ್ನಿ

ಯನ್ನು ತಗ್ಗಿಸಿ (ಬೆಂಕಿಗೆ ಬಿಸಿನೀರನ್ನು ಹಾಕಿದಂತೆ), ಪುರೀಷಾಶಯವನ್ನು ಸೇರುವುದು. ಇದು ಉಷ್ಣಸ್ವಭಾವದಿಂದಲೂ, ದ್ರವಸ್ವಭಾವದಿಂದಲೂ ಮಲವನ್ನು ಒಡೆದು ನೀರಾಗಿ ಮಾಡುತ್ತದೆ.

ಕಫಾತೀಸಾರದಲ್ಲಿ ಬೆಳ್ಳಗೆ ಶ್ಲೇಷ್ಮಯುಕ್ತವಾಗಿ ದುರ್ವಾಸನೆಯಿಂದ ಭೇದಿಯಾಗುತ್ತದೆ. ಮಲವು ಸ್ವಲ್ಪ ಸಾಂದ್ರವಾಗಿ ತಣ್ಣಗಿರುತ್ತದೆ. ರೋಮಾಂಚನವಿರುತ್ತದೆ ಉದರ, ಗುದ, ವಸ್ತಿ ಮತ್ತು ವಂಕ್ಷಣಗಳಲ್ಲಿ ಗುರುತ್ವವು ತೋರುತ್ತದೆ. ಮಲವು ಹೋಗುತ್ತಿದ್ದರೂ ರೋಗಿಗೆ ಅದರ ಅರಿವಿರುವುದಿಲ್ಲ. ನಿದ್ದೆ, ಸೋಮಾರಿತನ, ಉತ್ಕ್ಲೇಶ, ಅಗ್ನಿಸದನ ಮತ್ತು ಅನ್ನದ್ವೇಷಗಳಿರುವುವು.

ಸನ್ನಿಪಾತಾತೀಸಾರದಲ್ಲಿ ಈ ಎಲ್ಲಾ ಕಾರಣಗಳೂ ಸೇರಿರುತ್ತವೆ. ಮಲವು ಹಂದಿಯ ಕೊಬ್ಬಿನಂತೆಯೂ ಸ್ನಿಗ್ಧವಾಗಿಯೂ ಎಲ್ಲಾ ಲಕ್ಷಣಗಳಿಂದಲೂ ಕೂಡಿರುತ್ತದೆ. ಇದು ಅಸಾಧ್ಯವಾದುದು. ಅತಿಶೀತ, ಅತ್ಯುಷ್ಣ, ಗುರು, ಕಠಿಣ, ವಿಷಮ, ವಿರುದ್ಧ ಮತ್ತು ಅಸಾತ್ಮ್ಯ ಭೋಜನಗಳಿಂದಲೂ, ಉಪವಾಸದಿಂದಲೂ, ಅವೇಳೆಯಲ್ಲಿ ಊಟ ಮಾಡುವುದು, ಹೆಚ್ಚು ತಿನ್ನುವುದು ದುಷ್ಟವಾದ ನೀರನ್ನು ಕುಡಿಯುವುದು, ಶರೀರವನ್ನು ಶುದ್ಧಿಮಾಡಿಕೊಳ್ಳದೆ ಇರುವುದು ಅಥವಾ ಪಂಚಕರ್ಮಗಳಲ್ಲಿ ಅಪಚಾರ ಮಾಡುವುದು, ಕ್ರಿಮಿ ಮುಂತಾದ ಕಾರಣಗಳಿಂದ ಮೂರು ದೋಷಗಳೂ ಪ್ರಕೋಪವಾಗಿ ಎಲ್ಲಾ ಲಕ್ಷಣಯುತ ಭೇದಿಗಳಾಗುವುವು. ಶೋಕಾತೀಸಾರ ಮತ್ತು ಭಯಾತೀಸಾರಗಳು ಆಗಂತುಕವಾದುವು; ಮಾನಸಿಕ ದೋಷಗಳಿಂದ ವಾತ ಪ್ರಕೋಪವಾಗಿ ವಾತಾತೀಸಾರಲಕ್ಷಣಗಳನ್ನೇ ಹೊಂದಿರುವುವು. ಮಲವು ಗುಲಗಂಜಿ ಬಣ್ಣಕ್ಕೆ (ಅರುಣಸದೃಶ) ಇರುವುದು. ಮಲಮಿಶ್ರವಾಗಿಯೂ, ಮಲವಿಲ್ಲದೆಯೂ, ನಿರ್ಗಂಧವಾಗಿ ಅಥವಾ ಗಂಧಯುಕ್ತವಾಗಿ ಭೇದಿಗಳಾಗುವುವು. ಇದು ಕಷ್ಟಸಾಧ್ಯವಾದುದು.

ಆಮಾತೀಸಾರವು ನಾನಾವರ್ಣಯುಕ್ತವಾಗಿರುವುದು. ನೋವಿನಿಂದ ಅನೇಕ ಬಾರಿ ಭೇದಿಗಳಾಗುವುದು. ಅನ್ನಾಜೀರ್ಣದಿಂದ ವಿಮಾರ್ಗ ಹೊಂದಿದ ದೋಷಗಳು ರಸ, ರಕ್ತ ಮುಂತಾದ ಧಾತುಗಳನ್ನೂ ಮಲಗಳನ್ನೂ ಒಟ್ಟುಗೂಡಿಸಿ ಕೋಷ್ಠದಿಂದ ಹೊರಗೆ ಹಾಕುವುವು.

**ದೋಷಜವಾದ ಅತೀಸಾರಗಳಲ್ಲಿ ಆಮ ಮತ್ತು ನಿರಾಮ (ಪಕ್ವ) ಲಕ್ಷಣ** ಗಳಿರುವುವು.

**ಸ್ರೋತೋರೋಧ ಬಲಭ್ರಂಶ ಗೌರವಾನಿಲಮೂಢತಾಃ ।**
**ಆಲಸ್ಯಾಪಕ್ತಿನಿಷ್ಠೀವ ಮಲಸಂಗಾರುಚಿಕ್ಲಮಾಃ ॥**
**ಲಿಂಗಂ ಮಲಾನಾಂ ಸಾಮಾನಾಂ ನಿರಾಮಾಣಾಂ ವಿಪರ್ಯಯಃ ।**

ಅ.ಹೃ.ಸೂ. ೧೩

ಸ್ರೋತಸ್ಸುಗಳ ತಡೆಯುಂಟಾಗಿರುವುದು, ದೌರ್ಬಲ್ಯ, ಮೈಭಾರ, ವಾತವು ಸರಿಯದಿರುವುದು, ಸೋಮಾರಿತನ, ಜೀರ್ಣವಿಲ್ಲದಿರುವುದು, **ಕೇಕರಿ** ಸುವುದು, ಮಲಬಂಧ, ಅರುಚಿ ಮತ್ತು ಕ್ಲಮಗಳು ಆಮಾವಸ್ಥೆಯ ಲಕ್ಷಣ ಗಳು. ಇವುಗಳಿಗೆ ವಿಪರೀತ ಲಕ್ಷಣಗಳು ನಿರಾಮ ಲಕ್ಷಣಗಳು. ಮಲವು ನೀರಿನಲ್ಲಿ ಮುಳುಗಿದರೆ, ದುರ್ಗಂಧ ಮತ್ತು ಪೈಚ್ಛಿಲ್ಯಗಳಿಂದಿದ್ದರೆ ಆಮವೆಂದೂ ನೀರಿನ ಮೇಲೆ ತೇಲಿದರೆ, ದುರ್ಗಂಧ ಮತ್ತು ಪೈಚ್ಛಿಲ್ಯಗಳಿಲ್ಲದಿದ್ದರೆ ಪಕ್ವ ವೆಂದೂ ತಿಳಿಯಬೇಕು.

ಪಿತ್ತಾತೀಸಾರಿಯು ಪಿತ್ತಲವಾದ ಆಹಾರಾದಿಗಳನ್ನು ಅತಿಯಾಗಿ ಸೇವಿ ಸುವುದರಿಂದ ಸ್ರೋತಸ್ಸುಗಳು ಪಾಕವಾಗಿ ರಕ್ತವೇ ನೇರವಾಗಿ ಮಲಮಿಶ್ರವಾಗಿ ಪ್ರವೃತ್ತಿಯನ್ನು ಹೊಂದುವುದು. ಇದಕ್ಕೆ **ರಕ್ತಾತೀಸಾರ**ವೆಂದು ಹೆಸರು.

ಅಮಿತಾಹಾರವನ್ನು ಸೇವಿಸುವುದರಿಂದ ವಾತವು ವೃದ್ಧಿಯಾಗಿ ಕೋಷ್ಠ ದಲ್ಲಿ ಸೇರಿರುವ ಕಫವನ್ನು ಕೆಳಮುಖವಾಗಿ ತಳ್ಳುವುದು. ಇದರಿಂದ ಬಹಳ ನೋವುಂಟಾಗಿ ಮುಕ್ಕುವನು. ಮಲವು ಸ್ವಲ್ಪವೇ ಹೊರಡುವುದು. ಇದರೊಡನೆ ವಾತ ಮತ್ತು ಶ್ಲೇಷ್ಮಗಳು ಸೇರಿರುವುವು. ಇದಕ್ಕೆ **ಪ್ರವಾಹಿಕಾ** ಎಂದು ಹೆಸರು. ವಾತದಿಂದ ನೋವು, ಪಿತ್ತದಿಂದ ದಾಹ, ಕಫದಿಂದ ಕಫಮಿಶ್ರ ಮಲ, ರಕ್ತದಿಂದ ರಕ್ತಮಿಶ್ರ ಮಲಗಳಾಗುವುವು. ಪ್ರವಾಹಿಕಾದಲ್ಲೂ ಆಮ ಮತ್ತು ಪಕ್ವಲಕ್ಷಣಗಳನ್ನು ಮೇಲಿನಂತೆಯೇ ನಿಶ್ಚಯಿಸಬೇಕು.

**ಅಸಾಧ್ಯ ಲಕ್ಷಣಗಳು**—ಮಲವು ನೇರಳೆಹಣ್ಣು ಅಥವಾ ಯಕೃತ್ ಬಣ್ಣಕ್ಕಿದ್ದರೆ ತುಪ್ಪ, ಎಣ್ಣೆ, ಮಜ್ಜಾ ಮುಂತಾದುವುಗಳನ್ನು **ಹೋಲಿದರೆ**

ಅಸಾಧ್ಯವೆಂದು ತಿಳಿಯಬೇಕು. ತೃಷ್ಣಾ, ದಾಹ, ಜ್ವರ, ಹಿಕ್ಕಾ, ಪಾರ್ಶ್ವ ಶೂಲ, ಮೂರ್ಛಾ, ನಿಃಸೃತಗುದವು ಒಳಗೆ ಹೋಗದೆ ಇರುವುದು, ಮೈ ತಣ್ಣ ಗಿರುವುದು ಮುಂತಾದ ಲಕ್ಷಣಗಳಿದ್ದರೂ ಅತೀಸಾರವು ಅಸಾಧ್ಯ.

## ಅತೀಸಾರಚಿಕಿತ್ಸಾ

ವಾತಾತೀಸಾರದಲ್ಲಿ ಆಮದೋಷವಿರುವುದರಿಂದ ವಾತಪ್ರಧಾನವಾದರೂ ಲಂಘನವನ್ನು ಮಾಡಿಸಬೇಕು. ಆಮಾತೀಸಾರದಲ್ಲಿ ಭೇದಿಗಳನ್ನು ತಡೆಯಲು ಸಂಗ್ರಹಣೌಷಧಗಳನ್ನು ಪಯೋಗಿಸಬಾರದು. ಆಮದೋಷವು ಶರೀರದಲ್ಲೇ ನಿಂತು ದಂಡಕಾಲಸಕವೇ ಮೊದಲಾದ ರೋಗಗಳನ್ನುಂಟುಮಾಡುವುದರಿಂದ ಮೊದಲು ತಾನಾಗಿಯೇ ಹೋಗುತ್ತಿರುವ ಭೇದಿಗಳನ್ನು ಉಪೇಕ್ಷಿಸಬೇಕು.

**ದಂಡಕಾಲಸಕಾಧ್ಮಾನ ಗ್ರಹಣ್ಯರ್ಶೋಗದಾಂಸ್ತಥಾ |**
**ಶೋಥ ಪಾಂಡ್ವಾಮಯಪ್ಲೀಹಕುಷ್ಠಗುಲ್ಮೋದರಜ್ವರಾನ್ ||**

ದೋಷ ಉತ್ಕ್ಲೇಶದಿಂದ ಶೂಲ ಪ್ರಸೇಕಗಳಿದ್ದರೆ ವಮನವನ್ನು ಮಾಡಿಸಬೇಕು. ಭೇದಿ ಸ್ವಲ್ಪ ಸ್ವಲ್ಪವಾಗಿ ಆಗುತ್ತಿದ್ದರೆ ಸರಿಯಾಗಿ ಹೋಗಲು ಹರೀತಕಿಯನ್ನು ಕೊಡಬೇಕು. ದೋಷವು ಹೋಗಲಾಗಿ ಭೇದಿ ನಿಲ್ಲುವುದು. ಮೈ ಹಗುರಾಗುವುದು, ಅಗ್ನಿವೃದ್ಧಿಯಾಗುವುದು. ಆಮಾವಸ್ಥೆಯಲ್ಲಿ ಲಂಘನ ಮಾಡಿಸಿ ದೀಪನಪಾಚನಗಳಾದ ಪ್ರಮಥ್ಯಾದಿ ಕಷಾಯಗಳನ್ನು ಕುಡಿಸಬೇಕು. ಮುಸ್ತಪರ್ಪಟ ಅಥವಾ ಶುಂಠೀಹ್ರೀಬೇರಗಳಿಂದ ಮಾಡಿದ ಪ್ರಮಥ್ಯಾ ಕಷಾಯವನ್ನು ಕುಡಿಸಬೇಕು. ಶರೀರವು ದುರ್ಬಲವಾಗಿ ಹಸಿವು ಕಂಡು ಬಂದಾಗ ಅದು ಅನ್ನಕಾಲವೆಂದು ತಿಳಿದು ಲಘುವಾದ ಅನ್ನ(ಪೇಯಾದಿ ಅನ್ನ ಪ್ರಕ್ರಿಯೆಗಳನ್ನು)ವನ್ನು ಕೊಡಬೇಕು. ಇದರಿಂದ ಅವನಿಗೆ ಆಹಾರದಲ್ಲಿ ರುಚಿಯೂ, ಅಗ್ನಿವೃದ್ಧಿಯೂ, ಶರೀರಬಲವೂ ಜಾಗ್ರತೆಯಾಗಿ ಉಂಟಾಗುವುವು. ಗಂಜಿಗೆ ತರ್ಪಣ (ಅರಳು ಹಿಟ್ಟು), ಮಜ್ಜಿಗೆ, ಸುರಾ, ಮಧು ಇವುಗಳನ್ನು ರೋಗಿಯ ಅಭ್ಯಾಸಕ್ಕೆ ಅನುಕೂಲವಿದ್ದಂತೆ ಉಪಯೋಗಿಸಬೇಕು. ಅನಂತರ ಗ್ರಾಹಿ, ದೀಪನ ಮತ್ತು ಪಾಚನೌಷಧಗಳೊಂದಿಗೆ ಕೂಡಿರುವ ಆಹಾರಗಳನ್ನು ಕೊಡಬೇಕು. ಲಘುಪಂಚಮೂಲ, ಪಂಚಕೋಲ, ವೃಕ್ಷಾಮ್ಲ, ದಾಡಿಮಾಮ್ಲ

ಮುಂತಾದ ವಾತಶ್ಲೇಷ್ಮಹರ ಗಣದ ದ್ರವ್ಯಗಳನ್ನು ಅನ್ನಪಾನ, ಸೂಪಗಳಲ್ಲಿ ಕೊಡುವುದರಿಂದ ಅತೀಸಾರರೋಗಿಗೆ ಹಿತವಾಗಿರುವುದು. ಇವು ಗ್ರಾಹಿ, ರುಚ್ಯ ಮತ್ತು ಬಲ್ಯವಾದುವು ಹಸಿವು ಚೆನ್ನಾಗಿದ್ದು ದೋಷ ಹೆಚ್ಚಾಗಿ ಭೇದಿಗಳು ತಡೆದು ತಡೆದು ಆಗುತ್ತಿರುವ ಅತೀಸಾರಿಗೆ ಹಿಪ್ಪಲಿ, ವಾಯುವಿಳಂಗ ಮತ್ತು ತ್ರಿಫಲಾಗಳನ್ನು ಹಾಕಿ ಕಷಾಯ ಮಾಡಿ ಕುಡಿಸುವುದರಿಂದ ವಿರೇಚನವಾಗು ವುದು ಅನಂತರ ದೀಪನ ಮತ್ತು ವಾತಘ್ನದ್ರವ್ಯಗಳಿಂದ ಮಾಡಿದ ಪೇಯ ವನ್ನು ಕುಡಿಸಬೇಕು. ದುರ್ಬಲನಿಗೆ ಲಂಘನ ವಿನಹ ಉಳಿದ ಎಲ್ಲಾ ಕ್ರಿಯೆ ಗಳನ್ನೂ ನಡೆಸಬೇಕು. ಆಮದಿಂದ ಮಲವು ಧಾರಾಳವಾಗಿ ಹೋಗದೆ ಶೂಲೆ, ಅಲ್ಪಾಲ್ಪ ಪಿಚ್ಛಾಸ್ರಾವ, ನೊರೆನೊರೆಯಾಗಿ ಮಲಸಹಿತ ಅಥವಾ ಮಲರಹಿತ ವಾಗಿ ಬಹಳವಾಗಿ ಮುಕ್ಕುತ್ತಿದ್ದರೆ ಮೂಲಂಗಿಯ ಕಟ್ಟಿನ ಸಾರು (ಬೇಳೆ ಮತ್ತು ಮೂಲಂಗಿ ಹಾಕಿ ಕಟ್ಟುಸಾರು ಮಾಡಿರುವುದು), ಬದರೀತಿರುಳು, ಬಸಳೆ, ಚುಕ್ಕಿಸೊಪ್ಪು, ಪೋಮ, ಚಕ್ಕೋತಸೊಪ್ಪು, ದಧಿ, ದಾಡಿಮ, ಸೌವ ರ್ಚಲ ಲವಣಗಳುಳ್ಳ ಆಹಾರಗಳನ್ನು ಹೆಚ್ಚು ತುಪ್ಪ ಮತ್ತು ಎಣ್ಣೆಗಳೊಂದಿಗೆ ಭೋಜನ ಮಾಡಿಸಬೇಕು. ಶುಂಠೀಬೆಲ್ಲಗಳನ್ನು ದಧಿ, ತೈಲ, ಘೃತ ಮತ್ತು ಕ್ಷೀರಗಳೊಡನೆ ಸೇವಿಸಲು ಕೊಡಬೇಕು. ಹಸಿವು ಚೆನ್ನಾಗಿ ತಿಳಿದರೆ ದಧಿ, ದಾಡಿಮ ಸೇರಿದ ಶಾಲ್ಯನ್ನ ಅಥವಾ ತಿಲ, ಮಾಷ, ಮುದ್ಗಗಳಿಂದ ಸಿದ್ಧವಾದ ರಸದೊಂದಿಗೆ ಶಾಲ್ಯನ್ನವನ್ನು ತಿನ್ನಿಸಬೇಕು. ಬಿಲ್ವಹೀಚಿನತಿರುಳು, ಅದರಷ್ಟೇ ಎಳ್ಳು ಇವನ್ನು ಅರೆದು, ಮೊಸರಿನ ತಿಳಿ, ದಾಳಿಂಬೆ ಅಥವಾ ಎಳಚಿಯ ಅಮ್ಲ, ತುಪ್ಪ ಅಥವಾ ಎಣ್ಣೆಗಳನ್ನು ಯುಕ್ತಿಯುಕ್ತವಾಗಿ ಸೇರಿಸಿ ಎಲ್ಲವನ್ನೂ ಕಡೆ ಗೋಲಿಂದ ಕಡೆದ ಖಡವು ಪ್ರವಾಹಿಕವನ್ನು ಹೋಗಲಾಡಿಸುತ್ತದೆ. ಮಲ ಕ್ಷೀಣವಾಗಿರುವಾಗ ಮಲ ಹೆಚ್ಚಿಸತಕ್ಕ ತರಕಾರಿ ಮತ್ತು ಶಾಲ್ಯನ್ನಗಳು ಹಿತ ವಾದುವು. ನವಿಲು, ಕೋಳಿ, ತಿತ್ತಿರಿ (ಕರಿಮಾಘದ ಪಕ್ಷಿ; ವೇದಪಕ್ಷಿ) ಮಾಂಸರಸಗಳು, ರಕ್ತಯುಕ್ತವಾದ ಕುರಿ ಅಥವಾ ಆಡಿನವಪೆ ಮಲಕ್ಷಯವನ್ನು ಹೋಗಲಾಡಿಸುವುವು.

ವಾತಾತೀಸಾರದ ಪರಿಣಾಮದಿಂದ ಗುದನಿಃಸರಣ ಮತ್ತು ಶೂಲಗಳಾಗು ವುವು. ಅಂತಹವನಿಗೆ ಆಮದೋಷವಿಲ್ಲದಿದ್ದರೆ ಚಾಂಗೇರೀ ಘೃತವನ್ನು ಕುಡಿಸಬೇಕು; ಅಥವಾ ಅನುವಾಸನ ವಸ್ತಿಯನ್ನು ಕೊಡಬೇಕು. ನಿಃಸೃತ

ಹಾದ ಗುದವು ಸ್ವಸ್ಥಾನಕ್ಕೆ ಹಿಂದಿರುಗದೆ ಸ್ತಬ್ಧವಾಗಿದ್ದರೆ ಮೊದಲು ಸ್ನೇಹ ಸ್ವೇದಗಳನ್ನು ಮಾಡಿ ಪಿಚುವಿನಿಂದ ಗುದವನ್ನು ಒಳಕ್ಕೆ ತಳ್ಳಿ ಗುದಮಾರ್ಗ ವನ್ನು ಬಿಟ್ಟು ಚರ್ಮದ ಗೋಫಣ[೧] ಬಂಧವನ್ನು ಕಟ್ಟಬೇಕು. ವಾತವರ್ಚ ಗಳ ತಡೆ, ಬಹುವಾದ ಶೂಲೆ, ಪ್ರವಾಹಿಕಾ, ರಕ್ತಯುಕ್ತ ಪಿಚ್ಛಾಸ್ರಾವ ಮತ್ತು ಬಾಯಾರಿಕೆಗಳಿಗೆ ಕ್ಷೀರಾಹಾರವನ್ನು ಉಪಯೋಗಿಸಬೇಕು. ಯಮಕಸ್ನೇಹ (ತುಪ್ಪ ಮತ್ತು ಎಣ್ಣೆಗಳ ಮಿಶ್ರಣ)ವನ್ನು ಕುಡಿಸಿದ ಮೇಲೆ ನೊರೆಹಾಲನ್ನು ಕೊಡಬೇಕು. ಏರಂಡಮೂಲ, ಬಿಲ್ವಹೀಚಿನ ತಿರುಳುಗಳಿಂದ ಮಾಡಿದ ಕ್ಷೀರ ಪಾಕವನ್ನು ಕುಡಿಸಬೇಕು. ಇವುಗಳಿಂದ ರಕ್ತ ಅಥವಾ ಕೇವಲ ಪಿಚ್ಛಿಲವಾದ ಸ್ರಾವ ಮುಂತಾದುವು ನಿಲ್ಲುವುವು.

ಪಿತ್ತಾತೀಸಾರದಲ್ಲೂ ಸಹ ನಿದಾನ, ಲಕ್ಷಣ ಮತ್ತು ಉಪಶಯಗಳಿಂದ ಆಮದೋಷವಿದೆ ಎಂದು ತಿಳಿದರೆ ಅವನ ಬಲಕ್ಕೆ ತಕ್ಕಂತೆ ಲಂಘನಪಾಚನ ಗಳನ್ನು ಮಾಡಿಸಬೇಕು. ತೀಕ್ಷ್ಣೋಷ್ಣ ಪದಾರ್ಥಗಳನ್ನು ವರ್ಜಿಸಬೇಕು. ಬಾಯಾರಿಕೆಗೆ ಷಡಂಗ ಪಾನೀಯದಲ್ಲಿ ಶುಂಠಿಗೆ ಬದಲಾಗಿ ಕಿರಾತತಿಕ್ತ, ಸಾರಿವಾಗಳನ್ನು ಹಾಕಿ ಆ ಪಾನಕವನ್ನು ಕುಡಿಸಬೇಕು. ಆಹಾರ ಕಾಲದಲ್ಲಿ ದಶಮೂಲಶತಾವರೀಕ್ವಾಥದಿಂದ ಯೂಷಮಂಡಾದಿಗಳನ್ನೂ, ತರ್ಪಣವನ್ನೂ ಉಪಯೋಗಿಸಬೇಕು. ಹೆಸರುಬೇಳೆ, ಸಾರಂಗಿಬೇಳೆ, ತೊಗರೀಬೇಳೆಗಳ ಯೂಷಗಳನ್ನೂ, ಪಿತ್ತಹರವಾದ ಲಾವ (ಕಾಳಗದ ಲಾವ; ಬುಲ್‌ಬುಲ್ ಪಕ್ಷಿ), ಮೊಲ, ಜಿಂಕೆ ಮೊದಲಾದುವುಗಳ ಮಾಂಸಗಳನ್ನು ಅಮ್ಲವಿಲ್ಲದೆ ಅಥವಾ ಸ್ವಲ್ಪ ಅಮ್ಲ ಸೇರಿಸಿ ತಿನ್ನಿಸುತ್ತಾ ಕ್ರಮಶಃ ಅಗ್ನಿವೃದ್ಧಿಪಡಿಸಬೇಕು. ದೀಪನ, ಪಾಚನ, ಶಮನ ಮತ್ತು ಸಂಗ್ರಾಹಿ ಯೋಗಗಳನ್ನು ಅನುಬಂಧ ಲಕ್ಷಣಕ್ಕೆ ತಕ್ಕಂತೆ ಉಪಯೋಗಿಸಬೇಕು. ತಂಡುಲೋದಕವನ್ನು ಅನು ಪಾನವಾಗಿ ಸೇವಿಸಬೇಕು. ಹಳೇ ಶಾಲಿಯಕ್ಕಿಯನ್ನು ಭೋಜನ ಮಾಡಿಸ ಬೇಕು. ಕುಟಜ, ಅತಿವಿಷಾ ಮತ್ತು ಇಂದ್ರಯವ ಕಲ್ಕವನ್ನು ತಂಡುಲೋದಕ ದೊಡನೆ ಉಪಯೋಗಿಸಬೇಕು. ಅಗ್ನಿದೀಪ್ತಿಯಿರುವ ಪಿತ್ತಾತೀಸಾರಿಗೆ ಆಡಿನ

---

೧. ಈ ಬಂಧನಕ್ಕೆ ಮೃದು ಚರ್ಮವನ್ನಾಗಲೀ ತತ್ಸಮಾನ ಅನ್ಯ ಪಟ್ಟಿಯನ್ನಾಗಲೀ ಉಪಯೋಗಿಸಬಹುದು.

ಹಾಲು ಬಲವರ್ಣಗಳನ್ನು ಹೆಚ್ಚಿಸುವುದು. ಅಗ್ನಿಯು ಚೆನ್ನಾಗಿದ್ದು ದೋಷಾಧಿಕ್ಯತೆಯು ಇದ್ದರೆ ಪಲಾಶಬೀಜ ಕ್ವಾಥವನ್ನು ಹಾಲಿನೊಡನೆ ಕುಡಿಸಿ ಪುನಃ ಬಿಸಿ ಹಾಲನ್ನು ಕೊಟ್ಟು ಭೇದಿ ಮಾಡಿಸಬೇಕು. ಇದರಿಂದ ಮಲವಿಸರ್ಜನೆಯಾಗಲಾಗಿ ಅತೀಸಾರ ನಾಶವಾಗುವುದು. ವಿರೇಚನದ ನಂತರವೂ ಶೂಲೆಯಿದ್ದರೆ ಬಿಲ್ವಾದ್ಯನುವಾಸನ[೧] ವಸ್ತಿಯನ್ನು ಪಯೋಗಿಸಬೇಕು. ಅನುವಾಸನ ಮತ್ತು ಭೋಜನಗಳನಂತರವೂ ಅತೀಸಾರವು ನಿಲ್ಲದಿದ್ದರೆ ಶಾಲ್ಮಲೀಪಿಚ್ಛಾವಸ್ತಿಯನ್ನು ಕೊಡುವುದು ಬಹು ಒಳ್ಳೆಯದು. ಇದಾದ ಮೇಲೆ ಸ್ನಾನ, ಹಾಲು, ಜಾಂಗಲಮಾಂಸಗಳ ಊಟವನ್ನು ಮಾಡಿಸಬೇಕು.

ಪಿತ್ತಾತೀಸಾರಿಯು ಈ ಮೇಲೆ ಹೇಳಿದ ಕ್ರಿಯೆಗಳನ್ನು ಅನುಸರಿಸದೆ ಪಿತ್ತಳ ಆಹಾರಗಳನ್ನು ಸೇವಿಸಿದ್ದೇ ಆದರೆ ರಕ್ತಾತೀಸಾರವುಂಟಾಗುವುದು. ಇದು ಕಷ್ಟತರವಾದುದು. ರಕ್ತಾತೀಸಾರಿಯು ಜೇನುತುಪ್ಪ ಸಕ್ಕರೆಗಳೊಂದಿಗೆ ತಣ್ಣಗಿರುವ ಆಡಿನ ಹಾಲನ್ನು ಕುಡಿಯಬೇಕು. ಗುದಪ್ರಕ್ಷಾಳನಕ್ಕೂ ತಣ್ಣಗಿರುವ ಆಡಿನ ಹಾಲೇ ಶ್ರೇಷ್ಠ. ಭೋಜನಕ್ಕೆ ಕೆಂಪು ಶಾಲ್ಯನ್ನ, ಆಡಿನ ಹಾಲು, ತುಪ್ಪದಲ್ಲಿ ಹುರಿದು ಸಕ್ಕರೆ ಹಾಕಿರುವ ಪಾರಿವಾಳದ ಮಾಂಸ, ಧನ್ವಮೃಗಪಕ್ಷಿಗಳ ಶೀತಲ ಮಾಂಸಕ್ಕೆ ಅಮ್ಲವಿಲ್ಲದೆ ತುಪ್ಪ ಮತ್ತು ಸಕ್ಕರೆ ಹಾಕಿರುವ ಭಕ್ಷ್ಯ, ಊಟಕ್ಕೆ ಮೊದಲು ಜೇನುತುಪ್ಪ ಸಕ್ಕರೆಗಳನ್ನು ಬೆಣ್ಣೆಯೊಂದಿಗೆ ಕಲಸಿ ಸೇವಿಸುವುದು ಇವೆಲ್ಲಾ ಹಿತಕರ. ಕ್ಷೀರೋತ್ಥಘೃತ, ಹಾಲು ಅನ್ನಗಳನ್ನು ಮೂರು ದಿನ ಸೇವಿಸಲು ರಕ್ತಾತೀಸಾರ ಶಮನವಾಗುವುದು. ಕುಟಜ ಬೀಜದಿಂದ ಮಾಡಿದ ಯವಾಗೂ ಮಂಡಗಳಿಗೆ ತುಪ್ಪವನ್ನು ಹಾಕಿ ಕುಡಿಸಲು ರಕ್ತ ನಿಲ್ಲುವುದು. ಶತಾವರೀ ಕಲ್ಕವನ್ನು ಹಾಲಿನಲ್ಲಿ ಕದಡಿ ಕುಡಿದು ಹಾಲು ಅನ್ನವನ್ನೇ ತಿನ್ನುವುದರಿಂದಲೂ ರಕ್ತಾತೀಸಾರ ನಿಲ್ಲುವುದು.

ಪಿತ್ತಾತೀಸಾರಿಗೆ ಬಹುವಾಗಿ ಪಿತ್ತದಿಂದ ಗುದಪಾಕವಾಗುವುದುಂಟು. ಅವನಿಗೆ ಪಟೋಲ ಮತ್ತು ಮಧುಕದ ತಣ್ಣಗಿನ ಕ್ವಾಥದಿಂದ ಗುದಸೇಚನ ಮಾಡಿಸಬೇಕು. ಶೀತಲವಾದ ಲೇಪನಗಳನ್ನು ಹಾಕಬೇಕು. ಗುದ, ವಂಕ್ಷಣ,

---

೧. ಶತಪುಷ್ಪಾವರೀಭ್ಯಾಂ ಚ ಪಯಸಾ ಮಧುಕೇನ ಚ ।
ತೈಲಪಾದಂ ಘೃತಂ ಸಿದ್ಧಂ ಸಬಿಲ್ವಮನುವಾಸನಮ್ ॥ ಚ. ಚಿ. ೪. ೧೯.

ಕಟೀ ಮತ್ತು ತೊಡೆಗಳಿಗೆ ಚಂದನಾದಿತೈಲ ಅಥವಾ ಶತಧೌತ ಘೃತಗಳನ್ನು ಲೇಪಿಸಬೇಕು. ರಕ್ತವು ಸ್ವಲ್ಪಸ್ವಲ್ಪವಾಗಿ ಅಥವಾ ಹೆಚ್ಚಾಗಿ ಹೋಗುತ್ತಿದ್ದು ನೋವೂ ಮತ್ತು ಅಪಾನವಾತದ ತಡೆಗಳಿದ್ದಲ್ಲಿ ಪಿಚ್ಛಾಬಸ್ತಿಯನ್ನು ಕೊಡಬೇಕು. ದೀರ್ಘಕಾಲ ಭೇದಿಯಾಗುತ್ತಿದ್ದು ಗುದಭಾಗ ಬಲಹೀನವಾಗಿರುವವನಿಗೆ ಆಗಿಂದಾಗ್ಗೆ ಸ್ನೇಹಬಸ್ತಿಯನ್ನು ಉಪಯೋಗಿಸಬೇಕು. ಇದರಿಂದ ಅಪಾನವಾತವು ಹೆಚ್ಚಾಗಿ ಹೊರಗೆ ಹೋಗಿ ಪಕ್ವಾಶಯಕಟಿಗಳಿಗೆ ಬಲವುಂಟಾಗುವುದು. ಪಿತ್ತದ ಅನುಬಂಧವಿದ್ದರೂ ಅದೂ ಸಹ ಶಾಂತವಾಗುವುದು. ಭೇದಿಯಾಗುವುದಕ್ಕೆ ಮೊದಲಲ್ಲಾಗಲೀ ಅನಂತರದಲ್ಲಾಗಲೀ ಮಲದೊಡನೆ ರಕ್ತವೂ ಹೋಗುತ್ತಿದ್ದರೆ ಅವನಿಗೆ ಶತಾವರೀ ಘೃತವನ್ನು ನೆಕ್ಕಿಸಬೇಕು. ಹೊಸ ಬೆಣ್ಣೆಗೆ ಅರ್ಧ ಭಾಗ ಸಕ್ಕರೆ, ಕಾಲು ಭಾಗ ಜೇನುತುಪ್ಪಗಳನ್ನು ಕಲಸಿ ತಿನ್ನಿಸಬೇಕು. ನ್ಯಗ್ರೋಧ, ಉದುಂಬರ ಮತ್ತು ಅಶ್ವತ್ಥ ಮೊಗರುಗಳನ್ನು ಅರೆದು ಒಂದು ಹಗಲು, ಒಂದು ರಾತ್ರಿ (೨೪ ಘಂಟೆ ಕಾಲ) ನೀರಿನಲ್ಲಿ ಕಾಯಿಸಿ ಆ ಕ್ವಾಥಕ್ಕೆ ತುಪ್ಪವನ್ನು ಹಾಕಿ ಘೃತವನ್ನು ತಯಾರಿಸಿ, ಅರ್ಧ ಮಾತ್ರ ಸಕ್ಕರೆ, ಕಾಲು ಭಾಗ ಜೇನುತುಪ್ಪಗಳನ್ನು ಕಲಸಿ ಸೇವಿಸಲು ಊರ್ಧ್ವ ಅಥವಾ ಅಧೋ ಮಾರ್ಗದಲ್ಲಿ ಹೋಗುವ ರಕ್ತಸ್ರಾವವು ನಿಲ್ಲುತ್ತದೆ.

ರಕ್ತಾತೀಸಾರಿಯು ತಿಳುವಳಿಕೆಯಿಲ್ಲದೆ ಇನ್ನೂ ಪಿತ್ತವನ್ನು ಹೆಚ್ಚಿಸುವ ದ್ರವ್ಯಗಳನ್ನೇ ಸೇವಿಸುತ್ತಬಂದರೆ ಕಷ್ಟತರವಾದ ಗುದವಲಿಗಳ ಪಾಕವುಂಟಾಗಿ ಜಾಗ್ರತೆಯಾಗಿ ಮರಣವನ್ನು ಹೊಂದುತ್ತಾನೆ.

ಶ್ಲೇಷ್ಮಾತೀಸಾರದಲ್ಲಿ ಮೊದಲು ಲಂಘನ ಪಾಚನಗಳನ್ನು ಮಾಡಿಸಿ ವಾತಾತೀಸಾರಿಗೆ ಹೇಳಿರುವ ಆಮಪಾಚಕಗಳನ್ನೇ ಕೊಡಬೇಕು. ಆದರೂ ನಿಲ್ಲದಿದ್ದರೆ ಕಫಹರಯೋಗಗಳನ್ನು ಉಪಯೋಗಿಸಬೇಕು. ಪಿಪ್ಪಲೀಮೂಲ (ಮೋಡಿ), ಹಿಪ್ಪಲಿ,[೧] ಗಜಹಿಪ್ಪಲಿ ಮತ್ತು ಚಿತ್ರಮೂಲಗಳನ್ನು ಕ್ವಾಥ ಮಾಡಿ ಕುಡಿಸಬೇಕು; ಅಥವಾ ಸೌವರ್ಚಲಲವಣ,[೨] ಬಜೆ, ತ್ರಿಕಟು, ಹಿಂಗು,

೧. ಪಿಪ್ಪಲೀ ಪಿಪ್ಪಲೀಮೂಲಚಿತ್ರಕೋ ಹಸ್ತಿಪಿಪ್ಪಲೀ। ಚ. ಚಿ. ಅ. ೧೯

೨. ಸೌವರ್ಚಲವಚಾವ್ಯೋಷ ಹಿಂಗು ಪ್ರತಿವಿಷಾಭಯಾಃ।
ಪಿಬೇಚ್ಛ್ಲೇಷ್ಮಾತಿಸಾರಾರ್ತಶ್ಚೂರ್ಣಿತಾಃ ಕೋಷ್ಣವಾರಿಣಾ ॥ ಅ. ಹೃ. ಚಿ ೯.

ಅತಿವಿಷಾ (ಅತಿಬಜೆ) ಮತ್ತು ಅಭಯಾಗಳ ಚೂರ್ಣವನ್ನು ಕ್ವಾಥ ಅಥವಾ ಕಲ್ಕಮಾಡಿ ಬಿಸಿನೀರಿನೊಡನೆ ಕುಡಿಸಬೇಕು. ಬಿಲ್ವದ೧ ಹೀಚಿನ ತಿರುಳನ್ನಾದರೂ ಸೇವಿಸಬಹುದು. ದಾಡಿಮಾಷ್ಟಕ ಚೂರ್ಣವೂ ಬಹಳ ಉಪಯುಕ್ತವಾದುದು. ವಾತಾತೀಸಾರದಲ್ಲಿ ಹೇಳಿರುವ ಖಡಗಳನ್ನೂ ಮಾಂಸರಸಗಳನ್ನೂ ಇಲ್ಲಿಯೂ ಉಪಯೋಗಿಸಬೇಕು. ಚಾಂಗೇರೀ (ಪುಲ್ಲಂಪುರಚಿ), ತಕ್ರ, ಎಳಚೀ ತಿರುಳುಗಳಿಂದ ಮಾಡಿದ ಖಡವನ್ನು ಊಟಕ್ಕೆ ಉಪಯೋಗಿಸುವುದರಿಂದ ಶ್ಲೇಷ್ಮಾತೀಸಾರ ನಿಲ್ಲುವುದು. ಶ್ಲೇಷ್ಮವು ಬಹುವಾಗಿ ನಷ್ಟವಾಗುತ್ತಿದ್ದರೆ ಚಾಂಗೇರೀ ಘೃತವನ್ನಾಗಲೀ, ಷಟ್ಪಲಘೃತವನ್ನಾಗಲೀ, ಯವಾಗೂ, ಮಂಡಗಳೊಡನೆ ಕುಡಿಸಬೇಕು. ವಾತಶ್ಲೇಷ್ಮದಿಂದ ವಿಬಂಧವಾಗಲೀ, ಕಫದ ಅತಿಸ್ರಾವವಾಗಲೀ, ಪ್ರವಾಹಿಕೆಯಿಂದ ಬಹುಶೂಲವಾಗಲೀ ಇದ್ದರೆ ಪಿಚ್ಛಾವಸ್ತಿಯನ್ನುಪಯೋಗಿಸಬೇಕು.೨ ಅನಂತರ ಸುಖೋಷ್ಣಸ್ನಾನಾಹಾರಗಳನ್ನು ನಡೆಸಬೇಕು. ಸಂಜೆ ಬಿಲ್ವತೈಲದಿಂದ ಅನುವಾಸನವಸ್ತಿಯನ್ನು ಕೊಡಬೇಕು. ಇದರಿಂದ ಕಫವಾತಗಳು ಶಮನವಾಗಿ ರೋಗಿಗೆ ನೆಮ್ಮದಿಯಾಗುವುದು.

---

೧. ಬಿಲ್ವಪತ್ರೆಕಾಯಿಯ ತಿರುಳಿಂದ ಮಾಡಿದ ರಸಕ್ರಿಯೆಯು ಶ್ಲೇಷ್ಮಯುಕ್ತ ಅಂತ್ರವ್ಯಾಧಿಗಳನ್ನು ಗುಣಪಡಿಸುವುದರಲ್ಲಿ ಉತ್ತಮವಾದುದು. ಪುರಾಣ ಅತೀಸಾರ, ಪ್ರವಾಹಿಕಾ ಮತ್ತು ಅಗ್ನಿಮಾಂದ್ಯಗಳಲ್ಲಿ ಅರ್ಧ ಮಾಗಿರುವ ಬಿಲ್ವದಿಂದ ಮಾಡಿದ ಮುರಬ್ಬಾ ಫಲದಾಯಕವಾಗಿದೆ.

೨. ಪಿಪ್ಪಲೀ ಬಿಲ್ವಕುಷ್ಠಾನಾಂ ಶತಾಹ್ವಾ ವಚಯೋರಪಿ ।
ಕಲ್ಕೈಃ ಸಲವಣೈರ್ಯುಕ್ತಂ ಪೂರ್ವೋಕ್ತಂ ಸನ್ನಿಧಾಪಯೇತ್ ॥
.....................ಬಿಲ್ವತೈಲೇನ ಮತಿಮಾನ್ ಸುಖೋಷ್ಣೇನಾನುವಾಸಯೇತ್ ।
ವಚಾಂತೈರಥವಾ ಕಲ್ಕೈಸ್ತೈಲಂ ಪಕ್ತ್ವಾನುವಾಸಯೇತ್ ।
ಬಹುಶಃ ಕಫವಾತಾರ್ತಸ್ತಥಾ ಸ ಲಭತೇ ಸುಖಮ್ ॥ ಚ.ಚಿ.ಅ. ೧೯.

ಪಿಚ್ಛಾವಸ್ತಿಗೆ ಹಿಪ್ಪಲಿ, ಬಿಲ್ವದ ತಿರುಳು, ಚಂಗಲ್ಕೋಷ್ಠ, ಸಬ್ಬಸೀಗೆಬೀಜ, ಬಜೆ ಮತ್ತು ಸೈಂಧವಲವಣಗಳನ್ನು ಅರೆದು ಕಲ್ಕಮಾಡಿ ಉಪಯೋಗಿಸಬೇಕು. ಅಥವಾ ಲವಣ ವಿನಹ ಉಳಿದ ವಸ್ತುಗಳನ್ನು ಹಾಕಿ ಕಲ್ಪೋಕ್ತರೀತಿಯಲ್ಲಿ ತೈಲ ಮಾಡಿ ಅನುವಾಸನವಸ್ತಿಯನ್ನು ಕೊಡುವುದರಿಂದ ಕಫವಾತಗಳು ಸಮಸ್ಥಿತಿಗೆ ಬರುವುವು.

ಗುದಸ್ಥಾನದಲ್ಲಿ ಕಫ ಕ್ಷೀಣವಾಗುವುದರಿಂದ ವಾತವೃದ್ಧಿಯಾಗಿ ರೋಗಿಯನ್ನು ಕೊಲ್ಲುವುದು. ಆದುದರಿಂದ ವೃದ್ಧಿಯಾದ ವಾತವನ್ನು ಶೀಘ್ರವಾಗಿಯೇ ಜಯಿಸಬೇಕು.

**ವಾತಸ್ಯಾನುಜಯೇತ್ಪಿತ್ತಂ ಪಿತ್ತಸ್ಯಾನುಜಯೇತ್ಕಫಮ್ ।**
**ತ್ರಯಾಣಾಂ ವಾ ಜಯೇತ್ಪೂರ್ವಂ ಯೋ ಭವೇದ್ಬಲವತ್ತಮಃ ॥**

ಚ.ಚಿ. ೧೯.

ಮೂರು ದೋಷಗಳಲ್ಲಿ ಮೊದಲು ವಾತವನ್ನೂ, ಅನಂತರ ಪಿತ್ತವನ್ನೂ, ಕೊನೆಗೆ ಕಫವನ್ನೂ ಅಥವಾ ಬಲವತ್ತಮವಾದುದನ್ನು ಮೊದಲೂ, ಅನಂತರ ಬಲತರವಾದುದನ್ನೂ, ಕೊನೆಗೆ ಉಳಿದ ದೋಷವನ್ನೂ ಸರಿಪಡಿಸಬೇಕು.

ಭಯ ಮತ್ತು ಶೋಕ ಇವುಗಳಿಂದ ವಾತಪ್ರಕೋಪವುಂಟಾಗಿ ಅತೀಸಾರ ಬರುವುದು. ಇದನ್ನು ಸಂತೋಷ, ಸಮಾಧಾನಗಳಿಂದಲೂ, ವಾತಹರ ಚಿಕಿತ್ಸೆಯಿಂದಲೂ ಗುಣಪಡಿಸಬೇಕು.

## ಅತೀಸಾರಃ ।

### ವಾತ

ಆಮೇಲಂಘನಮ್ ।
(ಶೂಲಾನಾಹಪ್ರಸೇಕೇಷುವಮನಂ)
ದೀಪನಪಾಚನಮ್ ।
ಪೇಯಾದಿಷು ಘೃತಂ ಲಘ್ವನ್ನಂ ಚ ।
ವಿಬಂಧೇ ಲಘುವಿರೇಚನಮ್ ।
ವಾತಘ್ನಪೇಯಾದಯಃ ।
ದುರ್ಬಲಿನಃ ಲಂಘನಂವಿನಾ,
ಅಲ್ಪಾಲ್ಪಪಿಚ್ಛಾಸ್ರಾವೇ ರುಜಿ ಚ ಖಡಃ ।
ವಿಡ್ವೃದ್ಧಿಕರಭೋಜನಮ್ ।
ಗುದಭ್ರಂಶೇ ಸ್ನೇಹಸ್ವೇದೌ ಅನುವಾಸನಶ್ಚ ಸಸ್ನೇಹಧಾರೋಷ್ಣ ಕ್ಷೀರಪಾನಮ್ ।

### ಪಿತ್ತ

ಲಂಘನಪಾಚನಂ ।
(ತೀಕ್ಷ್ಣೋಷ್ಣವರ್ಜ್ಯಂ)
ತೃಷಿನಿಶ್ಶುಂಠೀ ಷಡಂಗಾದಿಃ ।
ಅನಮ್ಲ ಯೂಷಾರಸಾಃ ।
ದೋಷಾಧಿಕ್ಯೇಸ್ರಂಸನಮ್ ।
ಬಿಲ್ವಾದ್ಯನುವಾಸನಮ್ ।
ಸ್ನಾನಂ,
ಹಿತಸಂಸರ್ಜನಂ ಚ ।

### ರಕ್ತ

ಅಜಾಕ್ಷೀರವರ್ತನಂ ।
ಘೃತರಕ್ತಶಾಲಿಧನ್ವ ಮಾಂಸಾದಯಃ ।
ಸಂಗ್ರಹಣಮ್ ।
ಗುದಪಾಕೇಶೀತಾ ಕ್ರಿಯಾಃ ।
ಶತಧೌತಲೇಪಃ ।
ಪಿಚ್ಛಾವಸ್ತಿಃ ।
ದೈರ್ಘ್ಯಕೇಸ್ನೇಹವಸ್ತಿಶ್ಚ ।
ಸರಕ್ತೇವರೀಲೇಹೋ ನವನೀತಮ್ ।

### ಶ್ಲೇಷ್ಮ

ಲಂಘನಮ್ ।
ಪಾಚನಮ್ ।
ಕಫಘ್ನಮ್ ।
ವಾತೋಕ್ತ ಪೇಯಾದಯಃ ।
ಸಂಗ್ರಹಣಮ್ ।

### ಆಮ

ಲಂಘನಮ್ ।
ದೀಪನಪಾಚನಂ
ಪೇಯಾದಿ ಲಘ್ವನ್ನಂ ।

### ಶೋಕ

ವಾತಹರಾಃ
ಹರ್ಷಣಮ್ ।
ಆಶ್ವಾಸನಮ್ ।

# ಗ್ರಹಣೀನಿದಾನ

ಅನ್ನಪಾನ ವಿಧಿಗಳಿಗೆ ವಿರುದ್ಧವಾಗಿ ಬುದ್ಧಿಚಾಪಲ್ಯದಿಂದ ತನಗಿಚ್ಛೆ ಬಂದಂತೆ ಆಹಾರವನ್ನು ಸೇವಿಸುವವನ ಗ್ರಹಣೀ ಸ್ಥಾನವು (ಪಾಚಕಾಗ್ನಿ) ದೂಷಿಸಲ್ಪಡುವುದು. ಇದಕ್ಕೆ ಗ್ರಹಣೀ ದೋಷವೆಂದೂ ಅಥವಾ ಗ್ರಹಣೀ ಎಂದೂ ಹೆಸರು. ಅತೀಸಾರವೇ ಮೊದಲಾದ ರೋಗಗಳಲ್ಲಿ ಅಗ್ನಿ ಹೀನವಾಗುವು ದಷ್ಟೆ. ಅಗ್ನಿಯು ಪುನಃ ಸಮುಸ್ಥಿತಿಗೆ ಬಂದರೆ ಆ ವ್ಯಾಧಿಗಳಿರುವುದಿಲ್ಲ. ಅಂಥ ವನಿಗೆ ಮತ್ತು ಮಂದಾಗ್ನಿಯಿರುವವನಿಗೆ ದುಷ್ಟಭೋಜನ, ಅತಿಭೋಜನಾದಿ ಗಳು ಗ್ರಹಣಿಯನ್ನು ವಿಶೇಷವಾಗಿ ಕೆಡಿಸುವುವು. ಗುರು, ಶೀತ, ರೂಕ್ಷ, ಅಸಾತ್ಮ್ಯ ಭೋಜನಗಳಿಂದಲೂ, ಸ್ನೇಹ ಮತ್ತು ಶೋಧನ ಕರ್ಮವಿಭ್ರಮ ಗಳಿಂದಲೂ, ದೇಶ ಕಾಲ ವ್ಯತ್ಯಾಸಗಳಿಂದಲೂ ಮತ್ತು ವೇಗಧಾರಣದಿಂದಲೂ ದುಷ್ಟವಾದ ಅಗ್ನಿಯು ಸಕಾಲದಲ್ಲಿ ಸರಿಯಾಗಿ ಪಾಕಮಾಡಲಾರದೆ ಹೋಗು ವುದು. ಅಪಚ್ಯಮಾನ ಅನ್ನವು ಶುಕ್ತಪಾಕವನ್ನು (ಹುಳಿಯಾಗಿ) ಹೊಂದಿ ವಿಷರೂಪವನ್ನು ತಾಳುವುದು.

ಮಂದವಾದ ಅಗ್ನಿಯು ತಿಂದ ಆಹಾರವನ್ನು ಸ್ವಲ್ಪವೇ ಪಾಕ ಮಾಡು ವುದು. ಇದು ಕಫಾಧಿಕ್ಯತೆಯಿಂದ ಆಗುವ ಭೇದ. ಸ್ವಲ್ಪ ಅನ್ನವು ಪಾಕವಾ ಗಿಯೂ ಸ್ವಲ್ಪ ಆಗದೆಯೂ ಮೇಲೆ ಮತ್ತು ಕೆಳಗೆ ಹೊರಡುವುವು. ಪಕ್ವಾ ಪಕ್ವವಾಗಿ ಅಧೋಮಾರ್ಗದಲ್ಲಿ ಹೊರಟರೆ ಅದು ಗ್ರಹಣೀ ರೋಗವೆನ್ನಲ್ಪಡು ವುದು. ಇದು ಪ್ರಾಯಿಕವಾಗಿ ವಿದಗ್ಧವಾಗಿರುವುದು; ದ್ರವವಾಗಿಯೂ ಮತ್ತು ವಿಬದ್ಧವಾಗಿಯೂ ಇರುವುದು. ಗ್ರಹಣೀ ರೋಗವು ಪೃಥಕ್ದೋಷ ಮತ್ತು ಸನ್ನಿಪಾತ ಭೇದಗಳಿಂದ ನಾಲ್ಕು ಬಗೆ.

ವ್ಯಾಧಿಯ ಪೂರ್ವದಲ್ಲಿ ಬಾಯಾರಿಕೆ, ಆಲಸ್ಯ, ಬಲಕ್ಷಯ, ಆಹಾರವು ಬಹಳ ಹೊತ್ತಾದನಂತರ ವಿದಗ್ಧವಾಗಿ ಪಾಕವಾಗುವಿಕೆ ಮತ್ತು ಮೈಭಾರ ಇವು ತೋರುವುವು. ಅತಿಯಾದ ಕಟು, ತಿಕ್ತ, ಕಷಾಯ, ರೂಕ್ಷ ಮತ್ತು ದುಷ್ಟ ಭೋಜನಗಳಿಂದಲೂ, ಅತ್ಯಲ್ಪವಾದ ಅಶನ ಅಥವಾ ನಿರಶನ, ಮಾರ್ಗಾ ಯಾಸ, ವೇಗನಿಗ್ರಹ ಮತ್ತು ಅಧಿಕ ಮೈಥುನ ಇವುಗಳಿಂದಲೂ ವಾತ ಪ್ರಕೋಪವಾಗಿ ಅಗ್ನಿಯನ್ನು ಆವರಿಸಿ ತಗ್ಗಿಸುವುದು. ಆಹಾರವು ಕಷ್ಟದಿಂದ

ಹುಳಿ ಪಾಕವನ್ನು ಹೊಂದುವುದು, ಶರೀರವು ರೂಕ್ಷವಾಗುವುದು, ಗಂಟಲು ಮತ್ತು ಬಾಯಿ ಒಣಗುವುವು. ಹಸಿವಿಲ್ಲದಿರುವಿಕೆ, ಬಾಯಾರಿಕೆ, ಕಣ್ಣು ಕತ್ತಲೆ ಮತ್ತು ಕಿವಿಗಳಲ್ಲಿ ಧ್ವನಿ ಇವುಗಳುಂಟಾಗುವುವು. ಪಾರ್ಶ್ವ, ವಂಕ್ಷಣ (ತೊಡೆ ಸಂದಿ) ಮತ್ತ ಕುತ್ತಿಗೆಗಳಲ್ಲಿ ಬಾರಿಬಾರಿಗೂ ನೋವು, ಮೈಯೆಲ್ಲಾ ಸೂಜಿಗಳಿಂದ ಚುಚ್ಚಲ್ಪಟ್ಟಂತೆ ಮತ್ತು ಹೃದಯದಲ್ಲಿ ಹಿಂಡಿದಂತೆ ಬಾಧೆ, ವೈರಸ್ಯ, ಮೈ ಕೈ ಕತ್ತರಿಸಿದಂತಿರುವುದು, ಮಧುರಾದಿ ರಸಗಳಲ್ಲಿ ಆಸೆಪಡುವುದು, ಮನಸ್ಸಿಗೆ ಬೇಸರ ಇವುಗಳು ಕಂಡುಬರುವುವು. ಆಹಾರ ಜೀರ್ಣವಾಗುವಾಗ ಮತ್ತು ಆದನಂತರ ಹೊಟ್ಟೆಯುಬ್ಬರ, ಆಹಾರ ತಿಂದ ಕೂಡಲೇ ಸ್ವಾಸ್ಥ್ಯ ತೋರುವುವು. ಆ ರೋಗಿಯು ತನಗೆ ವಾತರೋಗ, ಗುಲ್ಮ, ಹೃದ್ರೋಗ, ಪ್ಲೀಹ ವೃದ್ಧಿಗಳಿರಬಹುದೆಂದು ಸಂಶಯ ಪಡುತ್ತಾನೆ. ದ್ರವವಾಗಲೀ ಶುಷ್ಕವಾಗಲೀ ಅವನ ಮಲವು ಆಮಯುಕ್ತವಾಗಿ ನೊರೆ ನೊರೆಯಾಗಿ ಶಬ್ದದಿಂದ ಸ್ವಲ್ಪ ಸ್ವಲ್ಪವೇ ಹೋಗುತ್ತಿರುವುದು. ಶ್ವಾಸಕಾಸಗಳು ಅವನನ್ನು ಪೀಡಿಸುತ್ತಿರುವುವು.

ಕಟು, ಅಮ್ಲ, ವಿದಾಹಿ, ಕ್ಷಾರ ಮುಂತಾದುವುಗಳಿಂದ ಪ್ರಕೋಪವಾದ ಪಿತ್ತವು ತನ್ನ ದ್ರವ ಸ್ವಭಾವದಿಂದ ಅಗ್ನಿಯನ್ನು ಕಡಿಮೆ ಮಾಡುತ್ತದೆ. ಇದರಿಂದ ಆಹಾರವು ಜೀರ್ಣವಾಗದೆ ನೀಲಿ, ಪೀತವರ್ಣಗಳಿಂದ ಮಲವನ್ನು ವಿಸರ್ಜಿಸುತ್ತಾನೆ. ಕೆಟ್ಟ ವಾಸನೆಯುಳ್ಳ ಹುಳಿ ತೇಗು, ಗಂಟಲಲ್ಲಿ ಉರಿ, ಅರುಚಿ ಮತ್ತು ಬಾಯಾರಿಕೆಗಳುಂಟಾಗುವುವು.

ಗುರು, ಅತಿಸ್ನಿಗ್ಧ, ಶೀತಲ ಮುಂತಾದ ಪದಾರ್ಥಗಳನ್ನು ಹೆಚ್ಚಾಗಿ ಉಪಯೋಗಿಸುವುದರಿಂದಲೂ, ಊಟ ಮಾಡಿದ ಕೂಡಲೇ ನಿದ್ದೆ ಮಾಡುವುದರಿಂದಲೂ ಕುಪಿತವಾದ ಕಫವು ಅಗ್ನಿಯನ್ನು ದುರ್ಬಲವಾಗಿ ಮಾಡುತ್ತದೆ. ಅನ್ನ ಜೀರ್ಣವಾಗದೆ ಹೃಲ್ಲಾಸ, ಛರ್ದಿ, ಅರೋಚಕ, ಬಾಯಿ ಸಿಹಿಯಾಗಿರುವಿಕೆ, ಕಾಸ, ಕಫಷ್ಠೀವನ, ಪೀನಸಗಳುಂಟಾಗುವುವು. ಹೃದಯದಲ್ಲಿ ಗಟ್ಟಿಯಾಗಿ ಸ್ಥಿಮಿತ ಮತ್ತು ಗುರುವಾದ ವಸ್ತುವಿರುವಂತೆ ತಿಳಿಯುತ್ತಾನೆ. ದುಷ್ಟವಾದ ಸಿಹಿ ತೇಗು, ಅಗ್ನಿಸಾದ, ಸ್ತ್ರೀಯಲ್ಲಿ ಇಚ್ಛೆಯಿಲ್ಲದಿರುವುದು, ಮಲವು ಒಡಕಲಾಗಿ ಆಮ ಮತ್ತು ಶ್ಲೇಷ್ಮಗಳಿಂದ ಕೂಡಿರುವುದು, ದೌರ್ಬಲ್ಯ ಮತ್ತು ಆಲಸ್ಯ ಇವುಗಳಿರುತ್ತವೆ.

**ಸನ್ನಿಪಾತದಲ್ಲಿ ಮೂರು ದೋಷಗಳ ಲಕ್ಷಣಗಳೂ ಸೇರಿರುತ್ತವೆ.**

ಅತೀಸಾರದಲ್ಲಿ ಗೊತ್ತುಪಡಿಸಿರುವಂತೆಯೇ ಗ್ರಹಣಿಯಲ್ಲಿಯೂ ಆಮ ಮತ್ತು ನಿರಾಮ ಲಕ್ಷಣಗಳನ್ನು ಗೊತ್ತುಪಡಿಸಬೇಕು. ಅತೀಸಾರದ ಅಸಾಧ್ಯ ಲಕ್ಷಣಗಳೇ ಗ್ರಹಣಿಯ ಅಸಾಧ್ಯ ಲಕ್ಷಣಗಳು. ವೃದ್ಧರಿಗೆ ಬಂದ ಗ್ರಹಣಿಯು ಅಸಾಧ್ಯ ಯುವಕರ ಗ್ರಹಣಿಯು ಯಾಪ್ಯ, ಬಾಲಕರಿಗೆ ಸಾಧ್ಯ ಎಂಬುದಾಗಿ ತಿಳಿಯಬೇಕು.

## ಗ್ರಹಣೀಚಿಕಿತ್ಸಾ

ಗ್ರಹಣೀ ಸ್ಥಾನವನ್ನು ಆಶ್ರಯಿಸುವ ದೋಷವು ವಿದಗ್ಧಾಹಾರಗಳಿಂದ ಕೆಡಿಸಲ್ಪಟ್ಟಿರುವುದರಿಂದ, ಆಮಲಕ್ಷಣಗಳು ಕಂಡುಬರುತ್ತವೆ. ಅವು ಯಾವುವೆಂದರೆ, ವಿಷ್ಟಂಭ, ಪ್ರಸೇಕ, ಸಂಕಟ, ವಿದಾಹ, ಅರುಚಿ ಮತ್ತು ಗೌರವ(ಭಾರ)ಗಳು. ಆಗ ಮದನ ಕಷಾಯ ಅಥವಾ ಬೇರೆ ಔಷಧಗಳಿಂದ ವಮನಮಾಡಿಸಬೇಕು.

**ಸವಿಷ್ಟಂಭಪ್ರಸೇಕಾರ್ತಿ ವಿದಾಹಾರುಚಿಗೌರವೈಃ ।**
**ಆಮಲಿಂಗಾನ್ವಿತಂ ದೃಷ್ಟ್ವಾ ಸುಖೋಷ್ಣೇನಾಂಬುನೋದ್ಧರೇತ್ ॥**
ಚ.ಚಿ. ೧೫.

ಆಮಲಕ್ಷಣಗಳನ್ನು ಅತೀಸಾರಚಿಕಿತ್ಸಾ ಕ್ರಮದಿಂದ ಜಯಿಸಬೇಕು. ಅನ್ನಕಾಲದಲ್ಲಿ ಪಂಚಕೋಲಯುತ ಯವಾಗೂ ಪೇಯಾದಿಗಳನ್ನು ಕುಡಿಸಬೇಕು. ದೀಪನವಾದ ಯೋಗಗಳನ್ನು, ಲಘು ಆಹಾರವನ್ನು ಉಪಯೋಗಿಸಬೇಕು. ಅತೀಸಾರಿಗಳಿಗೆ ಹೇಳಿರುವ ಪಾನಗಳು ತಕ್ರಗಳು ಹಿತಕರಗಳು.

ವಾತಗ್ರಹಣಿಯಲ್ಲಿ ಆಮಪಾಕವಾಗಿದೆಯೆಂದು ತಿಳಿದ ಮೇಲೆ ದೀಪನ ಘೃತಗಳನ್ನು ಸ್ವಲ್ಪ ಸ್ವಲ್ಪ ಕೊಡುತ್ತ ಬರಬೇಕು. ಆಮ ಪರಿಹಾರಕ್ಕೆ ಚಿತ್ರಕಾದಿ ವಟಿಯನ್ನುಪಯೋಗಿಸಬಹುದು. ಇದರಿಂದ ಅಗ್ನಿ ದೀಪ್ತಿಯಾಗುವುದು. ನಾಗರಾತಿ ವಿಷಾಮುಸ್ತಗಳ ಕ್ವಾಥ ಆಮಪಾಚನ ಮಾಡುವುದು. ಪಾನಾನ್ನಗಳಲ್ಲಿ ಆಮಲಕಾದಿ ಚೂರ್ಣವನ್ನು ಉಪಯೋಗಿಸುವುದರಿಂದ ಕಾಸ, ಅರುಚಿ, ಹೃತ್ಪಾರ್ಶ್ವ ಶೂಲಗಳು ನಿವಾರಣೆಯಾಗುತ್ತವೆ. ಆಮಪ್ರವಾಹಿಕೆಯಲ್ಲಿ ಸೈಂಧವವಚಾದಿಚೂರ್ಣವನ್ನು ದಾಡಿಮರಸದೊಂದಿಗೆ ಸೇವಿಸಬೇಕು. ಸಾಮ

ಕಫಾನಿಲದಲ್ಲಿ ಸೌವರ್ಚಲ, ಅಭಯಾ, ಕಳಿಂಗ, ಹಿಂಗು, ವಚಾ ಮತ್ತು ಮುಸ್ತಾಚೂರ್ಣವನ್ನು ಬಿಸಿನೀರೊಂದಿಗೆ ಕುಡಿಸಬೇಕು. ತಾಳೀಸಾದಿವಟಿಯನ್ನು ಮದ್ಯ, ಯೂಷ, ಅರಿಷ್ಟ, ಮಸ್ತು ಅಥವಾ ಪೇಯಾನುಪಾನಗಳೊಡನೆ ಕೊಡುವುದರಿಂದ ಸಾಮರೋಗಗಳು ನಿವೃತ್ತಿಹೊಂದುವುವು. ವಾತಕಫಗ್ರಹಣಿಗಳಲ್ಲಿ ಆಗತಾನೆ ಮಾಡಿದ ಮಜ್ಜಿಗೆಯು ಬಹುಶ್ರೇಷ್ಠ. ತಕ್ರಾರಿಷ್ಟವನ್ನು ಕುಡಿಸಬಹುದು.

ಸ್ವಲ್ಪ ಅಗ್ನಿವೃದ್ಧಿಯಾದನಂತರ, ಮಲಮೂತ್ರ ವಾತಗಳು ಸಡಿಲವಾಗುತ್ತಿರಲಾಗಿ, ಎರಡು ಮೂರು ದಿನ ಸ್ನೇಹ, ಅಭ್ಯಂಜನ ಸ್ವೇದಗಳನ್ನು ಮಾಡಿಸಿ ನಿರೂಹವಸ್ತಿಯನ್ನು ಕೊಡಬೇಕು. ಏರಂಡತೈಲ, ವಿರೇಚನಘೃತ ಅಥವಾ ತಿಲ್ವಕತೈಲದಿಂದ ವಿರೇಚನ ಮಾಡಿಸಬೇಕು. ಹೀಗೆ ಗ್ರಹಣಿಸ್ಥಾನದಿಂದ ಸ್ರಸ್ತವಾದ ದೋಷವನ್ನು ಹೋಗಲಾಡಿಸಬೇಕು. ಶುದ್ಧನಾದವನ ಮಲಾಶಯವು ರೂಕ್ಷವಾಗಿದ್ದರೆ, ಅಥವಾ ಶುದ್ಧವಾಗದೆ ಮಲಬಂಧವಿದ್ದರೆ, ಅನುವಾಸನವಸ್ತಿಯನ್ನು ಕೊಡಬೇಕು. ಲಘುಭೋಜನ, ಘೃತದ ಅಭ್ಯಾಸಗಳನ್ನು ಮಾಡಿಸಬೇಕು. ಷಟ್ಪಲಘೃತ, ತ್ರ್ಯೂಷಣಾದಿಘೃತ ಅಥವಾ ತುಪ್ಪದೊಡನೆ ಶಟೀ, ವಿಡಂಗ, ರಾಸ್ನಾ, ಯವಕ್ಷಾರ, ಸರ್ಜಕ್ಷಾರ ಮತ್ತು ವ್ಯೋಮಗಳ ಚೂರ್ಣವನ್ನು ಕೊಡಬೇಕು. ಈ ಚೂರ್ಣವನ್ನು ಬಿಸಿನೀರಿನೊಂದಿಗಾದರೂ ಕೊಡಬಹುದು.

ವಾತಶ್ಲೇಷ್ಮ ಪ್ರಧಾನವಿರುವ ಆಮಯುಕ್ತ ಗ್ರಹಣಿ ಅಥವಾ ವಾತದಿಂದ ಕೆರಳಿಸಲ್ಪಟ್ಟ ಕಫ ಅಥವಾ ಅಗ್ನಿಯನ್ನು ಹೋಗಲಾಡಿಸುವ ವಿದಗ್ಧಪಿತ್ತಗಳನ್ನು ವಮನ ಅಥವಾ ವಿರೇಚನಗಳಿಂದ ಶುದ್ಧಿಗೊಳಿಸಬೇಕು. ತಿಕ್ತ, ಲಘು, ಗ್ರಾಹಿ, ದೀಪನ ಮತ್ತು ಅವಿದಾಹಿ ಅಮ್ಲದ್ರವ್ಯಗಳಿಂದ ಕೂಡಿದ ಚೂರ್ಣಗಳಿಂದಲೂ ತಿಕ್ತಘೃತಗಳಿಂದಲೂ ಅಗ್ನಿವೃದ್ಧಿಮಾಡಬೇಕು. ನಾಗರಾದಿಚೂರ್ಣವನ್ನು ಜೇನುತುಪ್ಪ ತಂಡುಲೋದಕಗಳೊಡನೆ ಅಥವಾ ಭೂನಿಂಬಾದಿ ಚೂರ್ಣವನ್ನು ತಣ್ಣಗಿರುವ ಬೆಲ್ಲದ ಪಾನಕದೊಡನೆ ಕುಡಿಸುವುದರಿಂದ ಪಿತ್ತಗ್ರಹಣಿ ನಾಶವಾಗುವುದು.

ಕಫಗ್ರಹಣಿಯಲ್ಲಿ ತೀಕ್ಷ್ಣ ವಮನವನ್ನು ಮಾಡಿಸಿ, ಕಟು, ಅಮ್ಲ, ಲವಣ, ಕ್ಷಾರ ಮತ್ತು ತಿಕ್ತಗಳಿಂದ ಅಗ್ನಿಯನ್ನು ಕ್ರಮೇಣ ಹೆಚ್ಚಿಸಬೇಕು.

ಪಾರಾ, ಪಂಚಕೋಲ, ಧನಿಯ, ಅಭಯಾ, ಮಾದಳ ಚಿಗುರುಗಳಿಂದ ಮಾಡಿದ ಪಾದಾವಶೇಷ ಕ್ವಾಥವನ್ನು ಪಾನ, ಪೇಯಗಳಿಗಾಗಿ ಉಪಯೋಗಿಸಬೇಕು. ಒಣಮೂಲಂಗಿ ಅಥವಾ ಹುರುಳಿಕಟ್ಟುಗಳಿಗೆ ಕಟು, ಅಮ್ಲ, ಲವಣ ಮತ್ತು ಕ್ಷಾರಗಳನ್ನು ಯಥೋಚಿತ ಸೇರಿಸಿ ಲಘುವಾದ ಅನ್ನವನ್ನು ತಿನ್ನಿಸಬೇಕು. ಹುಳಿಮಜ್ಜಿಗೆ ಅಥವಾ ತಕ್ರಾರಿಷ್ಟ ಮಧೂಕಾಸವ ಅಥವಾ ಶುದ್ಧ ಸೀಧು ವನ್ನು ಭೋಜನೋತ್ತರ ಕುಡಿಸಬೇಕು. ಕಟುಕರೋಹಿಣೀ, ಪಟೋಲ, ನಿಂಬ, ಭೂನಿಂಬ, ಪರ್ಪಟ ಮತ್ತು ಮಹಿಷಮೂತ್ರಗಳನ್ನು ಪುಟಮಾಡಿ ತೆಗೆದ ಕ್ಷಾರ, ಭುಕ್ತಂಜರೀವಟೀ (ಕ್ಷಾರಗುಟಿಕಾ) ಅಥವಾ ಷಟ್ಪಲ ಘೃತಗಳನ್ನು ಉಪಯೋಗಿಸಬೇಕು.

ಸನ್ನಿಪಾತ ಗ್ರಹಣಿಯಲ್ಲಿ ಪಂಚಕರ್ಮಗಳನ್ನು ನಡೆಸಬೇಕು. ಅಗ್ನಿ ವರ್ಧಕಗಳಾದ ಘೃತ, ಕ್ಷಾರಾರಿಷ್ಟಗಳನ್ನು ವಾತಾದಿ ದೋಷಗಳಿಗೆ ತಕ್ಕಂತೆ ಉಪಯೋಗಿಸಬೇಕು.

**ಅವಸ್ಥಾವಿಶೇಷ ಚಿಕಿತ್ಸೆ**—ಕಫಪ್ರಸೇಕದಲ್ಲಿ ತಿಕ್ತರೂಕ್ಷ ಮತ್ತು ದೀಪ ನೌಷಧವನ್ನೂ, ಕಫವು ಅಧಿಕವಾಗಿದ್ದರೆ ರೂಕ್ಷವಾದ ಔಷಧವನ್ನೂ, ರೋಗಿಯು ಕೃಶನಾಗಿದ್ದು ಕಫವು ಹೆಚ್ಚಾಗಿದ್ದರೆ ರೂಕ್ಷಸ್ನಿಗ್ಧದ್ರವ್ಯಗಳನ್ನೂ ಹೆಚ್ಚು ಕಡಿಮೆ ಮಾಡಿ ಕೊಡಬೇಕು. ಪಿತ್ತ ಹೆಚ್ಚಿರುವವನಿಗೆ ತಿಕ್ತಮಧುರ ಸೇರಿದ ದೀಪನಘೃತವನ್ನೂ, ವಾತ ಹೆಚ್ಚಿರುವವನಿಗೆ ಲವಣಾಮ್ಲ ಸ್ನೇಹ ಗಳನ್ನೂ ಕೊಡಬೇಕು. ದುರ್ಬಲರಿಗೆ ದೀಪನಸ್ನೇಹವೇ ಶ್ರೇಷ್ಠ. ಘೃತ ಪಾನದಿಂದ ವೃದ್ಧಿಯಾದ ಜಠರಾಗ್ನಿಯು ಗುರುವಾದ ಆಹಾರವನ್ನೂ ಸಹ ಚೆನ್ನಾಗಿ ಜೀರ್ಣಿಸಬಲ್ಲದು.

**ಮಂದಾಗ್ನಿಮವಿಪಕ್ವಂತು ಪುರೀಷಂ ಯೋತಿಸಾರ್ಯತೇ |**
**ದೀಪನೀಯೌಷಧೈರ್ಯುಕ್ತಾಂ ಘೃತಮಾತ್ರಾಂ ಪಿಬೇತ್ತು ಸಃ ||**
**ತಯಾ ಸಮಾನಃ ಪವನಃ ಪ್ರಸನ್ನೋಮಾರ್ಗಮಾಸ್ಥಿತಃ |**
**ಅಗ್ನೇಃ ಸಮೀಪಚಾರಿತ್ವಾದಾಶು ಪ್ರಕುರುತೇ ಬಲಮ್ ||**

ಚ.ಚಿ.ಅ. ೧೫

ಆಮಾವಸ್ಥೆಯಲ್ಲಿ ಸ್ನೇಹಪಾನ ನಿಷಿದ್ಧ. ನಿರಾಮಾವಸ್ಥೆಯಲ್ಲಿ ಅಗ್ನಿ

ಶಕ್ತಿಯು ಕಡಿಮೆಯಾಗಿದ್ದರೆ, ದೀಪನಘೃತವು ಅದನ್ನು ಹೆಚ್ಚಿಸುವುದು. ಕಫ ಕ್ಷೀಣವಾಗಿದ್ದು ಮಲವು ಸರಿಯಾಗಿ ಪ್ರವರ್ತಿಸದಿರುವಾಗ ಔಷಧಯುಕ್ತ ಘೃತವನ್ನು ಸ್ವಲ್ಪವಾಗಿ ಸೇವಿಸುವುದರಿಂದ ಮಲಪ್ರವರ್ತಿಯು ಸರಿಯಾಗುವುದು. ಅಗ್ನಿಶಕ್ತಿ ಹೀನವಾಗಿ, ಆಹಾರವು ಪಾಕವಾಗದೆ ಅತೀಸಾರವಾಗುತ್ತಿರುವವನಿಗೆ ಯೋಗ್ಯ ಪ್ರಮಾಣದಲ್ಲಿ ದೀಪನಘೃತವನ್ನು ಕುಡಿಸುವುದರಿಂದ ಸಮಾನವಾತವು ದೋಷರಹಿತವಾಗಿ ಸಮೀಪವರ್ತಿಯಾದ ಪಾಚಕಾಗ್ನಿಯನ್ನು ಉತ್ತೇಜಿಸಿ ಅದರ ಬಲವನ್ನು ಜಾಗ್ರತೆಯಾಗಿ ವೃದ್ಧಿಮಾಡುವುದು.

ಮಲವು ಬಹು ಕಠಿಣವಾಗಿ ಕಷ್ಟದಿಂದ ವಿಸರ್ಜಿಸುವವನಿಗೆ ಭೋಜನದ ಮಧ್ಯದಲ್ಲಿ ಲವಣಯುತಘೃತವನ್ನು ಕುಡಿಸಬೇಕು. ಇದಕ್ಕೆ **ಅನ್ನಾವಗ್ರಹ**ವೆಂದು ಹೆಸರು. ರೂಕ್ಷತೆಯಿಂದ ಅಗ್ನಿಮಾಂದ್ಯವಿದ್ದರೆ, ದೀಪನಘೃತ ಅಥವಾ ತೈಲಪಾನವನ್ನು ಮಾಡಿಸಬೇಕು.

ಅತಿಸ್ನೇಹಪಾನದಿಂದ ಅಗ್ನಿಯು ಕಡಿಮೆಯಾದರೆ ಮತ್ತು ಗುದವು ಸ್ನಿಗ್ಧತೆಯಿಂದ ಲೇಪಿಸಿದಂತಾದರೆ, ಕ್ಷಾರಚೂರ್ಣ, ಆಸವಗಳನ್ನು ಕೊಡಬೇಕು. ಉದಾವರ್ತವಾದರೆ, ನಿರೂಹ ಮತ್ತು ಸ್ನೇಹವಸ್ತಿಗಳನ್ನು ಕೊಡಬೇಕು. ದೋಷಾಧಿಕ್ಯದಿಂದ ಮಂದ ಅಗ್ನಿಯಿದ್ದರೆ ವಮನ ವಿರೇಚನಗಳಿಂದ ಶುದ್ಧಿಗೊಳಿಸಿ ಅನ್ನಪಾನಗಳನ್ನು ನಡೆಸಬೇಕು. ವ್ಯಾಧಿಮುಕ್ತನಾದವನಿಗೆ ಅಗ್ನಿಮಾಂದ್ಯವಿದ್ದರೂ, ದೀಪನಘೃತವನ್ನೇ ಕೊಡಬೇಕು. ಮಾರ್ಗಾಯಾಸ, ಉಪವಾಸಗಳಿಂದ ಅಗ್ನಿ ಕಡಿಮೆಯಿದ್ದರೆ, ಯವಾಗೂ, ಮಂಡ ಮುಂತಾದುವುಗಳಿಗೆ ದೀಪನಘೃತವನ್ನು ಸೇರಿಸಿ ಉಪಯೋಗಿಸಬೇಕು. ಊಟಕ್ಕೆ ಮೊದಲು ಮತ್ತು ಅದರನಂತರ ಈ ಘೃತವನ್ನು ಯವಾಗ್ವಾದಿಸಹಿತ ಕುಡಿಯುವುದರಿಂದ (ಅವಪೀಡಕ) ಬಲ, ಅಗ್ನಿವೃದ್ಧಿ ಮತ್ತು ಬೃಂಹಣಗಳುಂಟಾಗುವುವು. ದೀರ್ಘಕಾಲ ಅಗ್ನಿಮಾಂದ್ಯಗ್ರಹಣಿಗಳಿಂದ ನರಳಿ ಶರೀರ ಕೃಶ ಮತ್ತು ಬಲಹೀನವಾದವರಿಗೆ ಪ್ರಸಹಾ ಪ್ರಾಣಿಗಳಲ್ಲಿ (ಸಾಹಸದಿಂದ ಆಹಾರವನ್ನು ಕಿತ್ತು ತಿನ್ನುವ ಪ್ರಾಣಿ) ಲಘುತರ ಪ್ರಾಣಿಯ ಮಾಂಸವನ್ನು ಸ್ವಲ್ಪ ಅನ್ನದೊಂದಿಗೆ ಸೇವಿಸಬೇಕು. ಮಾಂಸಾಹಾರಿ ಪ್ರಾಣಿಮಾಂಸ ಅಧಿಕ ಬಲ್ಯವಾದುದು. ಪ್ರಸಹಾಮಾಂಸಗಳು ಲಘು, ತೀಕ್ಷ್ಣ, ಉಷ್ಣ, ಕಟು ಮತ್ತು ಸ್ರೋತಶ್ಶೋಧನ ಗುಣಗಳನ್ನುಳ್ಳದ್ದರಿಂದ ಜಾಗ್ರತೆಯಾಗಿ ಅಗ್ನಿವೃದ್ಧಿಯನ್ನುಂಟುಮಾಡುತ್ತವೆ.

**ಲಘುತೀಕ್ಷ್ಣೋಷ್ಣಶೋಧಿತ್ವಾದ್ದೀಪಯಂತ್ಯಾಶುತೇಽನಲವ್ ||**
ಚ ಚಿ ಅ. ೧೫.

ಕಫವು ಕ್ಷೀಣವಾಗಿ ಪಿತ್ತವು ವಾತದಿಂದ ಹೆಚ್ಚಿಸಲ್ಪಟ್ಟರೆ ಬಹಳ ಹಸಿವು ಉಂಟಾಗಿ ತಿಂದ ಆಹಾರವನ್ನೂ ಶರೀರದ ಧಾತುಗಳನ್ನೂ ಓಜಸ್ಸನ್ನೂ ಪಾಕ ಮಾಡಿಕೊಂಡು ಶರೀರವನ್ನೇ ನಾಶಮಾಡುವುದು. ಆಹಾರ ತಿಂದ ಕೂಡಲೇ ಹಸಿವು ಸ್ವಲ್ಪ ಶಮನವಾಗುವುದು.

**ತೃಟ್ಕಾಸದಾಹಮೂರ್ಛಾದ್ಯಾ ವ್ಯಾಧಯೋತ್ಯಗ್ನಿಸಂಭವಾಃ ||**
ಚ.ಚಿ.ಅ. ೧೫.

ಅಂತಹವನಿಗೆ ಆಹಾರ ಜೀರ್ಣವಾದಂತೆಲ್ಲಾ ಗುರು, ಸ್ನಿಗ್ಧ, ಮಂದ, ಸಾಂದ್ರ, ಶೀತಲ, ಅನ್ನಪಾನಗಳನ್ನು ಕೊಡಬೇಕು. ಗೋಧಿ, ಹಾಲು, ತುಪ್ಪ, ಮಾಷ, ಆನೂಪಮಾಂಸ, ವಸಾ, ಮಜ್ಜಾ, ತೈಲ ಮುಂತಾದುವನ್ನು ಕೊಡ ಬೇಕು. ಪಿತ್ತಶೋಧನಕ್ಕೆ ತ್ರಿವೃತ್ ಕ್ಷೀರವನ್ನು ಕುಡಿಸಬೇಕು. ಮೇದ್ಯ ವಾಗಿರುವ ಕಫವೃದ್ಧಿಗಳಾದ ಆಹಾರಾದಿಗಳು ಅತ್ಯಗ್ನಿಯನ್ನು ಹೋಗಲಾಡಿಸು ತ್ತವೆ



ಗ್ರಹಣೀ
ವಾತ
ಪಿತ್ತ
ಕಫ
ಸನ್ನಿಪಾತ
ಸಾಮ
ನಿರಾಮ
ಬಲಿನಃ ಲಂಘನಂ
ದೀಪನಂ
ಪಾಚನಂ
ಕಾಲೇದ್ರವಭಕ್ತಂ ಲಘ್ವನ್ನಂ
ಬದ್ಧವರ್ಚಸಿ ವಾತಘ್ನಮನುವಾಸನಂ ।
ಘೃತಾಭ್ಯಾಸಃ ।
ಸಾಮೇಕಫೇ ವಾತಶ್ಲೇಷ್ಮಾವೃತೇ } ವಮನಂ ।
ತಕ್ರವರ್ತನಮ್ ।
ದೀಪನಘೃತಂ
ವಿಬಂಧೇಸ್ನೇಹಃಸ್ವೇದಃ ನಿರೂಹಃ ।
ಸ್ರಸ್ತದೋಷೇರೇಚನಮ್
ವಮನಂ ವಾ ವಿರೇಚನಂ ।
ಲಘುಗ್ರಾಹಿ ದೀಪನಾನಿ ।
ತಿಕ್ತಚೂರ್ಣಂಸ್ನೇಹಶ್ಚ ।
ತೀಕ್ಷ್ಣಂ ವಮನಂ ।
ಕಟ್ವಮ್ಲಲವಣಕ್ಷಾರಾಃ ।
ಪೇಯಾದಯಃ ।
ಭುಕ್ತಂಜರೀ, ಷಟ್ಪಲಂ ಚ ।
ಪಂಚಕರ್ಮ
ಅವಸ್ಥಿಕೀಕ್ರಮಃ — ಕಫಪ್ರಸೇಕೇ ತಿಕ್ತರೂಕ್ಷಂ ।
ಕಫೋದಯೇ ರೂಕ್ಷಂ ।
ಕ್ಷೀಣಕ್ಷಾಮೇ ದೀಪನಸ್ನೇಹಃ ।
ಬಹುಪಿತ್ತಸ್ಯ ಸ್ವಾದುದೀಪನಂ ತಿಕ್ತಮ್ ।
ಬಹುವಾತಸ್ಯ ಪಟ್ವಮ್ಲಸ್ನೇಹಾಃ ।
ಕ್ಷೀಣೇಕಫೇ ಶ್ಲಥಪುರೀಷೇ ಶುಂಠೀಘೃತಂ ।
ಕೃಚ್ಛ್ರಪುರೀಷೇಸಲವಣಂ ಘೃತಂಸಾನ್ನಂ ।
ಉದಾವರ್ತೇವಸ್ತಿಃ ।

# ಅರ್ಶೋನಿದಾನ

ದುಷ್ಟವಾದ ದೋಷಗಳು ತ್ವಕ್, ಮಾಂಸ ಮತ್ತು ಮೇದಸ್ಸುಗಳನ್ನು ದೂಷಿಸಿ ಅಪಾನವೇ ಮೊದಲಾದ ಸ್ಥಾನಗಳಲ್ಲಿ ಮಾಂಸಾಂಕುರಗಳನ್ನುಂಟು ಮಾಡುವುವು. ಈ ಅಂಕುರಗಳಿಗೆ **ಅರ್ಶ**ಗಳೆಂದು ಹೆಸರು. ಶತ್ರುಗಳು ಪ್ರಾಣವನ್ನು ಹಿಂಸಿಸುವಂತೆ ಈ ಮಾಂಸಾಂಕುರಗಳು ಹಿಂಸಿಸುವುದರಿಂದ ಇವಕ್ಕೆ ಅರ್ಶ ಎಂದು ಹೇಳುತ್ತಾರೆ. ಚರ್ಮ, ನಾಸಾ ಮುಂತಾದುವುಗಳಲ್ಲಿ ಬೆಳೆದಿರುವ ಮೊಳಕೆಗಳಿಗೆ ಚರ್ಮಕೀಲ, ನಾಸಾರ್ಶ ಎಂಬುದಾಗಿ ಸ್ಥಾನಕ್ಕೆ ತಕ್ಕಂತೆ ಹೆಸರುಗಳು ಬಂದಿವೆ. ಇವು ಅಧಿಮಾಂಸ ವಿಶೇಷಗಳು. ಕಾಯಚಿಕಿತ್ಸೆಯಲ್ಲಿ ಅರ್ಶ ಎಂಬುದು ಗುದಮಾರ್ಗದಲ್ಲಿ ಬೆಳೆಯುವ ಮೊಳಕೆಯನ್ನೇ ಬೋಧಿಸುತ್ತದೆ.

ದೋಷಜ ಮತ್ತು ಸಹಜಗಳೆಂದು ಅರ್ಶಸ್ಸು ಎರಡು ವಿಧ. ದೋಷಜವು ವಾತ, ಪಿತ್ತ, ಕಫ ಮತ್ತು ಸನ್ನಿಪಾತ ಭೇದಗಳಿಂದ ನಾಲ್ಕು ಮತ್ತು ದುಷ್ಟ ರಕ್ತವು ಹೆಚ್ಚಿ ರಕ್ತ ಸ್ರವಿಸುತ್ತಿರುವುದು ಒಂದು—ಒಟ್ಟು ಐದು. ಶರೀರವು ಹುಟ್ಟುವಾಗಲೇ ಬಂದುದು ಸಹಜಾರ್ಶ. ದೋಷಜ ಮತ್ತು ಸಹಜಗಳಿಂದ ಅರ್ಶವು ಆರು ಪ್ರಕಾರ. ಇವೆಲ್ಲವೂ ಗುದದ ಮೂರು ವಲಿಗಳಲ್ಲಿ ಉಂಟಾಗುವುವು. ಗುದೌಷ್ಠವು ಅರ್ಧ ಅಂಗುಲ, ಅಲ್ಲಿಂದ ಮೇಲಿರುವ ಒಂದು ಅಂಗುಲ ಮಾರ್ಗವು ಮೊದಲನೆಯ ವಲಿ. ಇದೇ ಸಂವರಣೀ. ಇದರಿಂದ ಮೇಲಿರುವ ಒಂದೂವರೆ ಅಂಗುಲ ವಲಿಯು ಎರಡನೆಯದು. ಇದಕ್ಕೆ ವಿಸರ್ಜನೀ ಎಂದು ಹೆಸರು. ಇದರ ಮೇಲೆ ಒಂದೂವರೆ ಅಂಗುಲದ ವಲಿಯು ಪ್ರವಾಹಿಣೀ ಎಂಬ ಮೂರನೆಯ ವಲಿ. ಹೀಗೆ ಗುದವು ಒಟ್ಟು ನಾಲ್ಕೂವರೆ ಅಂಗುಲ ಉದ್ದವಿರುವುದು.

ಗುರು, ಶೀತ, ಅಭಿಷ್ಯಂದಿ, ಅಜೀರ್ಣ ಭೋಜನಗಳಿಂದಲೂ, ಅಲ್ಪಾಶನ, ಅಸಾತ್ಮ್ಯ ಭೋಜನ, ಗೋ, ಮತ್ಸ್ಯ, ವರಾಹ ಮುಂತಾದುವುಗಳ ಮಾಂಸ, ಕೃಶವಾದ ಪ್ರಾಣಿಗಳ ಮಾಂಸ, ಒಣಗಿದ ಅಥವಾ ದುರ್ಗಂಧವಾದ ಮಾಂಸ, ಪಿಷ್ಟಪದಾರ್ಥ ಇವುಗಳಿಂದಾದ ವಿರುದ್ಧಾಹಾರಗಳಿಂದಲೂ, ಮಂದಕ (ಪೂರ್ತಿ ಹೆತ್ತುಕೊಳ್ಳದಿರುವ ಮೊಸರು), ದುಷ್ಟ ಮದ್ಯ, ದುಷ್ಟವಾದ ಮತ್ತು ಗುರು ಗುಣವುಳ್ಳ (ಹರಿಯದಿರುವ) ನೀರು ಇವುಗಳ ಸೇವನೆಯಿಂದಲೂ, ಅತಿ

ಸ್ನೇಹಪಾನ, ಅಸಂಶೋಧನ (ವಮನವಿರೇಚನಗಳಿಂದ ಶುದ್ಧನಾಗದಿರುವುದು), ವಸ್ತಿಕರ್ಮ ಕೆಡುವುದು, ವ್ಯಾಯಾಮ ಮಾಡದಿರುವುದು. ಹಗಲು ನಿದ್ರೆ, ಸುಖಶಯ್ಯಾಸನಗಳಲ್ಲೇ ಇರುವುದು (ಸೋಮಾರಿತನ) ಮುಂತಾದುವುಗಳಿಂದ ಅಗ್ನಿಯು ಕಡಿಮೆಯಾಗಿ ಮಲಸಂಚಯವುಂಟಾಗುವುದು. ಎತ್ತರವಾದ, ತಗ್ಗಿನ ಅಥವಾ ಕಠಿಣವಾದ ಆಸನಗಳಲ್ಲಿ ಕುಳಿತುಕೊಂಡಿರುವುದು, ಮೇಲಕ್ಕೆ ಎತ್ತಿ ಹಾಕುವಂತಹ ಒರಟು ವಾಹನಗಳು (ಸೈಕಲ್, ಕುದುರೆ, ಹಳ್ಳತಿಟ್ಟಗಳಲ್ಲಿ ಬಂಡಿಗಳಲ್ಲಿ ಪ್ರಯಾಣ), ಅತಿವ್ಯವಾಯ, ವಸ್ತಿನೇತ್ರವನ್ನು ಸರಿಯಾಗಿ ಉಪ ಯೋಗಿಸದಿರುವುದು, ಬಾರಿಬಾರಿಗೂ ಗುದವನ್ನು ತಣ್ಣೀರಿನಿಂದ ತೊಳೆಯುವುದು (ಹಿಮ ಬಿದ್ದಿರುವ ಹುಲ್ಲು, ಬಂಡೆಗಳ ಮೇಲೆ ಕುಳಿತುಕೊಳ್ಳುವುದು), ವಾತ ಮೂತ್ರ ಪುರೀಷಗಳ ವೇಗಗಳನ್ನು ಕೆರಳಿಸುವುದು ಅಥವಾ ತಡೆಯುವುದು, ಸ್ತ್ರೀಯರಿಗೆ ಆಮಗರ್ಭವು ಪತನವವಾಗುವುದು, ವಿಷಮವಾದ ಪ್ರಸವ ಇವುಗ ಳಿಂದ ಪ್ರಕೋಪಹೊಂದಿದ ಅಪಾನ ವಾಯುವು ಸಂಚಿತವಾದ ಮಲವನ್ನು ಅಧೋಮಾರ್ಗವಾಗಿ ತಂದು ಗುದವಲಿಗಳಲ್ಲಿ ಸೇರಿಸುತ್ತದೆ. ಅನಂತರ ಗುದಾಂಕುರಗಳು ಹುಟ್ಟುತ್ತವೆ.

ಅರ್ಶದ ಪೂರ್ವರೂಪದಲ್ಲಿ ವಿಷ್ಟಂಭ (ಅನ್ನವು ಬಹಳ ಹೊತ್ತಿನವರೆಗೂ ಆಮಾಶಯದಲ್ಲೇ ನಿಂತಿರುವುದು), ಬಲಹೀನತೆ, ಕುಕ್ಷಿಯಲ್ಲಿ ಆಟೋಪ, ಶರೀರದ ಕಾರ್ಶ್ಯ, ಹೆಚ್ಚಾಗಿ ತೇಗು ಬರುವುದು, ತೊಡೆಗಳಲ್ಲಿ ಶಕ್ತಿಯಿಲ್ಲದಿರು ವುದು, ಸ್ವಲ್ಪವೇ ಮಲ ವಿಸರ್ಜನೆಯಾಗುವುದು ಮತ್ತು ರೋಗಿಗೆ ಗ್ರಹಣೀ ದೋಷ, ಪಾಂಡುರೋಗಗಳೇನಾದರೂ ಆಗುವುದೋ ಎಂಬ ಸಂದೇಹ ಇವೆಲ್ಲ ತಿಳಿಯುವುವು.

ವಾತದೋಷದ ಅರ್ಶವು ಸಮಾನ ಕಾರಣಗಳಾದ ಕಷಾಯ, ಕಟು, ತಿಕ್ತ, ರೂಕ್ಷ, ಶೀತ ಮತ್ತು ಲಘು ಆಹಾರಗಳಿಂದಲೂ, ಅಲ್ಪಾಶನ, ತೀಕ್ಷ್ಣ ಮದ್ಯ, ಅತಿ ಮೈಥುನ ಮುಂತಾದುವುಗಳಿಂದ ಸಂಭವಿಸುವುದು. ಅನೂಪ ದೇಶ, ಹೇಮಂತಾದಿ ಕಾಲಗಳಲ್ಲಿ ವೃದ್ಧಿಯಾಗುತ್ತದೆ.

ಕಟ್ವಮ್ಲಲವಣ, ತೀಕ್ಷ್ಣ, ಉಷ್ಣ, ವಿದಾಹಿ ಆಹಾರಗಳನ್ನು ತಿನ್ನುವುದ ರಿಂದಲೂ, ಅಗ್ನಿ, ಆತಪ, ಮದ್ಯಗಳ ಸೇವನೆಗಳಿಂದಲೂ, ಕ್ರೋಧ, ಅಸೂಯೆ ಗಳಿಂದಲೂ ಪಿತ್ತಾರ್ಶವುಂಟಾಗುವುದು. ಉಷ್ಣದೇಶ ಮತ್ತು ಬೇಸಗೆಗಳಲ್ಲಿ

ಹೆಚ್ಚುವುದು. ಮಧುರ, ಸ್ನಿಗ್ಧ, ಶೀತ, ಲವಣ, ಅಮ್ಲ, ಗುರು ಆಹಾರಗಳಿಂದಲೂ ವ್ಯಾಯಮ ಮಾಡದೆ ಜಡವಾಗಿರುವುದರಿಂದಲೂ, ಹಗಲು ನಿದ್ದೆ, ಮೆತ್ತಗಿರುವ ಶಯ್ಯಾಸನಗಳನ್ನೇ ಉಪಯೋಗಿಸುತ್ತಿರುವುದು ಇವುಗಳಿಂದ ಶ್ಲೇಷ್ಮಾರ್ಶ ವುಂಟಾಗುವುದು ತಣ್ಣಗಿರುವ ಎದುರು ಗಾಳಿ, ಚಳಿಗಾಲ ಮತ್ತು ಚಳಿ ಪ್ರದೇಶಗಳಲ್ಲಿ ಅರ್ಶವು ಹೆಚ್ಚು ಬಾಧೆಯನ್ನು ಕೊಡುವುದು.

ಸನ್ನಿಪಾತಾರ್ಶದಲ್ಲಿ ಎಲ್ಲ ಕಾರಣಗಳೂ ಸೇರಿ ಮಿಶ್ರಲಕ್ಷಣಗಳನ್ನುಂಟು ಮಾಡುತ್ತವೆ. ವಾತಾರ್ಶಗಳು ಶುಷ್ಕವಾಗಿ ಬಾಡಿದಂತೆ, ಶ್ಯಾವಾರುಣಗಳಾಗಿಯೂ, ಒಂದಕ್ಕೊಂದು ವಿಶದವಾಗಿಯೂ ಗಟ್ಟಿಯಾಗಿಯೂ ಒರಟಾಗಿಯೂ ವಕ್ರವಾಗಿಯೂ ಚೂಪಾಗಿಯೂ ಅಂಕುರಗಳು ಬಿರಿದಂತೆಯೂ ಇರುತ್ತವೆ. ಶಿರಃಪಾರ್ಶ್ವಾಂಸ, ಸೊಂಟ, ತೊಡೆ, ವಂಕ್ಷಣಗಳಲ್ಲಿ ನೋವು, ಸೀನು, ತೇಗುಗಳು ಬಾರದೆ ಹೃದ್ಗ್ರಹ ಅರೋಚ, ಶುಷ್ಕಕಾಸ, ಶ್ವಾಸ, ಅಗ್ನಿಮಾಂದ್ಯಾದಿಗಳಿರುವುವು. ಹಚ್ಚು ಪ್ರವಹಣದನಂತರ ಸ್ವಲ್ಪವೇ ಮಲ ಬರುವುದು. ಅದು ನೊರೆ, ಪೈಚ್ಛಿಲ್ಯಗಳಿಂದ ಕೂಡಿರುವುದು, ಗಂಟುಗಂಟಾಗಿರುವುದು ಮತ್ತು ನೋವು ಉಂಟಾಗುವುದು. ನಖ, ವಿಣ್ಮೂತ್ರ ನೇತ್ರಾದಿಗಳು ಕಪ್ಪುಕಪ್ಪಾಗಿರುವುವು.

ಪಿತ್ತಾರ್ಶವು ನೀಲ, ರಕ್ತ, ಪೀತವರ್ಣದ ತುದಿಗಳನ್ನುಂಟಾಗಿರುತ್ತದೆ. ತೆಳ್ಳಗಿರುವ ರಕ್ತಸ್ರಾವವಾಗುತ್ತದೆ. ಅರ್ಶವು ಮೃದುವಾಗಿಯೂ ಸಡಿಲವಾಗಿ ಗಿಣಿಕೊಕ್ಕಿನಂತೆ ಕೆಂಪಗೆ ಅಥವಾ ಯಕೃತ್ ಬಣ್ಣಕ್ಕಿರುತ್ತದೆ ದಾಹ, ಪಾಕ, ಜ್ವರ, ಸ್ವೇದ, ತೃಷ್ಣಾ, ಮೂರ್ಛೆ ಮುಂತಾದ ಲಕ್ಷಣಗಳಿರುತ್ತವೆ. ಮಲವು ಬಿಸಿಯಾಗಿ ದ್ರವವಾಗಿ (ಅಳ್ಳಕವಾಗಿ) ನೀಲ, ರಕ್ತ, ಪೀತವರ್ಣ ಯುಕ್ತವಾಗಿರುತ್ತದೆ. ತ್ವಕ್, ನಖಾದಿಗಳು ಹಳದಿಯಾಗಿರುವುವು.

ಶ್ಲೇಷ್ಮಾರ್ಶವು ಬುಡದಲ್ಲಿ ಅಗಲವಾಗಿ ದಪ್ಪಕ್ಕೆ ಸ್ನಿಗ್ಧತೆಯಿಂದ ಕೂಡಿರುತ್ತದೆ. ಅದರ ತುದಿಯು ಗುಂಡಗೆ ಬೆಳ್ಳಗೆ, ಸ್ತಬ್ಧವಾಗಿರುತ್ತದೆ ನವೆಯಿರುತ್ತದೆ. ಕೆರೆಯುತ್ತಿದ್ದರೆ ಸುಖವೆನಿಸುತ್ತದೆ. ವಂಕ್ಷಣ, ಪಾಯು, ಬಸ್ತಿ, ನಾಭಿ ಪ್ರದೇಶಗಳಲ್ಲಿ ಊತ ಮತ್ತು ಸೆಳೆತಗಳಿರುತ್ತವೆ. ಶ್ವಾಸ, ಕಾಸ, ಹೃಲ್ಲಾಸ, ಪ್ರಸೇಕ ಮುಂತಾದ ಉಪದ್ರವಗಳಿರುತ್ತವೆ ಸ್ವಲ್ಪ ಪ್ರವಹಣದನಂತರ ಅಧಿಕ ಕಫ ಮಿಶ್ರವಾದ ಮಲವು ಬರುವುದು. ಇದು ವಸೆಯುಂತಿರುವುದು. ಇದು

ಒಡೆಯುವುದಿಲ್ಲ ಮತ್ತು ಸ್ರವಿಸುವುದಿಲ್ಲ. ತ್ವಗಾದಿಗಳು ಬೆಳ್ಳಗಿರುವುವು. ಸನ್ನಿಪಾತದಲ್ಲಿ ಎಲ್ಲಾ ಲಕ್ಷಣಗಳೂ ಇರುವುವು.

ರಕ್ತಾರ್ಶವು ಪಿತ್ತಾರ್ಶದ ಲಕ್ಷಣಗಳನ್ನೇ ಹೊಂದಿರುತ್ತದೆ. ಆಲದ ಬಿಳಲಿನಂತೆ ಈ ಅರ್ಶದಲ್ಲಿ ಸಣ್ಣಸಣ್ಣ ಶಾಖೆಗಳಂತೆ ಪ್ರತ್ಯೇಕ ಅಂಕುರಗಳಿರುತ್ತವೆ. ಗುಲಗಂಜಿ, ಹವಳಗಳಂತಿರುತ್ತವೆ. ಇವು ಗಾಢವಾದ ಮಲದಿಂದ ಒತ್ತಲ್ಪಟ್ಟು ಹಠಾತ್ತನೆ ದುಷ್ಟವಾದ ಬಿಸಿ ರಕ್ತವನ್ನು ಸ್ರವಿಸುತ್ತವೆ. ರಕ್ತಕ್ಷೀಣತೆಯಿಂದ ಬಹು ಬಾಧೆಯಾಗುತ್ತದೆ. ಬಲ, ವರ್ಣ, ಉತ್ಸಾಹ ಮತ್ತು ಓಜಸ್ಸುಗಳು ಹೀನವಾಗುತ್ತವೆ. ಇಂದ್ರಿಯಗಳಲ್ಲಿ ಕೊಳೆ ಸೇರಿರುತ್ತದೆ. ಮಲವು ಶ್ಯಾವ ವರ್ಣಕ್ಕೆ ಕಠಿಣವಾಗಿಯೂ ರೂಕ್ಷವಾಗಿಯೂ ಇರುತ್ತದೆ. ಅಧೋವಾಯು ಸರಿಯಾಗಿ ಸರಿಯುವುದಿಲ್ಲ.

ರಕ್ತಾರ್ಶವು ವಾತಾನುಬಂಧ ಮತ್ತು ಕಫಾನುಬಂಧಗಳಿಂದ ಕೂಡಿರುವುದುಂಟು. ವಾತಾನುಬಂಧಕ್ಕೆ ರೂಕ್ಷತೆಯು ಕಾರಣ. ಇದರಲ್ಲಿ ರಕ್ತವು ತೆಳ್ಳಗೆ ಅರುಣವರ್ಣದಿಂದ ನೊರೆನೊರೆಯಾಗಿ ಹೋಗುವುದು, ಸೊಂಟ, ತೊಡೆ ಮತ್ತು ಗುದಗಳಲ್ಲಿ ಶೂಲೆ ಮತ್ತು ಶರೀರ ದೌರ್ಬಲ್ಯಗಳಿರುವುವು. ಕಫಾನುಬಂಧಕ್ಕೆ ಸ್ನಿಗ್ಧತೆಯು ಕಾರಣ. ರಕ್ತವು ಗಟ್ಟಿಯಾಗಿ, ತಂತುತಂತುವಾಗಿ (ಎಳೆಗಳಂತೆ) ಪಿಚ್ಛಿಲವಾಗಿ ಸ್ರಾವವಾಗುವುದು. ಮಲವು ಸಡಿಲವಾಗಿಯೂ, ಸ್ನಿಗ್ಧವಾಗಿಯೂ, ತಣ್ಣಗೂ, ಬಿಳಿ ಮತ್ತು ಪೀತವರ್ಣವಾಗಿಯೂ ಹೋಗುವುದು. ಗುದವು ಪಿಚ್ಛಿಲದ್ರವದಿಂದ ನೆನೆದಂತಿರುತ್ತದೆ

ಸಹಜಾರ್ಶಗಳು ವಿವಿಧಾಕೃತಿಗಳಲ್ಲಿ ಆಯಾ ಮನುಷ್ಯನ ಪ್ರಕೃತಿಗನುಸಾರವಾಗಿರುತ್ತವೆ. ಕೆಲವು ಸಣ್ಣಗೂ, ಕೆಲವು ದೊಡ್ಡದಾಗಿಯೂ, ಕೆಲವು ಉದ್ದವಾಗಿಯೂ, ಕೆಲವು ಮೋಟಾಗಿಯೂ, ವಿಷಮವಾಗಿಯೂ, ಜಟಿಲವಾಗಿಯೂ, ನಾನಾವಿಧಗಳಾಗಿರುತ್ತವೆ ಆ ಮನುಷ್ಯನು ಕೃಶನಾಗಿಯೂ, ಬಾಡಿದ ಮುಖವುಳ್ಳವನಾಗಿಯೂ ಇರುತ್ತಾನೆ. ವಾತ ಮೂತ್ರ ಪುರೀಷಗಳು ತಡೆಯಲ್ಪಟ್ಟಿರುತ್ತವೆ. ಇವು ಅನಿಯತವಾಗಿ ಹೋಗುತ್ತಿರುತ್ತವೆ.

**ಸಾಧ್ಯಾಸಾಧ್ಯಗಳು**—ಹೊರವಲಿಯಲ್ಲಿ ಹುಟ್ಟಿದ, ಒಂದು ದೋಷದಿಂದಾದ ಮತ್ತು ಹೊಸದಾದ ಅರ್ಶಗಳು ಸುಖಸಾಧ್ಯ. ಎರಡನೆಯ ವಲಿ

ಯಲ್ಲಿರುವ, ದ್ವಂದ್ವ ದೋಷಜ ಮತ್ತು ಒಂದು ಸಂವತ್ಸರ ಕಳೆದಿರುವ ಅರ್ಶ ಗಳು ಕೃಚ್ಛ್ರಸಾಧ್ಯ. ಉಳಿದುವೆಲ್ಲಾ ಅಸಾಧ್ಯ.

## ಅರ್ಶಶ್ಚಿಕಿತ್ಸಾ

ಅರ್ಶವು ಗುದಮಾರ್ಗವನ್ನು ಆಶ್ರಯಿಸಿ ಬೆಳೆದುಬರುವುದು. ಇದು ದೋಷದೂಷ್ಯಾನುಸಾರ ಆರು ಬಗೆ. ಸಹಜಾರ್ಶ ಮತ್ತು ಜನ್ಮೋತ್ತರಜ ವೆಂದು ಎರಡು ಬಗೆಯಾಗಿ ಭಾವಿಸಬಹುದು. ಚಿಕಿತ್ಸಾನುಕೂಲವಾಗಿ ಇದು ಶುಷ್ಕಾರ್ಶ ಮತ್ತು ಆರ್ದ್ರಾರ್ಶಗಳೆಂದು ಎರಡು ಪ್ರಕಾರ ವಿಂಗಡಿಸಲ್ಪಡುತ್ತದೆ. ಶುಷ್ಕಾರ್ಶವು ವಾತ ಮತ್ತು ಕಫ ದೋಷಗಳ ಆಧಿಕ್ಯತೆಯಿಂದಲೂ ಆರ್ದ್ರಾರ್ಶವು ರಕ್ತಪಿತ್ತಾಧಿಕ್ಯತೆಯಿಂದಲೂ ಇರುವುದು. ಆರ್ದ್ರಾರ್ಶದಲ್ಲಿ ಪಿಚ್ಛಿಲವಾದ ಬೆಳ್ಳಗಿರುವ ಅಥವಾ ಕೇವಲ ರಕ್ತಸ್ರಾವವಿರುವುದು. ಅರ್ಶಸ್ಸಿನ ನಿವಾರಣೆಗೆ ನಾಲ್ಕು ಸಾಧನೆಗಳಿವೆ—(೧) ಭೇಷಜ. (೨) ಕ್ಷಾರ, (೩) ಶಸ್ತ್ರ ಮತ್ತು (೪) ಅಗ್ನಿ. ಇವುಗಳಲ್ಲಿ ಮೊದಲನೆಯದಾದ ಭೇಷಜ ಚಿಕಿತ್ಸೆಯು ವಿನಹ ಉಳಿದ ಮೂರು ಕರ್ಮಗಳು ಸುಗಮವಾದುವಲ್ಲ. ಕರ್ಮವಿಭ್ರಮತ್ವವುಳ್ಳದ್ದರಿಂದ ಹಠಾತ್ತನೆ ಉಪದ್ರವಗಳನ್ನುಂಟುಮಾಡುವುವು. ಅವು ಯಾವುವೆಂದರೆ—

**ಪುಂಸ್ತ್ವೋಪಘಾತಃ ಶ್ವಯಥುರ್ಗುದೇವೇಗವಿನಿಗ್ರಹಃ ।**
**ಆಧ್ಮಾನಂ ದಾರುಣಂ ಶೂಲಂ ವ್ಯಥಾ ರಕ್ತಾತಿವರ್ತನಮ್ ॥**

**ಪುನರ್ವಿರೂಹೋರೂಢಾನಾಂ ಕ್ಲೇದೋಭ್ರಂಶೋ ಗುದಸ್ಯ ಚ।**
**ಮರಣಂ ವಾ ಭವೇಚ್ಛೀಘ್ರಂ ಶಸ್ತ್ರಕ್ಷಾರಾಗ್ನಿವಿಭ್ರಮಾತ್ ॥**

ಚ ಚಿ.ಅ. ೧೪.

ಪುಂಸ್ತ್ವೋಪಘಾತ, ಗುದಪ್ರದೇಶ ಊತ, ಮಲ, ಮೂತ್ರ ಮತ್ತು ವಾತ ವೇಗಗಳ ತಡೆ, ಹೊಟ್ಟೆಯುಬ್ಬರ, ತೀವ್ರವಾದ ನೋವು, ಬೇಸರ, ರಕ್ತದ ಅತಿಸ್ರಾವ, ಮೊಳಕೆಗಳು ನಾಶವಾದರೂ ಪುನಃ ಅವುಗಳ ಬೆಳವಣಿಗೆ, ಗುದ ದಲ್ಲಿ ಕ್ಲೇದ (ಮೊಳಕೆಗಳಿಂದ ಸ್ರಾವ), ಗುದಭ್ರಂಶ ಮತ್ತು ಮರಣಗಳು ಸಂಭವಿಸುವುವು.

ಔಷಧೋಪಯೋಗಕ್ರಮದಲ್ಲಿ ಈ ಬಗೆಯ ತೊಂದರೆಗಳಿರುವುದಿಲ್ಲ. ಕಾಯಚಿಕಿತ್ಸೆಗೆ ಸೇರಿದ ಆ ಉಪಕ್ರಮವು ಇಲ್ಲಿ ವಿವರಿಸಲ್ಪಡುತ್ತದೆ. ಕ್ಷಾರ,[೧] ಶಸ್ತ್ರ ಮತ್ತು ಅಗ್ನಿಕರ್ಮಗಳು ಶಲ್ಯತಂತ್ರಕ್ಕೆ ಸೇರಿದ ವಿಷಯಗಳು.

## ಶುಷ್ಕಾರ್ಶ

ಶೋಥಶೂಲೆಗಳಿಂದ ಕೂಡಿರುವ ಸ್ತಬ್ಧವಾದ ಅರ್ಶಗಳಿಗೆ ಮೊದಲು ಚಿತ್ರಕಕ್ಷಾರ ತೈಲವನ್ನು ಸವರಿ ಪೋಟಲಸ್ವೇದವನ್ನು ಮಾಡಬೇಕು. ಬಿಲ್ವ, ಅರ್ಕ ಮತ್ತು ಏರಂಡಪತ್ರಗಳ ಕ್ವಾಥದಿಂದ ಸೇಚನ ಮಾಡಬೇಕು. ನೋವು ಹೆಚ್ಚಾಗಿದ್ದರೆ ತೈಲವನ್ನು ಹಚ್ಚಿ ಮೂಲಂಗಿ, ತ್ರಿಫಲಾ ಮತ್ತು ಅರ್ಕಪತ್ರಗಳ ಕ್ವಾಥಮಾಡಿ ಅದರಲ್ಲಿ ಅವಗಾಹಸ್ನಾನವನ್ನು ಮಾಡಿಸಬೇಕು.

**ಬಿಲ್ವಕ್ವಾಥೇಽಥವಾ ತಕ್ರೇ ದಧಿಮಂಡಾಮ್ಲಕಾಂಜಿಕೇ ।**
**ಗೋಮೂತ್ರೇ ವಾ ಸುಖೋಷ್ಣೇತಂ ಸ್ವಭ್ಯಕ್ತಮವಗಾಹಯೇತ್॥**

ಚ.ಚಿ.ಅ. ೧೪.

ಅನಂತರ ಈ ಅರ್ಶಕ್ಕೆ ಕೃಷ್ಣಸರ್ಪ, ಹಂದಿ, ಒಂಟೆ ಇವುಗಳಲ್ಲಿ ಯಾವುದಾದರೊಂದರ ವಸೆಯನ್ನು ಹಚ್ಚಿ ನೃಕೇಶ, ಬೆಕ್ಕಿನ ರೋಮ ಮುಂತಾದವುಗಳಲ್ಲಿ ಯಾವುದಾದರೊಂದರ ಧೂಪವನ್ನು ಹಾಕಬೇಕು. ಸ್ನುಹೀಕ್ಷೀರ ಮತ್ತು ಅರಿಸಿನ ಚೂರ್ಣ ಇವನ್ನು ಕಲಸಿ ಅಥವಾ ಸ್ನುಹೀಕ್ಷೀರ, ಅರ್ಕಕ್ಷೀರ ಮತ್ತು ತ್ರಿಫಲಾಚೂರ್ಣಗಳನ್ನು ಕಲಸಿ ಅರ್ಶದ ಮೇಲೆ ಲೇಪ ಮಾಡಬೇಕು. ಚಿತ್ರಕಾದಿ ತೈಲಾಭ್ಯಂಗವೇ ಮೊದಲಾದ ಉಪಾಯಗಳು ಅರ್ಶದ ಕಾಠಿಣ್ಯ, ಶೋಥ ಮತ್ತು ನವೆಗಳನ್ನು ಜಾಗ್ರತೆಯಾಗಿ ಶಮನ ಮಾಡುವುವು. ಈ ಕ್ರಿಯೆಗಳಿಂದ ಅರ್ಶದಲ್ಲಿ ಸೇರಿರುವ ದುಷ್ಟ ರಕ್ತವು ಪ್ರಾಯಶಃ ಸ್ರವಿಸುವುದು.

---

೧. ಹೊಸದಾಗಿ ಬೆಳೆದಿರುವ, ಉಪದ್ರವವಿಲ್ಲದ ಸ್ವಲ್ಪ ದೋಷದ ಅರ್ಶವನ್ನು ಔಷಧಗಳಿಂದಲೂ, ಮೃದುವಾಗಿಯೂ, ಅಗಲವಾಗಿಯೂ, ರೂಢಮೂಲವಾಗಿ ಮೇಲಕ್ಕೆ ಬಂದಿರುವುದನ್ನು ಕ್ಷಾರದಿಂದಲೂ, ಕರ್ಕಶ, ಸ್ಥಿರ, ವಿಶಾಲ ಮತ್ತು ಕಠಿಣವಾದುವನ್ನು ಅಗ್ನಿಯಿಂದಲೂ ಮತ್ತು ಅದೃಶ್ಯವಾದುವನ್ನು ಔಷಧಗಳಿಂದಲೂ ಚಿಕಿತ್ಸಿಸಬೇಕು.

ಸು.ಚಿ.ಅ. ೭.

ಇದರಿಂದ ರೋಗಿಗೆ ಸುಖವುಂಟಾಗುವುದು. ಸ್ರಾವವು ಆಗದಿದ್ದಲ್ಲಿ ಸಂಚಿತ ವಾದ ದುಷ್ಟ ರಕ್ತವನ್ನು ಜಿಗಣೆಗಳಿಂದಲಾಗಲೀ ಯೋಗ್ಯವಾದ ಶಸ್ತ್ರಗಳಿಂದ ಲಾಗಲೀ ಹೊರಪಡಿಸಬೇಕು.

ಗುದಪ್ರದೇಶದಲ್ಲಿ ಶೋಥ, ಶೂಲೆಗಳಿಂದ ನರಳುತ್ತಿರುವವನಿಗೆ ದೀಪನ, ಪಾಚನ ಮತ್ತು ಅನುಲೋಮನ ಔಷಧಗಳನ್ನು ಕೊಡಬೇಕು. ಇದಕ್ಕಾಗಿ ಗುಡಹರೀತಕಿಯನ್ನಾಗಲೀ, ತ್ರಿವೃತ್ ಮತ್ತು ತ್ರಿಫಲಾಗಳನ್ನಾಗಲೀ ಕೊಡ ಬೇಕು. ಔಷಧಾರ್ಥವಾಗಿ ಗುಡಾನುಪಾನದಲ್ಲಿ ಗೋಮೂತ್ರಹರೀತಕಿಯ ನ್ನಾಗಲೀ ಸೀಧು ಅನುಪಾನದಲ್ಲಿ ಜೀರಿಗೆ ಮತ್ತು ಚಿತ್ರಕ ಚೂರ್ಣವನ್ನಾಗಲೀ ಮಜ್ಜಿಗೆಯೊಂದಿಗೆ ಶುದ್ಧ ಭಲ್ಲಾತಕವನ್ನಾಗಲೀ ಉಪಯೋಗಿಸಬೇಕು. ತಕ್ರಾನುಪಾನ ಮತ್ತು ತಕ್ರಾರಿಷ್ಟಗಳು ಅರ್ಶಸ್ಸು, ಗ್ರಹಣೀ ಮತ್ತು ಅತೀ ಸಾರಗಳಲ್ಲಿ ಶ್ರೇಷ್ಠವಾದ ಅನುಲೋಮಿಗಳು.

**ವಾತಶ್ಲೇಷ್ಮಾರ್ಶಸಾಂ ತಕ್ರಾತ್ಪರಂ ನಾಸ್ತೀಹಭೇಷಜಮ್ ।**
**ತತ್ಪ್ರಯೋಜ್ಯಂ ಯಥಾ ದೋಷಂ ಸಸ್ನೇಹಂ ರೂಕ್ಷಮೇವವಾ ॥**
**ಚ.ಚಿ.ಅ. ೧೪**

ಹೀಗೆ ತಕ್ರವನ್ನು ಕೊಡುವಾಗ ವಾತೋಲ್ಬಣ ಮತ್ತು ಶ್ಲೇಷ್ಮೋಲ್ಬಣ ಗಳಿಗನುಸಾರವಾಗಿ ವಾತದಲ್ಲಿ ಸ್ವಲ್ಪ ಸ್ನಿಗ್ಧವಿರುವ ತಕ್ರವನ್ನೂ, ಶ್ಲೇಷ್ಮದಲ್ಲಿ ರೂಕ್ಷವಾದ ತಕ್ರವನ್ನೂ ಕೊಡಬೇಕು. ಬಹಳ ಮೃದುಕಾಯಾಗ್ನಿಯುಳ್ಳವನಿಗೆ ತಕ್ರವನ್ನು ಭೋಜನಾದಿಗಳಲ್ಲಿ ವಿವಿಧ ಪ್ರಕಾರ ಸೇರಿಸಿ ಕೊಡಬೇಕು. ಹೀಗೆ ಅದನ್ನು ರೋಗಿಯ ಹಿತವನ್ನನುಸರಿಸಿ ಏಳು ದಿನ, ಹತ್ತು ದಿನ, ಹದಿನೈದು ದಿನ ಅಥವಾ ಒಂದು ತಿಂಗಳವರೆಗೂ ಉಪಯೋಗಿಸುತ್ತಾ ಅದರ ಪ್ರಮಾಣ ವನ್ನು ಕ್ರಮಕ್ರಮವಾಗಿ ಕಡಿಮೆಮಾಡುತ್ತಾ ಕಡೆಗೆ ಸಾಮಾನ್ಯ ಮಿತಿಯಲ್ಲಿ ಕೊಡುತ್ತ ಬರಬೇಕು; ಒಂದೇ ಬಾರಿಗೆ ನಿಲ್ಲಿಸಿಬಿಡಬಾರದು. ಆದರೆ ಊಟದ ಪ್ರಮಾಣವನ್ನು ಮಾತ್ರ ಹೆಚ್ಚು ಕಡಿಮೆ ಮಾಡಬಾರದು. ಇದರಿಂದ ರೋಗಿಯ ದೇಹಬಲ, ವರ್ಣ ಮತ್ತು ಅಗ್ನಿಶಕ್ತಿಗಳು ಹೆಚ್ಚುವುವು ತಕ್ರದಿಂದ ಹೋಗ ಲಾಡಿಸಲ್ಪಟ್ಟ ಗುದಾಂಕುರಗಳು ಪುನಃ ಬೆಳೆಯುವುದಿಲ್ಲ. ಆಹಾರಕ್ಕಾಗಿ ಕೆಂಭತ್ತ, ಷಷ್ಟಿಕ, ಶರತ್ಕಾಲದ ಭತ್ತ ಮುಂತಾದ ಧಾನ್ಯಗಳಿಂದ ಮಾಡಿದ

ಅನ್ನದೊಂದಿಗೆ ಪಿಪ್ಪಲ್ಯಾದಿ[1] ದ್ರವ್ಯಗಳಿಂದ ಕೂಡಿದ ಮಜ್ಜಿಗೆಹುಳಿ, ಪೇಯಾ, ಘೃತಗಳನ್ನೂ ಪಿಪ್ಪಲೀನಾಗರ, ಯವಾಗೂ ಅಥವಾ ಹುಳಿಮಜ್ಜಿಗೆಯೊಂದಿಗೆ ಮರಿಚಚೂರ್ಣ ಇಂತಹುವನ್ನು ಪಯೋಗಿಸಬೇಕು. ಪಿಪ್ಪಲ್ಯಾದಿ ದ್ರವ್ಯಯುಕ್ತ ವಾದ ಆಡಿನ ಮಾಂಸವನ್ನು ಯೂಷದೊಂದಿಗಾದರೂ ಕೊಡಬಹುದು.

ಗಾಢನುಲವಿರುವವರಿಗೆ ಶರ್ಕರ ಶುಂಠಿಗಳನ್ನು ತಿನ್ನಿಸಿ ಸ್ನಿಗ್ಧವಾದ ಶುಕ್ತಿಯನ್ನಾಗಲೀ, ಸ್ವಲ್ಪ ಲವಣಯುಕ್ತವಾದ ತಿಳಿಮದ್ಯವನ್ನಾಗಲೀ ಕುಡಿಸ ಬೇಕು. ಇತರ ಅನುಲೌಮಿಕವಾದ ಔಷಧಗಳನ್ನು ಘೃತ, ಗುಡ ಮತ್ತು ಯವಕ್ಷಾರಗಳೊಂದಿಗೆ ಸೇವಿಸುವುದಕ್ಕೆ ಕೊಡಬೇಕು. ಕರಂಜಪಲ್ಲವ ಮತ್ತು ತಪಸೀಚಿಗುರುಗಳನ್ನು ಯಮಕಸ್ನೇಹ(ತುಪ್ಪ ಮತ್ತು ಎಣ್ಣೆ)ದಲ್ಲಿ ಹುರಿದು ಸಕ್ತುವಿನೊಂದಿಗೆ ತಿನ್ನಿಸಬೇಕು. ಚವ್ಯತ್ರಿಕಟುಘೃತವು[2] ವಾತ ಮತ್ತು ಮಲಗಳನ್ನು ಅನುಲೋಮನ ಮಾಡುತ್ತದೆ, ಪಾನ, ಆಹಾರ ಮುಂತಾದುವು ಗಳಿಗೆ ಚಾಂಗೇರ್ಯಾದಿ ಘೃತವು ಶ್ರೇಷ್ಠವಾದುದು.

ವಾತದೋಷವು ಹೆಚ್ಚಿದ್ದು ರೂಕ್ಷತೆ ಮತ್ತು ಅಗ್ನಿಮಾಂದ್ಯವಿರುವವನಿಗೆ ಶರ್ಕರಾಸವ, ಸೀಧು, ಮೊಸರಿನ ತಿಳಿ ಅಥವಾ ಶೃತಶೀತ ಜಲಗಳನ್ನು ಕುಡಿಸ ಬೇಕು. ಉದಾವರ್ತವಿದ್ದಲ್ಲಿ ಪಿಪ್ಪಲ್ಯಾದ್ಯನುವಾಸನ ತೈಲದ ವಸ್ತಿಯು ಉತ್ತಮ ವಾದುದು. ಈ ತೈಲಕ್ಕೆ ಹಾಕುವ ಕಲ್ಕದ್ರವ್ಯಗಳನ್ನೇ ಅರ್ಶಕ್ಕೆ ಲೇಪಿಸ

---

೧. ಪಿಪ್ಪಲೀ ಪಿಪ್ಪಲೀಮೂಲಂ ಚಿತ್ರಕಂ ಹಸ್ತಿಪಿಪ್ಪಲೀಮ್ ।
ಶೃಂಗವೇರಮಜಾಜೀಂಚಕಾರವೀಂ ಧಾನ್ಯತುಂಬುರುಮ್ ॥
ಬಿಲ್ವಂ ಕರ್ಕಟಕಂ ಪಾಠಾಂ ಪಿಷ್ಟ್ವಾ ಪೇಯಾಂ ವಿಪಾಚಯೇತ್ ।
ಫಲಾಮ್ಲಾಂ ಯಮಕೈರ್ಭೃಷ್ಟಾಂ ತಾಂ ದದ್ಯಾದ್ಗುದಜಾಪಹಾಮ್ ॥
ಚ.ಚಿ.ಅ. ೧೪.

೨. ಚವ್ಯಂ ತ್ರಿಕಟುಕಂ ಪಾಠಾಂ ಕ್ಷಾರಂ ಕುಸ್ತುಂಬುರೂಣಿಚ ।
ಯಮಾನೀಂ ಪಿಪ್ಪಲೀಮೂಲಮುಭೇಚ ಬಿಡಸೈಂಧವೇ ॥
ಚಿತ್ರಕಂ ಬಿಲ್ವಮಭಯಾಂಪಿಷ್ಟ್ವಾ ಸರ್ಪಿರ್ವಿಪಾಚಯೇತ್ ।
ಶಕೃದ್ವಾತಾನುಲೋಮ್ಯಾರ್ಥಂ ಜಾತೇ ದಧ್ನಿ ಚತುರ್ಗುಣೇ ॥
ಪ್ರವಾಹಿಕಾಂ ಗುದಭ್ರಂಶಂ ಮೂತ್ರಕೃಚ್ಛ್ರಂ ಪರಿಸ್ರವಂ ।
ಗುದವಂಕ್ಷಣಶೂಲಂಚ ಘೃತಮೇತದ್ವ್ಯಪೋಹತಿ ॥

ಬಹುದು. ಹಾಗೆಯೇ ದಶಮೂಲ ಕಷಾಯವಸ್ತಿಯನ್ನಾದರೂ ಕೊಡಬಹುದು. ಅನಂತರ ಸಿದ್ಧ ಅರಿಷ್ಟ[೧]ಯೋಗಗಳನ್ನು ಪಯೋಗಿಸಬೇಕು. ಶೌಚಕಾರ್ಯ ಗಳಿಗೆ ಸುಖೋಷ್ಣವಾಗಿರುವ ಪತ್ರಭಂಗಕ್ವಾಥವನ್ನಾಗಲೀ, ಕೇವಲ ನೀರ ನ್ನಾಗಲೀ ಉಪಯೋಗಿಸಬೇಕು.

## ಆದ್ರಾರ್ಶ

ಆದ್ರಾರ್ಶದಲ್ಲಿ ವಾತಾನುಬಂಧವಿದ್ದರೆ ಸ್ನಿಗ್ಧಶೀತಕ್ರಿಯೆಯನ್ನೂ ಕಫಾನುಬಂಧವಿದ್ದರೆ ರೂಕ್ಷಶೀತಕ್ರಿಯೆಯನ್ನೂ ಮಾಡಬೇಕು. ಪಿತ್ತಶ್ಲೇಷ್ಮವೇ ಹೆಚ್ಚಾಗಿದ್ದರೆ ದುಷ್ಟರಕ್ತವನ್ನು ತೆಗೆಯಬೇಕು ಅಥವಾ ರಕ್ತವೇ ಸ್ರವಿಸುತ್ತಿದ್ದರೆ ಅದನ್ನು ತಡೆಯಬಾರದು. ದೋಷಪಾಚನಕ್ಕಾಗಿ ಅವನಿಗೆ ತಕ್ಕಷ್ಟು ಲಂಘನ ವನ್ನು ಮಾಡಿಸಬೇಕು. ದುಷ್ಟರಕ್ತವನ್ನು ತಡೆದರೆ ರಕ್ತಪಿತ್ತ, ಜ್ವರ, ತೃಷ್ಣಾ, ಅಗ್ನಿಮಾಂದ್ಯ, ಅರೋಚಕ, ಕಾಮಿಲಾ, ಗುದ ವಂಕ್ಷಣಗಳಲ್ಲಿ ಶೋಥ ಮತ್ತು ಶೂಲೆಗಳು, ಕಂಡೂ, ಪಿಟಿಕೆ, ಕುಷ್ಠ, ಪಾಂಡು, ವಾತ ಮೂತ್ರಪುರೀಷಗಳ ತಡೆ, ತಲೆನೋವು, ಮೈಭಾರವೇ ಮುಂತಾದ ಇತರ ರಕ್ತವ್ಯಾಧಿಗಳು ಸಂಭ ವಿಸುವುವು. ದುಷ್ಟ ರಕ್ತವು ಸ್ರಾವವಾಗಿ ಹೋಗಿರುವುದನ್ನು ರಕ್ತದ ಲಕ್ಷಣ ಗಳಿಂದ ತಿಳಿಯಬೇಕು. ರಕ್ತಸ್ರಾವದ ಹೇತು, ಲಕ್ಷಣ, ಕಾಲ, ರಕ್ತದ ವರ್ಣ ಮತ್ತು ರೋಗಿಯ ಬಲಗಳನ್ನು ನೋಡಿಕೊಂಡು ಅವನಿಗೆ ಸ್ರಾವದಿಂದ ಯಾವ ಅಪಾಯವೂ ಸಂಭವಿಸದಿರುವವರೆಗೆ ಉಪೇಕ್ಷಿಸಿ ಅನಂತರ ರಕ್ತವನ್ನು ನಿಲ್ಲಿಸುವುದು ಹಿತಕರವು. ಅಗ್ನಿವೃದ್ಧಿಯಾಗುವುದಕ್ಕೂ, ರಕ್ತ ನಿಲ್ಲುವುದಕ್ಕೂ ಮತ್ತು ದೋಷಗಳು ಪಚನವಾಗುವುದಕ್ಕೂ ತಿಕ್ತದ್ರವ್ಯಗಳನ್ನು ಪಯೋಗಿಸ ಬೇಕು. ಅತಿಯಾಗಿ ರಕ್ತಸ್ರಾವವಾದರೆ ವಾತವೃದ್ಧಿಯಾಗುವುದು. ಇದನ್ನು ಹೋಗಲಾಡಿಸಲು ಸ್ನೇಹೌಷಧಗಳ ಪಾನ, ಅನುವಾಸನ ಮತ್ತು ಅಭ್ಯಂಗಗಳು ಹಿತಕರ. ಬೇಸಿಗೆಯಲ್ಲಿ ಪಿತ್ತದೋಷವು ಹೆಚ್ಚಿ ರಕ್ತವು ಸ್ರಾವವಾಗಿ ಹೋಗು ತ್ತಿದ್ದರೆ ಕೂಡಲೇ ರಕ್ತ ನಿಲ್ಲುವ ಚಿಕಿತ್ಸೆಯನ್ನು ನಡೆಸಬೇಕು. ಆದರೆ ವಾತ

---

೧. ಅಭಯಾರಿಷ್ಟ, ದಂತ್ಯರಿಷ್ಟ, ಫಲಾರಿಷ್ಟ, ಕನಕಾರಿಷ್ಟ.

ಕಫಾನುಬಂಧಗಳಿದ್ದಲ್ಲಿ ಸ್ರಾವವನ್ನು ನಿಲ್ಲಿಸಬಾರದು. ವಾತಾನುಬಂಧವನ್ನು ಸ್ನೇಹನದಿಂದಲೂ, ಕಫಾನುಬಂಧವನ್ನು ರೂಕ್ಷಣದಿಂದಲೂ ಶಮನಪಡಿಸಬೇಕು ರಕ್ತವು ನಿಲ್ಲುವಂತೆ ಮಾಡಲು ಕುಟಜಾದಿ ರಸಕ್ರಿಯೆಯು ಶ್ರೇಷ್ಠವಾದುದು. ಇದನ್ನು ಆಡಿನ ಹಾಲಿನೊಂದಿಗೆ ಅಥವಾ ಪೇಯಾಮಂಡಗಳೊಂದಿಗೆ ಕೊಡಬೇಕು. ಔಷಧವು ಜೀರ್ಣಿಸಿದನಂತರ ಆಡಿನ ಹಾಲಿನೊಂದಿಗೆ ಶಾಲಿಯಕ್ಕಿಯಿಂದ ಮಾಡಿದ ಅನ್ನವನ್ನು ಕೊಡಬೇಕು. ಇದರಿಂದ ಅರ್ಶ, ಅತೀಸಾರ ಮತ್ತು ರಕ್ತಪಿತ್ತಗಳಲ್ಲಿ ನಷ್ಟವಾಗುತ್ತಿರುವ ರಕ್ತಗಳು ನಿಲ್ಲುತ್ತವೆ. ನೀಲೋತ್ಪಲ, ಮಂಜಿಷ್ಠೆ, ಎಲವದಹಗಿನು, ರಕ್ತಚಂದನ, ತಿಲ ಮತ್ತು ಲೋಧ್ರಗಳ ಕ್ವಾಥವನ್ನು ಆಡಿನ ಹಾಲಿನೊಂದಿಗೆ ಸೇವಿಸಲು ಕೊಡಬೇಕು. ಶಾಲ್ಯೋದನವನ್ನು ಆಡಿನ ಹಾಲಿನೊಂದಿಗೆ ಭೋಜನ ಮಾಡಲು ಕೊಡಬೇಕು. ವಾಸ್ತುಕ(ಚಕ್ಕೋತಸೊಪ್ಪು)ವನ್ನು ಆಡಿನ ಹಾಲಿನೊಡನೆ ಉಪಯೋಗಿಸಬೇಕು. ಜಾಂಗಲಮಾಂಸರಸವನ್ನು ಅಮ್ಲವಿಲ್ಲದೆ ಅಥವಾ ಸ್ವಲ್ಪವೇ ಅಮ್ಲ ಹಾಕಿ ಕೊಡಬೇಕು. ಪಲಾಂಡುವನ್ನು ಮಾಂಸರಸ, ಖಡ, ಯೂಷ, ಯವಾಗೂ ಮುಂತಾದುವುಗಳೊಡನೆ ಅಥವಾ ಪ್ರತ್ಯೇಕವಾಗಿಯೇ ಉಪಯೋಗಿಸುವುದರಿಂದ ಅರ್ಶಸ್ಸಿನ ರಕ್ತಸ್ರಾವ ನಿಲ್ಲುತ್ತದೆ ಮತ್ತು ವಾತಶಮನವಾಗುತ್ತದೆ. ಮಲ ಮತ್ತು ರಕ್ತಕ್ಷೀಣತೆಗಳಲ್ಲಿ ಮಧ್ಯವಯಸ್ಸುಳ್ಳ ಆಡಿನ ವಪೆಯನ್ನು ರಕ್ತಸಹಿತವಾಗಿ ಪಲಾಂಡುವಿನೊಡನೆ ಮಧುರ ಮತ್ತು ಅಮ್ಲ ರುಚಿಗಳ ಹೆಚ್ಚು ಕಡಿಮೆಯಿಂದ ಆಹಾರ ಸಿದ್ಧಮಾಡಿ ತಿನ್ನಿಸಬೇಕು.

**ನವನೀತಘೃತಂ ಛಾಗಂ ಮಾಂಸಂ ಚ ಸಷಷ್ಟಿಕಃ ಶಾಲಿಃ ।**
**ತರುಣಶ್ಚ ಸುರಾಮಣ್ಡಸ್ತರುಣೀ ಚ ಸುರಾನಿಹನ್ತ್ಯಸ್ರಮ್ ॥**

**ಪಥ್ಯ**—ಹುಣಿಸೇ ಹಣ್ಣು, ದಾಡಿಮಾಮ್ಲ, ಪುಲ್ಲಂಪುರಚಿ, ಎಳಚಿ, ಕಾಶ್ಮರೀ ಹಣ್ಣು, ಆಮಲಕ, ಗೃಂಜನ, ಚುಕ್ಕೀಸೊಪ್ಪು (ಚುಕ್ರಿಕಾ), ಆಲದ ಮೊಗರು, ಕಂಚವಾಳದ ಹೂವು, ಸಾರಂಗಿಬೇಳೆಯ ತೊವ್ವೆ, ಹುಳಿಮಜ್ಜಿಗೆ, ಶಾಲ್ಯನ್ನ, ಸಾಮೆ, ನವನೀತ, ಪಲಾಂಡು ಮುಂತಾದುವು.

ಕಫಪಿತ್ತಗಳು ದುಷ್ಟವಾಗಿದ್ದರೂ ರಕ್ತವು ಅತಿಯಾಗಿ ಸ್ರಾವವಾಗುತ್ತಿದ್ದರೆ ವಾತಾಧಿಕ್ಯದಿದೆಯೆಂದು ತಿಳಿಯಬೇಕು. ಅದಕ್ಕೆ ಮೇಲೆ ಹೇಳಿದ

ವಾತಹರ ಚಿಕಿತ್ಸೆಯನ್ನು ಮಾಡಬೇಕು. ಕಫವಾತ ಲಕ್ಷಣಗಳು ಅಧಿಕವಿದ್ದಲ್ಲಿ ರಕ್ತಪಿತ್ತ ಚಿಕಿತ್ಸೆಯನ್ನು ಅನುಸರಿಸಬೇಕು. ಪರಿಷೇಕ, ಅವಗಾಹ, ಪ್ರದೇಹಾದಿಗಳಲ್ಲಿ ಎಲ್ಲಾ ಶೀತಲ ಕ್ರಿಯೆಗಳನ್ನೇ ಮಾಡಬೇಕು. ಮೊದಲು ಗುದ ಮತ್ತು ಉಪಸ್ಥಪ್ರದೇಶಗಳಲ್ಲಿ ಘೃತ ಅಥವಾ ಶೀತಲ ತೈಲ ಲೇಪಮಾಡಿ ತಣ್ಣೀರಿನ ಧಾರಾಸೇಚನ ಅಥವಾ ಎಳೆ ಬಾಳೆ ಎಲೆ, ತಾವರೆ ಎಲೆ ಮುಂತಾದುವುಗಳನ್ನು ಕಟ್ಟಿ ಆಗಾಗ್ಗೆ ಬದಲಾಯಿಸುತ್ತಿರುವುದು, ಶತಧೌತ, ಸಹಸ್ರಧೌತ ಘೃತಗಳನ್ನು ಹಚ್ಚುವುದು, ತಂಗಾಳಿಯನ್ನು ಬೀಸುವುದು—ಇವು ರಕ್ತಸ್ರಾವವನ್ನು ನಿಲ್ಲಿಸುವುವು. ಮಂಜಿಷ್ಠೆ, ಅತಿಮಧುರ, ರಸಾಂಜನ ಘೃತ ಮುಂತಾದುವು ಉರಿ, ಕ್ಲೇದ, ಗುದಭ್ರಂಶಗಳನ್ನು ಹೋಗಲಾಡಿಸಲು ಒಳ್ಳೆಯ ದ್ರವ್ಯಗಳು.

ಕಾಚು ಮತ್ತು ಅಫೀಮು ಸೇರಿರುವ ಮುಲಾಮನ್ನು ಉಪಯೋಗಿಸುವುದರಿಂದ ಉರಿ, ಕ್ಲೇದಗಳು ಕೂಡಲೇ ನಿಲ್ಲುತ್ತವೆ.

ಈ ಕ್ರಿಯೆಗಳಿಂದಲೂ ಸ್ರಾವವು ನಿಲ್ಲದಿದ್ದರೆ ರೋಗಿಯ ದೌರ್ಬಲ್ಯಾದಿಗಳನ್ನು ಹೋಗಲಾಡಿಸಲು ಅವನಿಗೆ ಸ್ನಿಗ್ಧೋಷ್ಣವಾದ ಮಾಂಸರಸಗಳನ್ನು ಕೊಡಬೇಕು. ಅವಪೀಡಕ ಸರ್ಪಿಃಪಾನ, ಸುಖೋಷ್ಣವಾದ ಅಭ್ಯಂಗಸೇಕಗಳು ಹಿತವಾದುವು. ಪಿಚ್ಛಾಬಸ್ತಿಯು ಎಲ್ಲಾ ವಿಧ ಸ್ರಾವಗಳನ್ನೂ ಕೂಡಲೇ ತಡೆಯುವುದು.

**ಯದ್ವಾಯೋರಾನುಲೋಮ್ಯಾಯ ಯದಗ್ನಿಬಲವೃದ್ಧಯೇ ।**
**ಅನ್ನಪಾನೌಷಧದ್ರವ್ಯಂ ತತ್ಸೇವ್ಯಂ ನಿತ್ಯಮರ್ಶಸೈಃ ॥**

**ಚ.ಚಿ. ೧೪.**

ಅರ್ಶೋರೋಗಿಯು ಯಾವಾಗಲೂ ವಾತಾನುಲೋಮನ ಮಾಡುವ ಮತ್ತು ಅಗ್ನಿ ವೃದ್ಧಿಮಾಡುವ ಅನ್ನಪಾನಗಳನ್ನೂ ಔಷಧ ದ್ರವ್ಯಗಳನ್ನೂ ಸೇವಿಸುತ್ತಿರಬೇಕು.

## ಅರ್ಶಃ

### ಶುಷ್ಕಮ್ ।

ವಾತಕಫೋಲ್ಬಣಮ್ ।

೧) ಸ್ವಭ್ಯಕ್ತಸ್ವೇದನಮ್ (ಉಪನಾಹಃ, ಪಿಂಡಸ್ವೇದಃ) । ಸೇಚನಂಚ ।

೨) ಅವಗಾಹನಮ್ ।

೩) ಕೃಷ್ಣಸರ್ಪವಸಾದಿಭಿರಭ್ಯಜ್ಯ ಧೂಪನಮ್ ।

೪) ಲೇಪನಮ್ (ಸ್ನುಗ್ನಿಶಾಲೇಪಃ) ।

೫) ರಕ್ತಾವಸೇಚನಮ್ (ಸುಚಿತಂ ದುಷ್ಟರುಧಿರಂ ಜಲೌಕೋಭಿಃ ಶಸ್ತ್ರೈರ್ವಾವಸೇಚಯೇತ್)

೬) ತಕ್ರವರ್ತನಂ (ದೀಪನಪಾಚನಾನುಲೌಮಿಕಯೋಗಾಃ)

೭) ಸುಖೋಷ್ಣಪತ್ರಭಂಗಕ್ವಾಥೇನ ವಾಂಭಸಾ ಶೌಚಮ್ ।

### ಆರ್ದ್ರಮ್ ।

ರಕ್ತಪಿತ್ತೋಲ್ಬಣಮ್ ।

೧) ಸ್ನಿಗ್ಧಶೀತಂ ಹಿತಂ ವಾತೇ
ರೂಕ್ಷಶೀತಂ ಕಫಾನುಗೇ ।

೨) ಪಿತ್ತಶ್ಲೇಷ್ಮಾನುಗೇ ಶೋಧನಂ—ಸ್ರಾವಣಂ ಲಂಘನಂ
—ದೋಷಯುಕ್ತಸ್ರಾವಮುಪೇಕ್ಷಣಮ್ ।
ದೋಷನಿವೃತ್ತೇ ಸಂಗ್ರಹಣಮ್ ।

೩) ದೋಷಪಾಚನಾರ್ಥಂ ಸಂಗ್ರಹಣಾಯ ಚ ತಿಕ್ತಾಃ ।
ತತ್ರವಾತೋಲ್ಬಣೇ ಪಾನಾನುವಾಸನೇಷು ಸ್ನೇಹಃ ।
ಪಿತ್ತೋಲ್ಬಣೇ ಗ್ರೀಷ್ಮೇ ಚ ಸಂಗ್ರಹಃ ಕೇವಲಃ,
ನವಾತ ಕಫಾನುಗೇ ।

೪) ಕುಟಜಾದಿ ಸಂಗ್ರಾಹಕಾನಿ; ಶಿತೋಪಚಾರಃ ।

೫) ಅಶಾಂತೌ ಪಿಚ್ಛಾವಸ್ತಿಃ ।

೬) ಮಧುರಾಮ್ಲವ್ಯತ್ಯಾಸಃ ।

# ಗುಲ್ಮನಿದಾನ

ಮಿಥ್ಯಾಹಾರವಿಹಾರಗಳಿಂದ ಬಹಳವಾಗಿ ದುಷ್ಟವಾದ ದೋಷಗಳು ಕೋಷ್ಠದ ಒಳಭಾಗದಲ್ಲಿ ಗ್ರಂಥಿಯನ್ನುಂಟುಮಾಡುವುವು. ಈ ಗ್ರಂಥಿಗೆ **ಗುಲ್ಮ** ವೆಂದು ಹೆಸರು. ಗುಲ್ಮವು ಪಾರ್ಶ್ವ, ಹೃದಯ, ನಾಭಿ ಮತ್ತು ಬಸ್ತಿಗಳ ನಡುವೆ ಉಂಟಾಗುವುದು. ಗುಲ್ಮವು ಕೋಷ್ಠದಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಓಡಾಡಬಹುದು ಅಥವಾ ಸ್ಥಿರವಾಗಿರಬಹುದು; ಗುಂಡಗೆ ಉಬ್ಬುತ್ತಲೂ ತಗ್ಗುತ್ತಲೂ ಇರಬಹುದು. ಇದು ವಾತ, ಪಿತ್ತ, ಕಫ, ಸನ್ನಿಪಾತ ಮತ್ತು ರಕ್ತಗುಲ್ಮಗಳೆಂದು ಐದು ವಿಧವಾಗಿದೆ. ರಕ್ತಗುಲ್ಮವು ಸ್ತ್ರೀಯರಿಗೆ ಮಾತ್ರ ಉಂಟಾಗುವುದು. ಉಳಿದುವು ಸ್ತ್ರೀಪುರುಷರಿಬ್ಬರಿಗೂ ಸಂಭವಿಸುವುವು.

**ಪೂರ್ವರೂಪ**—ಅಧಿಕವಾಗಿ ತೇಗು ಬರುತ್ತಿರುವುದು, ಮಲಬಂಧ, ಅನ್ನದ ಮೇಲೆ ಇಚ್ಛೆಯಿಲ್ಲದಿರುವುದು, ಅಂತ್ರಕೂಜನ, ಆಟೋಪ, ಆಧ್ಮಾನ, ಜೀರ್ಣಶಕ್ತಿಯಿಲ್ಲದಿರುವುದು ಇವು ಮುಂದೆ ಉಂಟಾಗುವ ಗುಲ್ಮವನ್ನು ಸೂಚಿಸುವುವು.

**ಸಾಮಾನ್ಯ ಲಕ್ಷಣ**—ಅರುಚಿ, ಮಲಮೂತ್ರಗಳು ಸ್ವಲ್ಪ ಸ್ವಲ್ಪವಾಗಿ ಹೋಗುವಿಕೆ, ಅಂತ್ರಗಳಲ್ಲಿ ಗಾಳಿ ತುಂಬಿ ಶಬ್ದ ಮಾಡುವಂತಿರುವಿಕೆ, ಹೊಟ್ಟೆಯುಬ್ಬರ, ವಾತವು ಪ್ರತಿಲೋಮವಾಗಿರುವಿಕೆ ಈ ಲಕ್ಷಣಗಳು ಎಲ್ಲಾ ಗುಲ್ಮಗಳಲ್ಲೂ ಕಂಡುಬರುವುವು.

ರೂಕ್ಷ ಮತ್ತು ವಿಷಮ ಭೋಜನಗಳು, ಹೀನಾಧಿಕ ಪ್ರಮಾಣಗಳಲ್ಲಿ ತಿನ್ನುವುದು, ವಿರುದ್ಧ ಚೇಷ್ಟೆ (ಸಾಹಸಕೃತ್ಯ ಮುಂತಾದುವು), ವೇಗನಿಗ್ರಹ, ದುಃಖ, ಅಭಿಘಾತ, ವಸ್ತಿವಿರೇಚನಗಳಿಂದ ಮಲ ಕ್ಷೀಣವಾಗುವುದು ಮತ್ತು ಉಪವಾಸ ಮಾಡುವುದು ವಾತಗುಲ್ಮದ ಕಾರಣಗಳು.

ಆಯಾ ಸ್ಥಾನಕ್ಕೆ ತಕ್ಕಂತೆ ಗುಲ್ಮದ ಆಕೃತಿ ಮತ್ತು ನೋವುಗಳಿರುವುವು. ಮಲಮೂತ್ರಗಳ ತಡೆ, ಗಂಟಲು ಬಾಯಿಗಳು ಒಣಗುವಿಕೆ, ಮುಖವು ಶ್ಯಾವ ಅರುಣವರ್ಣವಾಗಿ ಶೀತಜ್ವರ ಲಕ್ಷಣಗಳಿರುವುವು. ಹೃದಯ, ಕುಕ್ಷಿ, ಪಾರ್ಶ್ವ, ಅಂಸ ಮತ್ತು ಶಿರಸ್ಸುಗಳ ನೋವು ಇವು ವಾತಗುಲ್ಮದ ಲಕ್ಷಣಗಳು ಮತ್ತು

ಆಹಾರ ಜೀರ್ಣವಾದನಂತರ ನೋವು ಹೆಚ್ಚುವುದು, ಊಟದನಂತರ ಅದು ಕಡಿಮೆಯಾಗುವುದು ; ಇದಕ್ಕೆ ತಿಕ್ತ, ಕಟು, ಕಷಾಯಗಳು ಅನುಪಶಯ ಗಳಾಗಿರುವುವು.

ಕಟು ತೀಕ್ಷ್ಣಾದಿ ಆಹಾರಗಳಿಂದಲೂ, ಕ್ರೋಧ, ತೀಕ್ಷ್ಣಮದ್ಯ, ಬಿಸಿಲಿನ ತಾಪಗಳ ಸೇವನೆಗಳಿಂದಲೂ, ಅಭಿಘಾತದಿಂದಲೂ ರಕ್ತ ದುಷ್ಟವಾಗಿ ಪಿತ್ತಗುಲ್ಮವಾಗುವುದು.

ಇದರಲ್ಲಿ ಜ್ವರ, ಪಿಪಾಸ, ಮೈ ಕೆಂಪೇರಿರುವುದು, ಆಹಾರ ಜೀರ್ಣವಾಗುತ್ತಿರುವಾಗಲೂ, ಆದಮೇಲೂ ನೋವು ಹೆಚ್ಚುವುದು, ಮೈ ಬೆವರುವುದು, ವಿದಾಹ ಮತ್ತು ವ್ರಣದಂತೆ ಪಾಕದ ಲಕ್ಷಣಗಳು ತೋರುವುವು. ಗುಲ್ಮ ಭಾಗವನ್ನು ಮುಟ್ಟಿದರೆ ಅಸಹನೆಯುಂಟಾಗುವುದು.

ಕಫಗುಲ್ಮವು ಶೀತ, ಗುರು ಮತ್ತು ಸ್ನಿಗ್ಧ ಆಹಾರಗಳಿಂದಲೂ, ಸೋಮಾರಿತನ, ಅತಿ ಭೋಜನ ಮತ್ತು ಹಗಲು ನಿದ್ದೆಗಳಿಂದಲೂ ಉಂಟಾಗುವುದು. ಗುಲ್ಮವು ಉಬ್ಬಿಕೊಂಡು ಒಂದೇ ಸಮನಾಗಿ ಗಟ್ಟಿಯಾಗಿರುವುದು, ಶೀತಜ್ವರ, ದೌರ್ಬಲ್ಯ, ಹೃಲ್ಲಾಸ, ಕಾಸ, ಮೈಭಾರ ಇವು ಇದರ ಲಕ್ಷಣಗಳು.

ಸನ್ನಿಪಾತ ಗುಲ್ಮದಲ್ಲಿ ಎಲ್ಲಾ ಲಕ್ಷಣಗಳೂ ಇರುವುವು. ಇದು ಅಸಾಧ್ಯವಾದುದು.

ಪ್ರಸವವಾದ ಹೊಸದರಲ್ಲೂ, ಗರ್ಭಪಾತವಾದ ಸಮಯದಲ್ಲೂ ಅಹಿತ ಭೋಜನ ಮಾಡುವುದರಿಂದ ವಾತವು ರಕ್ತವನ್ನು ದೂಷಿಸಿ ಗುಲ್ಮವನ್ನುಂಟು ಮಾಡುವುದು. ನೋವು ಉರಿ ಮತ್ತು ಪಿತ್ತಗುಲ್ಮದ ಲಕ್ಷಣಗಳು ಕಂಡುಬರುವುವು. ಗರ್ಭದಂತೆ ಗುಲ್ಮವು ಬೆಳೆದು ಸ್ಪಂದನವಾಗುತ್ತಿರುವುದು, ಆರ್ತವ ಸ್ರಾವವಿರುವುದಿಲ್ಲ.

**ಸಾಧ್ಯಾಸಾಧ್ಯ**—ಅಗಲವಾಗಿ ರೂಢಮೂಲವಾದ, ಮೇಲೆ ಸಿರೆಗಳು ಉಬ್ಬಿರುವ, ಆಮೆಯಂತಿರುವ ಗುಲ್ಮವು ಅಸಾಧ್ಯ. ದೌರ್ಬಲ್ಯಾದಿ ಉಪದ್ರವ ಗಳಿಲ್ಲದ ಏಕದೋಷಜ ಗುಲ್ಮವು ಹೊಸದಾಗಿದ್ದರೆ ಸಾಧ್ಯ. ಒಂಬತ್ತು ತಿಂಗಳು ಕಳೆದನಂತರ ರಕ್ತಗುಲ್ಮವು ಶಸ್ತ್ರಸಾಧ್ಯ.

# ಗುಲ್ಮಚಿಕಿತ್ಸಾ

ವಾತಗುಲ್ಮದಲ್ಲಿ ರೂಕ್ಷತೆಯಿಂದ ಮಲವಾತಗಳು ತಡೆಯಲ್ಪಟ್ಟಿದ್ದು ತೀವ್ರ ವೇದನೆಯಿದ್ದರೆ ವಾತಹರ ತೈಲಗಳನ್ನು ಪಾನ, ಅನುವಾಸನ ಮತ್ತು ಅಭ್ಯಂಗಗಳಲ್ಲಿ ಉಪಯೋಗಿಸಬೇಕು ಚೆನ್ನಾಗಿ ಸ್ನಿಗ್ಧನಾದವನಿಗೆ ಸ್ವೇದನ ವನ್ನು ಮಾಡಿಸಬೇಕು. ಇದರಿಂದ ವಿಶೇಷವಾಗಿ ಆನಾಹ, ವೇದನ ಮತ್ತು ಮಲಬಂಧಗಳು ಹೋಗುವುವು; ಸ್ರೋತಸ್ಸುಗಳು ಮೃದುವಾಗಿ, ಹೆಚ್ಚಿರುವ ವಾತವು ಸಮಸ್ಥಿತಿಗೆ ಬರುವುದು. ಗುಲ್ಮವು ನಾಭಿಯ ಮೇಲ್ಭಾಗದಲ್ಲಿದ್ದರೆ ಸ್ನೇಹಪಾನವನ್ನೂ, ಪಕ್ವಾಶಯದಲ್ಲಿದ್ದರೆ ವಸ್ತಿಯನ್ನೂ, ಜಠರದಲ್ಲಿದ್ದರೆ ಸ್ನೇಹ ಪಾನವಸ್ತಿಗಳೆರಡನ್ನೂ ಮಾಡಿಸಬೇಕು. ಅಗ್ನಿ ದೀಪ್ತಿಯಾದನಂತರ ಸ್ನಿಗ್ಧೋಷ್ಣವಾದ ಮತ್ತು ಬೃಂಹಣವಾದ ಅನ್ನಪಾನಗಳನ್ನು ಕೊಟ್ಟು ಪುನಃ ಪುನಃ ಸ್ನೇಹಪಾನವನ್ನು ಮಾಡಿಸುತ್ತಿರಬೇಕು. ಪಿತ್ತಕಫಗಳನ್ನು ಕೆರಳಿಸದೆ ಕೇವಲ ವಾತಹರವಾಗಿ ನಿರೂಹ ಮತ್ತು ಅನುವಾಸನ ಬಸ್ತಿಗಳನ್ನು ಕೊಡ ಬೇಕು. ವಾತಗುಲ್ಮಿಗೆ ವಸ್ತಿಯು ಉತ್ತಮವಾದುದು. ಸ್ಥಾನಿಕವಾದ ವಾತ ವನ್ನು ಜಯಿಸಿ ಕೂಡಲೇ ಗುಲ್ಮವನ್ನು ಹೋಗಲಾಡಿಸುವುದು. ಹೀಗೆಯೇ ಉಪಯೋಗಿಸುತ್ತಿದ್ದರೆ ಪಿತ್ತ ಮತ್ತು ಕಫಗುಲ್ಮಗಳನ್ನೂ ನಾಶಪಡಿಸುವುದು. ತ್ರ್ಯೂಷಣಾದಿ[೧] ಘೃತವನ್ನಾಗಲೀ, ಷಟ್ಪಲ ಘೃತವನ್ನಾಗಲೀ, ದಾಧಿಕ[೨]ಘೃತ ವನ್ನಾಗಲೀ ಕುಡಿಸಬೇಕು ಇದರಿಂದ ಶೂಲ, ಆನಾಹ, ವಿಬಂಧ ಮುಂತಾ ದುವು ಶಮನವಾಗುವುವು. ಆದರೆ ಊರ್ಧ್ವವಾತವಿರುವ ಗುಲ್ಮಗಳಿಗೆ ನಿರೂಹ ವನ್ನು ಮಾಡಿಸಬಾರದು.

---

೧. ತ್ರ್ಯೂಷಣತ್ರಿಫಲಾಧಾನ್ಯ ಚವಿಕಾವೇಲ್ಲಚಿತ್ರಕೈಃ ।
ಕಲ್ಕೀಕೃತೈರ್ಘೃತಂ ಪಕ್ವಂ ಸಕ್ಷೀರಂ ವಾತಗುಲ್ಮನುತ್ ॥ ಅ.ಹೃ.ಚಿ. ೧೪

೨. ಬಿಡದಾಡಿಮಸಿಂಧೂತ್ಥ ಕೃತಭುಕ್ ವ್ಯೋಷಜೀರಕೈಃ ।
ಹಿಂಗುಸೌವರ್ಚಲಕ್ಷಾರ ರುಕ್‌ವೃಕ್ಷಾಮ್ಲಾಮ್ಲವೇತಸೈಃ ॥
ಬೀಜಪೂರರಸೋಪೇತಂ ಸರ್ಪಿರ್ದಧಿ ಚತುರ್ಗುಣಮ್ ।
ಸಾಧಿತಂದಾಧಿಕಂ ನಾಮ ಗುಲ್ಮಹೃತ್‌ಪ್ಲೀಹಶೂಲಜಿತ್ ॥ ಸು.ಉ. ೪೨.

**ಊರ್ಧ್ವವಾತಂ ಮನುಷ್ಯಂ ಚ ಗುಲ್ಮಿನಂ ನ ನಿರೂಹಯೇತ್ ।**
ಸು.ಉ. ೪೨.

ಗುಲ್ಮದಲ್ಲಿ ವಾತ ಕಡಿಮೆಯಾದರೂ ಕಫವು ಹೆಚ್ಚಿದರೆ ಅಗ್ನಿಮಾಂದ್ಯ, ಅರುಚಿ, ಹೃಲ್ಲಾಸ, ಮೈಭಾರ ಮತ್ತು ತೂಗಡಿಕೆಗಳು ತೋರಿಬರುವುವು. ಆಗ ವಮನ ಮಾಡಿಸಿ ಶ್ಲೇಷ್ಮವನ್ನು ಜಯಿಸಬೇಕು. ಕೋಷ್ಠವು ಸ್ನಿಗ್ಧವಾಗಿದ್ದು ಕಫಾಧಿಕವಾದ ವಾತಗುಲ್ಮದಲ್ಲಿ ಶೂಲ, ಆನಾಹ, ಮಲಬದ್ಧಗಳಿದ್ದರೆ ವಾತಕಫಹರವರ್ತಿ, ಗುಟಿಕಾ, ಚೂರ್ಣಗಳನ್ನು ಪಯೋಗಿಸಬೇಕು. (i) ಹಿಂಗ್ವಾದಿಚೂರ್ಣ ಅಥವಾ ಗುಟಿಯನ್ನಾಗಲೀ, ಅಷ್ಟಚೂರ್ಣವನ್ನಾಗಲೀ ಕೊಡಬಹುದು. (ii) ವಾತಗುಲ್ಮದಲ್ಲಿ ಪಿಪ್ಪಲ್ಯಾದಿಘೃತವು ಸದ್ಯಃ ಫಲವನ್ನು ಕೊಡುವುದು. ಯೋನಿಶೂಲ, ಶಿರಃಶೂಲ, ಅರ್ಶಸ್ಸು ಮತ್ತು ವಿಷಮಜ್ವರಗಳನ್ನು ಹೋಗಲಾಡಿಸುವುದು. ಈ ಘೃತದ ದ್ರವ್ಯಗಳಿಂದಲೇ ವರ್ತಿಗಳನ್ನು ಮಾಡಿ ಗುದಮಾರ್ಗದಲ್ಲಿರಿಸುವುದರಿಂದ ವಾತಾನುಲೋಮನವಾಗುವುದು. ಎಳಚಿಹಣ್ಣಿನ ಕ್ವಾಥ, ಬಿಸಿನೀರು, ತಿಳಿಮದ್ಯ, ಹುಳಿಗಂಜಿ, ಮಾದಳ ರಸಗಳ ಅನುಪಾನಗಳಿಂದ ಈ ದ್ರವ್ಯಗಳ ಚೂರ್ಣ, ಕಷಾಯಗಳನ್ನು ಪಯೋಗಿಸಬಹುದು. (iii) ಚಿತ್ರಮೂಲ, ಗ್ರಂಥಿಕತಗರ, ಏರಂಡಮೂಲ, ಶುಂಠೀ ಇವುಗಳ ಕ್ವಾಥವನ್ನು ಕುಡಿಸಬೇಕು. (iv) ಮಾದಳರಸ, ಹಿಂಗು, ದಾಡಿಮ ರಸ, ಬಿಡಲವಣ ಮತ್ತು ಸೈಂಧವಲವಣಗಳನ್ನು ಕೂಡಿಸಿ ತಿಳಿಮದ್ಯದ ಅನುಪಾನದೊಡನೆ ಕುಡಿಸುವುದರಿಂದ ವಾತಗುಲ್ಮಶೂಲೆಯು ನಾಶವಾಗುವುದು. (v) ಸೈಂಧಲವಣ, ಅಳಲೆಕಾಯಿ, ಹಿಪ್ಪಲಿ, ವೋಮ ಇವನ್ನು ಚೂರ್ಣಿಸಿ ಬಿಸಿನೀರಿನೊಡನೆ ಕುಡಿಸುವುದರಿಂದ ಕಫವಾತ ಉಪದ್ರವಗಳು ನಾಶ ಹೊಂದುವುವು (vi) ಹಿಂಗುತ್ರಿಗುಣತೈಲವು[೧] ಗುಲ್ಮ, ಉದರ ಮತ್ತು ವರ್ಧ್ಮಗಳ ಶೂಲೆಯನ್ನು ಹೋಗಲಾಡಿಸುವುದು.

ವಾತಗುಲ್ಮದಲ್ಲಿ ಪಿತ್ತವು ಹೆಚ್ಚಿ ಅದರಿಂದ ತಾಪವುಂಟಾದರೆ ಸ್ನಿಗ್ಧವಾದ ವಿರೇಚನೌಷಧಗಳನ್ನು ಕುಡಿಸಬೇಕು ಆದರೂ ತಾಪವು ಕಡಿಮೆಯಾಗದಿದ್ದರೆ

---

೧. ಹಿಂಗು ೧ ಭಾಗ, ಸೈಂಧವಲವಣ ೩ ಭಾಗ, ಏರಂಡತೈಲ ೯ ಭಾಗ ಮತ್ತು ಬೆಳ್ಳುಳ್ಳಿ ೨೭ ಭಾಗ ಹಾಕಿ ಸಿದ್ಧಪಡಿಸಬೇಕು. ಅ.ಹೃ.ಚಿ. ೧೪.

ರಕ್ತಮೋಕ್ಷಣ ಮಾಡಬೇಕು. ಲಶುನಕ್ಷೀರವನ್ನು[೧] ಕುಡಿಸುವುದರಿಂದ ಅದು ವಾತಗುಲ್ಮ, ಉದಾವರ್ತ, ಗೃಧ್ರಸೀ, ವಿಷಮಜ್ವರ, ಹೃದ್ರೋಗ, ವಿದ್ರಧಿ ಮತ್ತು ಶೋಷಗಳನ್ನು ನಾಶಪಡಿಸುವುದು. (i) ಪುಷ್ಕರಮೂಲ, ಏರಂಡಮೂಲ, ಯವೆ ಮತ್ತು ಧನ್ವಯಾಸಗಳ ಕ್ವಾಥವು ಕೋಷ್ಠದಲ್ಲಿ ಉರಿ, ನೋವುಗಳನ್ನು ಹೋಗಲಾಡಿಸುವುದು. (ii) ಕಳ್ಳಂಗಡಲೆ, ಏರಂಡಮೂಲ, ದರ್ಭೆ ಬೇರು, ದೇವದಾರು ಮತ್ತು ಶುಂಠಿ ಕ್ವಾಥವು ಕೋಷ್ಠ, ಪೃಷ್ಠ ಮತ್ತು ಅಂಸಶೂಲೆಗಳನ್ನು ಹೋಗಲಾಡಿಸುವುದು. (iii) ವಾತಗುಲ್ಮದಲ್ಲಿ ಉದಾವರ್ತವುಂಟಾದರೆ ಗೋಮೂತ್ರ ಶಿಲಾಜತುವನ್ನು ಲಘುಪಂಚಮೂಲ ಕ್ಷೀರಪಾಕದೊಡನೆ ಕುಡಿಸಬೇಕು. ವಾಟ್ಯ ಗಂಜಿಯನ್ನಾದರೂ ಕುಡಿಸಬೇಕು.

**ವಾತಗುಲ್ಮಿಗೆ ಪಥ್ಯಗಳು**—ಕೋಳಿ, ನವಿಲು, ತಿತ್ತಿರಿಗಳ ಮಾಂಸಗಳು, ಶಾಲ್ಯನ್ನ, ಮದ್ಯ, ತುಪ್ಪ, ಸ್ನಿಗ್ಧ, ಉಷ್ಣ ಮತ್ತು ದ್ರವವಾಗಿರುವ ಆಹಾರಗಳು, ಸುರಾಮಂಡ (ತಿಳಿಮದ್ಯ) ಮತ್ತು ಧನಿಯ ಕ್ವಾಥ ಇವೆಲ್ಲಾ ಪಥ್ಯವಾದುವು. ಅಗ್ನಿಮಾಂದ್ಯದಿಂದ ಗುಲ್ಮದ ವೃದ್ಧಿಯೂ, ಅಗ್ನಿದೀಪನದಿಂದ ಅದರ ಶಮನವೂ ಆಗುವುದರಿಂದ ಅತಿ ಭೋಜನ, ಅತಿ ಲಂಘನಗಳು ಹಿತವಲ್ಲ. ಎಲ್ಲಾ ಗುಲ್ಮಗಳಲ್ಲೂ ಸ್ನೇಹ ಸ್ವೇದನಗಳನ್ನು ಮಾಡಿ ಚಿಕಿತ್ಸಿಸಿದರೆ ಗುಣವಾಗುವುದು ; ರೂಕ್ಷವಾಗಿದ್ದರೆ ಗುಣವಿರುವುದಿಲ್ಲ

ಸ್ನಿಗ್ಧೋಷ್ಣಗಳಿಂದಾದ ಪಿತ್ತಗುಲ್ಮದಲ್ಲಿ ಸ್ರಂಸನೌಷಧಗಳನ್ನು ಕೊಡಬೇಕು. ದ್ರಾಕ್ಷೆ ಮತ್ತು ಅಳಲೆಕಾಯಿ ಕ್ವಾಥಕ್ಕೆ ಬೆಲ್ಲ ಸೇರಿಸಿ ಅಥವಾ ಕಪಿಲೆ ಹಿಟ್ಟಿಗೆ ಜೇನುತುಪ್ಪ ಸೇರಿಸಿ ಕೊಡುವುದರಿಂದ ಮಲಪ್ರವೃತ್ತಿಯುಂಟಾಗುವುದು. ರಕ್ತಪಿತ್ತದಲ್ಲಿ ಹಿತವಾದ ವಿರೇಕಗಳನ್ನೂ ಉಪಯೋಗಿಸಬಹುದು.

ರೂಕ್ಷೋಷ್ಣಗಳಿಂದುಂಟಾದ ಪಿತ್ತಗುಲ್ಮದಲ್ಲಿ ತಿಕ್ತಘೃತ ಮತ್ತು ವಾಸಾಘೃತಗಳು ಒಳ್ಳೆಯ ಶಮನೌಷಧಗಳು. ತೃಣಪಂಚಮೂಲ, ಜೀವನೀಯಗಣ, ನ್ಯಗ್ರೋಧಾದಿ ಗುಣಗಳ ಕ್ವಾಥಗಳು ಅಥವಾ ಕ್ಷೀರಪಾಕಗಳು ಹಿತವಾದುವು. ಅವಶ್ಯಬಿದ್ದರೆ (ಅತ್ಯಯಿಕದಲ್ಲಿ) ರೂಕ್ಷವಾಗಿದ್ದರೂ ವಿರೇಚನಮಾಡಿಸ

---

೧. ಶುದ್ಧಿಮಾಡಿ ಒಣಗಿಸಿದ ಬೆಳ್ಳುಳ್ಳಿ ೪ ಪಲ, ಹಾಲು ೪ ಪಲ, ನೀರು ೪ ಪಲ ಎಲ್ಲವನ್ನೂ ಸೇರಿಸಿ ಕ್ಷೀರಾವಶೇಷ ಕಾಯಿಸಬೇಕು. ಚ.ಚಿ.ಅ. ೫.

ಬಹುದು. ಇದಕ್ಕೆ ವಿರೇಕಘೃತ ಅಥವಾ ಕ್ಷೀರಗಳು ಒಳ್ಳೆಯವು. (i) ಆಮಲಕ ರಸ, ಕಬ್ಬಿನ ರಸಗಳ ಪ್ರತಿ ಆಢಕಕ್ಕೆ ಒಂದು ಪ್ರಸ್ಥ ಹಸುವಿನ ತುಪ್ಪವನ್ನೂ ಒಂದು ಕುಡುವ ಅಳಲೆಕಾಯಿ ಕಲ್ಕವನ್ನೂ ಹಾಕಿ ಸಿದ್ಧಪಡಿಸಿದ ಘೃತವು ಪಿತ್ತ ಗುಲ್ಮವನ್ನು ಹೋಗಲಾಡಿಸುವುದು. (ii) ತ್ರಾಯಮಾಣ ಎರಡು ಪಲ, ನೀರು ಎರಡು ಪ್ರಸ್ಥ ಹಾಕಿ ಅಷ್ಟಮಾಂಶ ಕ್ವಾಥಮಾಡಿ ಸಮಭಾಗ ಹಸುವಿನ ಹಾಲನ್ನು ಸೇರಿಸಿ ಕುಡಿಸಿದ ಮೇಲೆ ರೋಗಿಗೆ ತಡೆಯುವಷ್ಟು ಬಿಸಿ ಹಾಲನ್ನು ಕುಡಿಸುವುದರಿಂದ ಪಿತ್ತಗುಲ್ಮವು ಶಮನವಾಗುವುದು.

ಪಿತ್ತದೋಷವಾಗಲೀ, ಪಿತ್ತಗುಲ್ಮವಾಗಲೀ ಪಕ್ವಾಶಯದಲ್ಲಿದ್ದರೆ ತಿಕ್ತ ದ್ರವ್ಯಗಳಿಂದ ಕೂಡಿದ ಕ್ಷೀರವಸ್ತಿಗಳನ್ನು ಕೊಡಬೇಕು. ತಿಕ್ತವಾದ ಕ್ಷೀರ ಅಥವಾ ಘೃತಗಳಿಂದ ವಿರೇಚನ ಮಾಡಿಸಬಹುದು. ಉರಿ ಹೆಚ್ಚಾಗಿದ್ದರೆ ಶೀತ ಘೃತದಿಂದ ಅಭ್ಯಂಗಮಾಡಿಸಿ ತುಪ್ಪಸೇರಿದ ಶೀತಲ ಲೇಪಗಳನ್ನು ಹಾಕಬೇಕು. ತಾವರೆ ಎಲೆಗಳನ್ನು ಹೊದ್ದಿಸುವುದು, ತಣ್ಣೀರು ಪಾತ್ರೆಯನ್ನು ಚಲಿಸುತ್ತಾ ಸ್ಪರ್ಶನ ಮಾಡಿಸುವುದು ಇವುಗಳಿಂದ ಉರಿಯು ಶಮನಹೊಂದುವುದು. ತೃಷ್ಣಾ, ಜ್ವರ, ಮೈಯುರಿ, ಶೂಲ, ಸ್ವೇದ, ಅಗ್ನಿಮಾಂದ್ಯ ಮತ್ತು ಅರುಚಿಗಳಿದ್ದರೆ ರಕ್ತಮೋಕ್ಷಣವನ್ನು ಮಾಡಿಸಬೇಕು. ರಕ್ತಮೋಕ್ಷಣದಿಂದ ವಿದಗ್ಧವಾಗಲಿರುವ ರಕ್ತವೇ ಹೋಗುವುದರಿಂದ ಗುಲ್ಮವು ಪಾಕವಾಗದೆ ಕ್ಷೀಣವಾಗುವುದು. ಏಕೆಂದರೆ, ಅಮ್ಲಪಾಕವನ್ನು ಹೊಂದುತ್ತಲಿರುವ ರಕ್ತವೇ ಹೊರಟುಹೋಗುವುದರಿಂದ ಗುಲ್ಮವೂ ಹೋಗುವುದು. ಅನಂತರ ಆ ರೋಗಿಗೆ ಜಾಂಗಲ ಮಾಂಸರಸವನ್ನು ಕುಡಿಸಿ ಸಮಾಧಾನಮಾಡಿ ಘೃತವನ್ನು ಕ್ರಮಕ್ರಮವಾಗಿ ಕೊಡುತ್ತಾ ಉಳಿದ ದೋಷವನ್ನು ಶಮನಮಾಡಬೇಕು. ರಕ್ತಮೋಕ್ಷಣ ಮಾಡಿದರೂ ರಕ್ತಪಿತ್ತವು ಹೆಚ್ಚಿರುವುದರಿಂದ ಗುಲ್ಮವು ಕಡಿಮೆಯಾಗದೆ ಪಾಕ ವಾಗುತ್ತಿದ್ದರೆ ಆಗ ಪಿತ್ತವಿದ್ರಧಿಯ ಎಲ್ಲಾ ಚಿಕಿತ್ಸೆಯನ್ನೂ ನಡೆಸಬೇಕು.

**ಪಿತ್ತಗುಲ್ಮಿಗೆ ಪಥ್ಯಗಳು**—ಶಾಲ್ಯನ್ನ, ಜಾಂಗಲಮಾಂಸ, ಹಸು ಮತ್ತು ಆಡುಗಳ ಹಾಲು ತುಪ್ಪಗಳು, ಖರ್ಜೂರ, ಆಮಲಕ, ದ್ರಾಕ್ಷೆ, ದಾಳಿಂಬೆಗಳು ಆಹಾರಕ್ಕೆ ಯೋಗ್ಯವಾದುವು. ಕುಡಿಯುವುದಕ್ಕೆ ಬಲಾ ಪಂಚಮೂಲ ಪಾನೀಯವು ಹಿತವಾದುದು.

ಆಮದೋಷಯುಕ್ತವಾದ ಗುಲ್ಮಗಳಲ್ಲಿ ಮೊದಲು ಲಂಘನ ಮಾಡಿಸಿ ಅನಂತರ ಯವಾಗೂ, ಖಡ ಮತ್ತು ಯೂಷಗಳಿಂದ ಅಗ್ನಿದೀಪನ ಮಾಡಬೇಕು. ದೋಷಗಳ ಶಮನ ಪ್ರಕೋಪಗಳು ಅಗ್ನಿಯನ್ನು ಆಶ್ರಯಿಸಿರುವುದರಿಂದ ಸದಾ ಅಗ್ನಿಯನ್ನು ಸಮಸ್ಥಿತಿಯಲ್ಲಿಡಬೇಕು. ಗುಲ್ಮದ ಮೂಲಕಾರಣಗಳನ್ನು ತ್ಯಜಿಸಬೇಕು.

ಶ್ಲೇಷ್ಮಗುಲ್ಮಿಗೆ ಮೊದಲು ವಮನ ಮಾಡಿಸಬೇಕು. ವಮನಕ್ಕೆ ಅರ್ಹನಾಗಿಲ್ಲದಿದ್ದರೆ ಲಂಘನ ಮಾಡಿಸಬೇಕು. ಅಗ್ನಿಮಾಂದ್ಯ ಅಲ್ಪವಾಗಿ ನೋವು, ಮೈಭಾರ, ಜಡತ್ವ, ಉತ್ಕ್ಲೇಶ ಮತ್ತು ಅರುಚಿಯುಳ್ಳವನು ವಮನಾರ್ಹನು. ಶೈತ್ಯ, ಗುರು, ಸ್ನಿಗ್ಧತೆಗಳಿಂದುಂಟಾದ ಗುಲ್ಮದಲ್ಲಿ ರೋಗಿಗೆ ವಾಂತಿಮಾಡಿಸಬಾರದು ವಮನ ಮತ್ತು ಲಂಘನ ಮಾಡಿದವನಿಗೆ ತಿಕ್ತ, ಉಷ್ಣ ಮತ್ತು ಕಟು ಆಹಾರವನ್ನು ಕೊಟ್ಟು ಅಗ್ನಿಯನ್ನು ಹೆಚ್ಚಿಸಬೇಕು. ಹಿಂಗ್ವಾದಿ ಚೂರ್ಣವನ್ನಾಗಲೀ, ಹಿಂಗು, ಅಮ್ಲವೇತಸ(ಮುರ್ಗಿನಹುಳಿ)ಗಳಿಗೆ ಎರಡರಷ್ಟು ಯವಕ್ಷಾರವನ್ನು ಹಾಕಿರುವ ಚೂರ್ಣವನ್ನಾಗಲೀ ಕೊಡುವುದರಿಂದ ಅಗ್ನಿವೃದ್ಧಿಯಾಗುವುದು. ಅಭ್ಯಂತರ ಮೂಲ ಹೊಂದಿರುವ ಗುಲ್ಮವನ್ನಾಗಲೀ, ಮೇಲುಭಾಗದಲ್ಲಿ ಉಬ್ಬಿರುವ, ಸ್ಥಿಮಿತವಾಗಿರುವ, ಕಠಿಣವಾಗಿರುವ ಮತ್ತು ಆನಾಹವಿಬಂಧಗಳಿಂದ ಕೂಡಿರುವ ಗುಲ್ಮವನ್ನಾಗಲೀ ಯುಕ್ತಿಯಿಂದ ಸ್ವೇದನ ಮಾಡಿಸಿ ಅದರ ಸ್ಥಾನವನ್ನು ಬಿಡಿಸಬೇಕು. ಅನಂತರ ದಶಮೂಲಘೃತವನ್ನು[೧] ಕುಡಿಸುವುದರಿಂದ ಕಫಗುಲ್ಮವು ನಾಶಹೊಂದುವುದು. ಷಟ್ಪಲಘೃತ ಅಥವಾ ಭಲ್ಲಾತಕ ಘೃತವನ್ನಾದರೂ ಕುಡಿಸಬಹುದು. ಅನಂತರ ಸ್ವೇದಮಾಡಿಸಿ ಗುಲ್ಮವು ಸ್ಥಳ ಬಿಟ್ಟಿರುವುದನ್ನು ತಿಳಿದು ಅವನಿಗೆ ವಿರೇಚನಗಳಿಂದಲೂ, ಸ್ನೇಹಯುಕ್ತವಾದ ದಶಮೂಲವಸ್ತಿಗಳಿಂದಲೂ ಶೋಧನೆ ಮಾಡಬೇಕು. ಮಿಶ್ರಕ ಸ್ನೇಹವು ಚೆನ್ನಾಗಿ ವಿರೇಚನಮಾಡಿಸುವುದು. ಸ್ನೇಹ, ಸ್ವೇದ ಮತ್ತು ಶೋಧನಗಳಿಂದಲೇ ಕಫಗುಲ್ಮವು ನಾಶಹೊಂದಬೇಕಲ್ಲದೆ ರೂಕ್ಷತೆಯಿಂದಾಗುವುದಿಲ್ಲ.

ಸ್ನೇಹಸ್ವೇದಗಳಿಂದ ಸಡಿಲವಾದ ಗುಲ್ಮವನ್ನು ಘಟೀಯಂತ್ರದಿಂದ

---

೧. ಸವ್ಯೋಷಕ್ಷಾರ ಲವಣಂ ಸಹಿಂಗುಬಿಡದಾಡಿಮಮ್ ।
ಕಫಗುಲ್ಮಂ ಜಯತ್ಯಾಶು ದಶಮೂಲಶೃತಂ ಘೃತಮ್ ॥ ಚ.ಚಿ.ಅ. ೫

ಒಟ್ಟುಗೂಡಿಸಿ ಬಟ್ಟೆಯಿಂದ ಹಿಡಿದು ಪ್ರಮಾಣವರಿತು ಶಸ್ತ್ರದಿಂದ ಭೇದನ ಮಾಡಬೇಕು. ಆಮೇಲೆ ವಿಮಾರ್ಗ, ಅಜಪದ, ಆದರ್ಶಗಳೆಂಬ ಯಾವುದಾದ ರೊಂದು ಶಸ್ತ್ರದಿಂದ ಅಂತ್ರ ಮತ್ತು ಹೃದಯಗಳನ್ನು ಮುಟ್ಟಿಸದಂತೆ ಎಚ್ಚರಿಕೆ ಯಿಂದ ಗುಲ್ಮವನ್ನು ಮಾತ್ರ ಪೀಡನಮಾಡಬೇಕು. ಉಳಿದ ದೋಷವನ್ನು ಹೋಗ ಲಾಡಿಸುವುದಕ್ಕೆ ಗುಲ್ಮದ ಮೇಲೆ ತಿಲ, ಏರಂಡು, ಅತಸಿ (ಅಗಸೇಬೀಜ) ಮತ್ತು ಸರ್ಷಪಗಳನ್ನು ಅರೆದು ಲೇಪಹಾಕಿ ಸುಖೋಷ್ಣವಾದ ಬಿಸಿನೀರಿನ ಶಾಖವನ್ನು ಕೊಡಬೇಕು. ಪುನಃ ವಿರೇಚನವನ್ನು ಮಾಡಿಸುವುದರಿಂದ ಗುಲ್ಮವು ಪೂರ್ತಿ ಯಾಗಿ ನಾಶವಾಗುವುದು. ಮೂಲವು ಆಳವಾಗಿಯೂ ಬಹುವಾಗಿಯೂ ಹರಡಿರುವ, ಕಠಿಣವಾಗಿಯೂ ದೊಡ್ಡದಾಗಿಯೂ ಮತ್ತು ಮಾಂಸದಿಂದ ಕೂಡಿರುವ ಗುಲ್ಮವನ್ನು ಕ್ಷಾರ, ಅರಿಷ್ಟ ಮತ್ತು ಅಗ್ನಿಕರ್ಮಗಳಿಂದ ಚಿಕಿತ್ಸಿಸ ಬೇಕು.

> **ಶ್ಲೇಷ್ಮಾಣಂ ಮಧುರಂ ಸ್ನಿಗ್ಧಂ ಮಾಂಸಕ್ಷೀರಘೃತಾಶಿನಃ।**
> **ಛಿತ್ವಾಛಿತ್ವಾಽಶಯಾತ್ ಕ್ಷಾರಃ ಕ್ಷರತ್ವಾತ್ ಕ್ಷಾರಯತ್ಯಧಃ॥**
> ಚ.ಚಿ ಅ. ೫.

ಮಾಂಸ, ಕ್ಷೀರ ಮತ್ತು ಘೃತಗಳನ್ನು ಸೇವಿಸುವವನಿಗೆ ಕ್ಷಾರವು ತನ್ನ ಕಿತ್ತುಹಾಕುವಿಕೆ ಸ್ವಭಾವದಿಂದ ಮಧುರಸ್ನಿಗ್ಧ (ಕ್ಷಾರಕ್ಕೆ ವಿಪರೀತ) ಗುಣ ಗಳುಳ್ಳ ಶ್ಲೇಷ್ಮವನ್ನು ಕರಗಿಸಿ ಬಿಡುತ್ತದೆ. ಆದುದರಿಂದ ಕಫಗುಲ್ಮಿಗೆ ಕ್ಷಾರವು ಉಪಯುಕ್ತವಾದುದು. ಅರ್ಶ, ಅಶ್ಮರೀ, ಗ್ರಹಣೀಗಳಲ್ಲಿ ಹೇಳಿರುವ ಕ್ಷಾರ ಗಳನ್ನು ಕುಡಿಸಬೇಕು. ಅಗದಕ್ಷಾರವನ್ನು ಪಯೋಗಿಸಬಹುದು.[೧] ಆದರೂ

---

೧. ಅಗದಕ್ಷಾರ—ದೇವದಾರು, ತಿಗಡೆ, ದಂತೀಮೂಲ, ಕಟುಕರೋಹಿಣಿ, ಪಂಚ ಕೋಲಗಳು, ಸರ್ಜಕ್ಷಾರ, ಯವಕ್ಷಾರ, ಪುಷ್ಕರಮೂಲ, ಅಗಳುಶುಂಠಿ, ಸಣ್ಣಜೀರಿಗೆ, ಚಂಗಲ್ಕೋಷ್ಠ, ಸರ್ಪಗಂಧ ಇವು ಪ್ರತಿಯೊಂದೂ ಅರ್ಧ ಪಲ, ಪಂಚಲವಣಗಳು ಪ್ರತ್ಯೇಕ ಒಂದು ಪಲ ಇವೆಲ್ಲವನ್ನೂ ಚೂರ್ಣಿಸಿ, ತೈಲ, ವಸಾ, ಮೊಸರು ಮತ್ತು ತುಪ್ಪಗಳಲ್ಲಿ ನೆನೆಸಿ ಒಂದು ಮಣ್ಣಿನ ಗಡಿಗೆಯಲ್ಲಿ ಹಾಕಿ ಚೀರುಮಾಡಿ ಗಡಿಗೆಯು ಕೆಂಪಗಾಗುವಂತೆ ಪುಟಹಾಕಿ (ತೀವ್ರ ಬೆಂಕಿಯ ಮೇಲೆ ಕಾಯಿಸಿ) ಕ್ಷಾರವನ್ನು ತೆಗೆಯಬೇಕು. ಇದನ್ನು ಹಾಲು, ತುಪ್ಪ, ಮಜ್ಜಿಗೆ, ಮದ್ಯ ಮುಂತಾದ ಅನುಪಾನ ಗಳೊಂದಿಗೆ ಕುಡಿಸುವುದರಿಂದ ಗುಲ್ಮ, ಉದಾವರ್ತ, ವರ್ಧ್ಮ, ಅರ್ಶ, ಉದರ, ಕೃಮಿ, ಗ್ರಹಣೀ ಮುಂತಾದ ವ್ಯಾಧಿಗಳನ್ನೂ ಇಲಿ ಮುಂತಾದುವುಗಳ ವಿಷಗಳನ್ನೂ ಹೋಗಲಾಡಿಸುವುದು. ಅ.ಹೃ.ಚಿ. ೧೪.

ಗುಲ್ಮವು ಶಾಂತವಾಗದಿದ್ದರೆ ರಕ್ತಮೋಕ್ಷಣವನ್ನು ಮಾಡಿ ಅಗ್ನಿಕರ್ಮವನ್ನು ನಡೆಸಬೇಕು. ಅಗ್ನಿಯು ಉಷ್ಣ ಮತ್ತು ತೀಕ್ಷ್ಣ ಗುಣಗಳನ್ನು ಪಡೆದಿರುವುದರಿಂದ ವಾತಕಫಗಳನ್ನು ಹೋಗಲಾಡಿಸುವುದು. ಅದರಿಂದ ಗುಲ್ಮವು ಹೋಗುವುದು. ಶಸ್ತ್ರ, ಅಗ್ನಿ ಮತ್ತು ಕ್ಷಾರಕರ್ಮಗಳು ನಿಪುಣರಾದ ಶಸ್ತ್ರವೈದ್ಯರಿಂದ ನಡೆಸಲ್ಪಡಬೇಕು.

ಗುಲ್ಮಿಗೆ ಅಗ್ನಿಮಾಂದ್ಯ ಮತ್ತು ಅರುಚಿಗಳಿದ್ದರೆ ಅಭ್ಯಾಸಕ್ಕೆ ತಕ್ಕ ಸ್ನಿಗ್ಧವಾದ ಆಹಾರ ಮತ್ತು ಅಗ್ನಿದೀಪಕಗಳಾದ ಹಳೆಯ ಮದ್ಯ, ಆಸವಾರಿಷ್ಟಗಳನ್ನು ಕೊಡಬೇಕು.

**ಕಫಗುಲ್ಮಿಗೆ ಪಥ್ಯಗಳು**—ಹಳೆಯ ಶಾಲಿ, ಷಷ್ಟಿಕಗಳು, ಜಾಂಗಲ ಮಾಂಸ, ಹಿಪ್ಪಲಿ, ಶುಂಠಿಗಳನ್ನು ಹಾಕಿರುವ ಹುರಳಿ, ಹೆಸರುಕಟ್ಟುಗಳು, ಒಣಮೂಲಂಗಿಸಾರು, ತಪಸಿ, ನುಗ್ಗೆಸೊಪ್ಪುಗಳಿಗೆ ಅಜಮೋದ, ಚಿತ್ರಮೂಲಗಳನ್ನು ಹಾಕಿ ಮಾಡಿದ ಸಾರು, ಮಾದಳ, ಹಿಂಗು, ಮುಗ್ಗಿನಹುಳಿ, ಯವಕ್ಷಾರ, ದಾಳಿಂಬೆ, ಮಜ್ಜಿಗೆಗಳು, ಎಣ್ಣೆತುಪ್ಪಗಳನ್ನು ಹಾಕಿ ಮಾಡಿರುವ ಪಲ್ಯ ಮುಂತಾದುವು ಹಿತವಾದುವು. ಲಘುಪಂಚಮೂಲ ಕಷಾಯ, ಹಳೇಮದ್ಯ, ಮಧೂಕಾಸವಗಳು ಪಾನಕ್ಕೆ ಯೋಗ್ಯವಾದವು. ಖುರಾಸಾನಿವೋಮ ಮತ್ತು ಬಿಡಲವಣಗಳನ್ನು ಚೂರ್ಣಿಸಿ ಮಜ್ಜಿಗೆಗೆ ಹಾಕಿ ಕುಡಿಸಿದರೆ ಅಗ್ನಿದೀಪನ, ವಾತ, ಕಫ ಮತ್ತು ಮೂತ್ರಗಳ ಅನುಲೋಮನ ಇವುಗಳಾಗುವುವು.

ರಕ್ತಗುಲ್ಮವನ್ನು ಒಂಬತ್ತು ತಿಂಗಳವರೆಗೂ ಚೆನ್ನಾಗಿ ಬಲಿಯುವುದಕ್ಕೆ ಬಿಟ್ಟು ಹತ್ತನೆಯ ತಿಂಗಳಲ್ಲಿ ಸ್ತ್ರೀಗೆ ಸ್ನೇಹಸ್ವೇದಗಳನ್ನು ಮಾಡಿಸಿ ಸ್ನಿಗ್ಧವಾಗಿರುವ ವಿರೇಕವನ್ನು ಕೊಡಬೇಕು. ಎಳ್ಳಿನ ಕಷಾಯಕ್ಕೆ ತುಪ್ಪ, ಎಳ್ಳು, ತ್ರಿಕಟು ಮತ್ತು ಭಾರಂಗಿಗಳ ಚೂರ್ಣವನ್ನು ಸೇರಿಸಿ ಕುಡಿಸುವುದರಿಂದ ರಕ್ತಗುಲ್ಮ ಮತ್ತು ನಷ್ಟಾರ್ತವಗಳು ಗುಣವಾಗುವುವು. ಪಲಾಶಕ್ಷಾರದಿಂದ ಮಾಡಿರುವ ಘೃತವನ್ನು[೧] ಕುಡಿಸಬೇಕು. ಇದರಿಂದ ರಕ್ತಗುಲ್ಮವು ಒಡೆಯು

೧. ಪಲಾಶಕ್ಷಾರಪಾತ್ರೇ ದ್ವೇ ದ್ವೇ ಪಾತ್ರೇ ತೈಲಸರ್ಪಿಷೋಃ ।
ಗುಲ್ಮಶೈಥಿಲ್ಯಜನನೀಂ ಪಕ್ತ್ವಾ ಮಾತ್ರಾಂ ಪ್ರಯೋಜಯೇತ್ ॥ ಚ.ಚಿ.ಅ. ೫.

ದಿದ್ದರೆ ಯೋನಿವಿರೇಚನವನ್ನು ಕೊಡಬೇಕು. ಇದಕ್ಕಾಗಿ ಕ್ಷಾರ ಭಾವನೆ ಮಾಡಿರುವ ಎಳ್ಳಿನ ಕಲ್ಕವನ್ನು ಯೋನಿಯಲ್ಲಿರಿಸಬೇಕು. ಅಥವಾ ಕ್ಷಾರದಲ್ಲಿ ಭಾವನೆಮಾಡಿರುವ ಕಟುಮತ್ಸ್ಯವನ್ನು (ಚಿಲಿಚಿಮುವೆಂಬ ಒಣಗಿರುವ ಸಣ್ಣ ಮೀನು) ಇರಿಸಬಹುದು. ಕಿಣ್ವ (ಮದ್ಯದ ಮಡ್ಡಿ), ಬೆಲ್ಲ ಮತ್ತು ಯವಕ್ಷಾರ ಗಳನ್ನಾದರೂ ಸೇರಿಸಿ ಯೋನಿಯಲ್ಲಿರಿಸುವುದರಿಂದ ಅದರ ಮಾರ್ಗವು ಶುದ್ಧ ವಾಗುವುದು. ರಕ್ತಪಿತ್ತಹರಕ್ಷಾರ (ಉತ್ಪಲಕ್ಷಾರ)ವನ್ನು ತುಪ್ಪ ಮತ್ತು ಜೇನು ತುಪ್ಪಗಳೊಂದಿಗೆ ಕಲಸಿ ನೆಕ್ಕಿಸಬೇಕು. ಇದರಿಂದ ರಕ್ತದ ಪೈಚ್ಛಿಲ್ಯವು ಹೋಗುವುದು. ಬೆಳ್ಳುಳ್ಳಿ, ತೀಕ್ಷ್ಣಮದ್ಯ ಮತ್ತು ಮೀನುಗಳನ್ನು ತಿನ್ನಿಸ ಬೇಕು. ರಕ್ತಸ್ರಾವವಾಗುವವರೆಗೆ ಗುಲ್ಮವನ್ನು ಭೇದಿಸುವಂತೆ ಗೋಕ್ಷೀರ, ಗೋಮೂತ್ರ, ಯವಕ್ಷಾರಗಳನ್ನು ಹಾಕಿರುವ ದಶಮೂಲ ಕ್ವಾಥದ ಉತ್ತರ ವಸ್ತಿಯನ್ನು ಕೊಡಬೇಕು. ಸ್ರಾವವಾದರೆ ಮಾಂಸರಸವನ್ನೂ ಅನ್ನವನ್ನೂ ಕೊಡಬೇಕು. ಹೊಸ ಮದ್ಯವನ್ನು ಕುಡಿಸಬೇಕು. ಘೃತ ಅಥವಾ ತೈಲಾ ಭ್ಯಂಗವನ್ನು ಮಾಡಿಸಬೇಕು. ಸ್ರಾವವು ಹೆಚ್ಚಾದರೆ ರಕ್ತಪಿತ್ತಹರ ಚಿಕಿತ್ಸೆ ಯನ್ನು ನಡೆಸಬೇಕು. ಊಟಕ್ಕೆ ಮುಂಚಿತವಾಗಿ ಕೆನೆ ಮೊಸರನ್ನು ಕುಡಿಸಿ ತಿತ್ತಿರಿ ಮತ್ತು ಕೋಳಿಮಾಂಸಗಳನ್ನು ತಿನ್ನಿಸಬೇಕು. ವಾತರೋಗವಿದ್ದರೆ ವಾತವ್ಯಾಧಿ ಚಿಕಿತ್ಸೆಯನ್ನು ಮಾಡಬೇಕು.

## ಸಂಗ್ರಹ

**ವಾತಿಕೇ**—ಸ್ನೇಹಸ್ವೇದಃ। ನಾಭೇರೂರ್ಧ್ವಜೇಸ್ನೇಹಪಾನಂ ಪಕ್ವಾಶಯು ಜೇವಸ್ತಿಃ, ಉಭಯಮುದರೋತ್ಥೇ। ದೀಪ್ತೇಗ್ನೌ ಬೃಂಹಣಾ ನ್ಯನ್ನಪಾನಾನಿ। ಕಫವೃದ್ಧೌ ಹೃಲ್ಲಾಸಾದಿಷು ವಮನಂ। ಸ್ನಿಗ್ಧಸ್ಯ ಶೂಲಾನಾಹವಿಬಂಧೇಷ್ವಷ್ಟಕಚೂರ್ಣಂ।

**ಪಿತ್ತಗುಲ್ಮೇ**—ಸ್ನಿಗ್ಧೋಷ್ಣೋದಿತೇ ಸ್ರಂಸನಮಸ್ರಪಿತ್ತಕ್ರಮಶ್ಚ। ರೂಕ್ಷೋ ಷ್ಣೋದಿತೇ ತಿಕ್ತಘೃತಂ, ಜೀವನೀಯಘೃತಂ ಕ್ಷೀರಂ ವಾ। ದಾಹೇ ಶೀತಂ, ಶೀತಘೃತಾಭ್ಯಂಗಃ। ವಿದಾಹಪೂರ್ವರೂಪೇ ರಕ್ತಮೋಕ್ಷಣಂ। ಪಾಕೋನ್ಮುಖೇ ಪಿತ್ತವಿದ್ರಧಿಕ್ರಮಃ।

**ಶ್ಲೇಷ್ಮಜೇ**—ವಮನಮುಪೋಷ್ಯಂ, ತೀಕ್ಷ್ಣೋಷ್ಣೈರಗ್ನಿಸಂಧುಕ್ಷಣಂ ಚ | ಸಾನಾಹೇ ಸವಿಬಂಧೇ ಕಠಿನೇಚ ಸ್ವೇದನವತ್ | ಪಾನೇ ದಶಮೂಲಘೃತಂಷಟ್ಪಲಂವಾ | ವಿಸೃತೇರೇಚನಂ–ಮಿಶ್ರಕಸ್ನೇಹಃ| ದಶಮೂಲವಸ್ತಿಃ | ರೂಢಮಾಂಸೇ ಕಠಿಣೇ ಕ್ಷಾರಾಗ್ನಿಕರ್ಮ | ಅಶಾಂತೌಸ್ರುತರಕ್ತೇ ಶರಾದಿ | ಭಿದಾರ್ಹಃ |

**ಸನ್ನಿಪಾತೇ**—ಮಿಶ್ರಕ್ರಮಃ |

**ರಕ್ತಗುಲ್ಮೇ**—ಸ್ನೇಹಸ್ವೇದಃ, ಸ್ನೇಹವಿರೇಚನಂ | ಘೃತಗುಡವ್ಯೋಷಭಾರ್ಙ್ಗೀಚೂರ್ಣಸ್ಸತಿಲಕ್ವಾಥಃ | ಪಲಾಶಘೃತಂ | ಯೋನೌ ಸಕ್ಷಾರಮಾಂಸಸ್ಥಾಪನಂ | ರಕ್ತಪಿತ್ತಹರಕ್ಷಾರಲೇಹಾಃ | ದಶಮೂಲ ಕ್ಷೀರಮೂತ್ರವಸ್ತಿಃ |

---

# ಶೂಲಚಿಕಿತ್ಸಾ

ಆಹಾರ ತೆಗೆದುಕೊಳ್ಳುವುದಕ್ಕೆ ಮೊದಲು ತೀವ್ರವಾದ ನೋವುಂಟಾಗುವುದು, ಮೈಯೆಲ್ಲಾ ಆಡಿಸಲಿಕ್ಕಾಗದಂತೆ ಬಿಗಿದಿರುವುದು, ಬಹುಕಷ್ಟದಿಂದ ಉಸಿರನ್ನಾಡಿಸುವುದು ಮತ್ತು ವಾತ ಮೂತ್ರ ಪುರಿಷಗಳು ಪ್ರಯಾಸದಿಂದ ಅಥವಾ ಅಲ್ಪವಾಗಿ ಸರಿಯುವುದು—ಇವೆಲ್ಲವೂ ವಾತಶೂಲೆಯ ಲಕ್ಷಣಗಳು. ಈ ಶೂಲೆಯು ಅಪಾಯಕಾರಿಯಾದುದು. ಇದಕ್ಕೆ ಕೂಡಲೇ ಸ್ನಿಗ್ಧವಾಗಿರುವ ಮಾಂಸ, ಎಳ್ಳುಹಿಂಡಿ ಮುಂತಾದುವುಗಳಿಂದ ಪಿಂಡಸ್ವೇದನವನ್ನು ಮಾಡಿಸಬೇಕು. ಸ್ನಿಗ್ಧೋಷ್ಣವಾದ ಆಹಾರಗಳನ್ನೂ ಮಲಸ್ರಂಸನಮಾಡಿಸುವಂತೆ ಎಣ್ಣೆಯಲ್ಲಿ ಹುರಿದಿರುವ ತ್ರಿವೃತ್ ಎಲೆ, ತಪಸಿ ಎಲೆಗಳನ್ನು ತಿನ್ನಿಸಬೇಕು. ಜಾಂಗಲದೇಶದ ಪಕ್ಷಿ ಮತ್ತು ಪ್ರಾಣಿಗಳ ಮಾಂಸಗಳಿಗೆ ತುಪ್ಪವನ್ನು ಸೇರಿಸಿ ಕೊಡಬೇಕು. ಮದ್ಯ, ಹುಳಿಗಂಜಿ, ಶುಕ್ತ,ಮೊಸರಿನ ತಿಳಿಭಾಗದ್ರವ, ಉದಶ್ವಿತ್

(ಮೊಸರಿಗೆ ಸಮಭಾಗ ನೀರು ಸೇರಿರುವ ಮಜ್ಜಿಗೆ), ಮೊಸರು ಇವುಗಳಿಗೆ ಸ್ವಲ್ಪ ಸೌವರ್ಚಲಲವಣವನ್ನು ಹಾಕಿ ಕುಡಿಸಬೇಕು ಸ್ವಲ್ಪ ಹುಳಿ ಹಾಕಿರುವ ಹುರಳಿ ಕಟ್ಟಿಸಾರು, ಲಾವಪಕ್ಷಿಯ ಮಾಂಸ ಸೇರಿರುವ ಸಾರು ಇವುಗಳಿಗೆ ಸ್ವಲ್ಪ ಸೈಂಧವ ಮತ್ತು ಮರಿಚಗಳನ್ನು ಹಾಕಿ ಸೇವಿಸಲು ಕೊಡುವುದರಿಂದ ವಾತ ಶೂಲ ನಿವಾರಣೆಯಾಗುವುದು.

ಜೀರಿಗೆ, ಚವ್ಯ, ವಾದಕ್ಕಿ, ತ್ರಿಕಟು, ಚಿತ್ರಮೂಲ, ಹಿಪ್ಪಲಿ, ಮೋಡಿ ಮತ್ತು ಸೈಂಧವಲವಣ ಇವನ್ನು ಸಮಭಾಗ ತೆಗೆದುಕೊಂಡು ಚೂರ್ಣಿಸಿ ಬಿಸಿ ನೀರು, ಹುಳಿಮಜ್ಜಿಗೆ, ಶುಕ್ತ, ಮದ್ಯ ಇವುಗಳ ಅನುಪಾನಗಳಿಂದ ಉಪಯೋಗಿಸಬೇಕು. ಇದೇ ಚೂರ್ಣವನ್ನು ಮಾದಳರಸ ಅಥವಾ ಬದರೀ ಹಣ್ಣಿನ ರಸದಲ್ಲಿ ಪುನಃ ಪುನಃ ಭಾವನೆಮಾಡಿ ಮಾತುಲುಂಗರಸ, ಹಿಂಗು ಮತ್ತು ಸಕ್ಕರೆಗಳನ್ನು ಸೇರಿಸಿದ ಅನುಪಾನದಲ್ಲಿ ಕೊಡುವುದರಿಂದ ಶೂಲನಿವಾರಣೆಯಾಗುವುದು. ಮೇಲೆ ಹೇಳಿದ ಚೂರ್ಣವನ್ನು ದಾಳಿಂಬೆರಸದ ಭಾವನೆಯಿಂದ ವರ್ತಿ ಮಾಡಿ ಗುದಮಾರ್ಗದಲ್ಲಿರಿಸುವುದರಿಂದ ವಾತಶೂಲೆಯು ಕೂಡಲೇ ವಾಸಿಯಾಗುವುದು. ಬೆಲ್ಲ ಮತ್ತು ಎಣ್ಣೆಯೊಂದಿಗೆ ಚೂರ್ಣವನ್ನು ನೆಕ್ಕಿಸುವುದರಿಂದ ಅಥವಾ ಮದ್ಯದೊಡನೆ ಕುಡಿಸುವುದರಿಂದ ನೋವು ನಿಲ್ಲುವುದು.

ಹಸಿದಿರುವಾಗ ಬಹಳವಾದ ನೋವುಂಟಾದರೆ ಲಘುವಾಗಿ ಜೀರ್ಣವಾಗುವ ಬಿಸಿಯಾದ ಹಾಲು, ಗಂಜಿ ಅಥವಾ ಸ್ನಿಗ್ಧವಾಗಿ ಮಾಂಸರಸಗಳಿಂದ ಮಾಡಿದ ತರ್ಪಣೌಷಧಗಳನ್ನು ಪಯೋಗಿಸಬೇಕು.

ರೂಕ್ಷನಿಗೆ ಉಂಟಾಗಿರುವ ಶೂಲೆಯನ್ನು ಹೋಗಲಾಡಿಸಲು ವಿಶೇಷವಾಗಿ ತುಪ್ಪದಿಂದ ಕೂಡಿರುವ ಭೋಜನವನ್ನೂ ತಿಳಿಮದ್ಯವನ್ನೂ ಕೊಡಬೇಕು. ವಾತಹರಘೃತಗಳು ಉಪಯೋಗವಾಗುವುವು.

ಪಿತ್ತದೋಷದಿಂದ ಸಂಭವಿಸಿದ ಶೂಲೆಯಲ್ಲಿ ತೃಷ್ಣಾ, ದಾಹ, ಮದ, ಮೂರ್ಛಾ ಮತ್ತು ತೀವ್ರಶೂಲೆಗಳಿರುವುವು. ರೋಗಿಯು ಶೀತಲಪದಾರ್ಥಗಳನ್ನು ಅಪೇಕ್ಷಿಸುತ್ತಾನೆ. ಶೈತ್ಯೋಪಚಾರದಿಂದ ಶೂಲೆಯು ಶಮನವಾಗುವುದು. ಪಿತ್ತಶೂಲಿಗೆ ಸುಖವಾದ ವಮನವನ್ನು ಮಾಡಿಸಿ ತಣ್ಣೀರನ್ನು ಕುಡಿಸಬೇಕು. ಶೈತ್ಯೋಪಚಾರವನ್ನೇ ನಡೆಸುತ್ತ ಬರಬೇಕು. ಎಲ್ಲಾ ಉಷ್ಣ ಮತ್ತು ಪಿತ್ತಲ ಪದಾರ್ಥಗಳನ್ನು ತ್ಯಜಿಸಬೇಕು. ನೋವಿರುವ ಸ್ಥಳದ ಮೇಲೆ

ಬೆಳ್ಳಿ ಅಥವಾ ತಾಮ್ರ ಪಾತ್ರೆಯಲ್ಲಿ ತಣ್ಣೀರನ್ನು ತುಂಬಿ ಒತ್ತುತ್ತಿರಬೇಕು. ರೋಗಿಗೆ ಶಾಲಿಯವೆಗಳನ್ನು ತಿನ್ನಿಸಿ ಹಾಲನ್ನು ಕುಡಿಸಬೇಕು. ಅನಂತರ ವಿರೇಚನಕ್ಕೆ ಕೊಡಬೇಕು. ಜಾಂಗಲಮಾಂಸ ಮತ್ತು ಪಿತ್ತಹರ ಔಷಧಗಳನ್ನು ಕೊಡಬೇಕು. ಮಾಂಸ ಯೂಷಾದಿಗಳಿಗೆ ಸ್ವಲ್ಪ ಸಕ್ಕರೆಯನ್ನು ಹಾಕಿ ಕುಡಿಸಬೇಕು. ಉತ್ತುತ್ತಿ, ದ್ವೀಪದ್ರಾಕ್ಷೆ, ಹಣ್ಣುಖರ್ಜೂರಗಳ ಪಾನಕಗಳನ್ನು ಕೊಡಬೇಕು.

ಶ್ಲೇಷ್ಮಶೂಲಿಗೆ ಊಟಮಾಡಿದ ಕೂಡಲೇ ಹೊಟ್ಟೆನೋವು ಹೆಚ್ಚುವುದು. ಹೃಲ್ಲಾಸ, ಹೊಟ್ಟೆ ಬಹಳ ತುಂಬಿದಂತಿರುವುದು ಮತ್ತು ಮೈಭಾರಗಳಿರುವುವು. ಇಂತಹವನಿಗೆ ಮದನಫಲದಿಂದ ವಾಂತಿಮಾಡಿಸಬೇಕು. ರೂಕ್ಷಸ್ವೇದ ಮತ್ತು ಎಲ್ಲಾ ಉಷ್ಣಕ್ರಿಯೆಗಳೂ ಹಿತವಾದುವು ಹಿಪ್ಪಲಿ, ಶುಂಠಿ ಇವುಗಳ ಕಲ್ಕ, ಕ್ವಾಥಗಳನ್ನು ಉಪಯೋಗಿಸಬೇಕು (i) ಆಗಳುಶುಂಠಿ, ಬಜೆ, ತ್ರಿಕಟು, ಕಟುಕರೋಹಿಣಿ ಮತ್ತು ಚಿತ್ರಮೂಲಗಳನ್ನು ಹಾಕಿ ಕ್ವಾಥಮಾಡಿ ಕುಡಿಸುವುದರಿಂದ ಶ್ಲೇಷ್ಮಶೂಲೆ ನಾಶವಾಗುವುದು. (ii) ಏರಂಡದ ಬೀಜ ಮತ್ತು ಮೂಲ, ಲಘುಪಂಚಮೂಲ, ಸಹದೇವಿ, ಕಾಡುದ್ದು ಕಾಡುಹೆಸರು ಮತ್ತು ಕೊಳವಳಿಕೆ ಬೇರುಗಳನ್ನು ಚತುರ್ಭಾಗಾವಶೇಷ ಕ್ವಾಥಮಾಡಿ ಶೋಧಿಸಿ, ಅದಕ್ಕೆ ಸ್ವಲ್ಪ ಯವಕ್ಷಾರವನ್ನು ಹಾಕಿ ಕುಡಿಸುವುದರಿಂದ ಎಲ್ಲಾ ಬಗೆ ಶೂಲೆಗಳೂ ನಾಶಹೊಂದುವುವು (iii) ಹಿಪ್ಪಲಿ, ಸ್ವರ್ಜಿಕ್ಷಾರ, ಯವಕ್ಷಾರ ಮತ್ತು ಚಿತ್ರಮೂಲಗಳನ್ನು ಸಮಭಾಗ ಹಾಕಿ ಭಸ್ಮಮಾಡಿ ಬಿಸಿನೀರಿನಲ್ಲಿ ಕುಡಿಸುವುದರಿಂದ ಶ್ಲೇಷ್ಮಶೂಲೆಯು ಗುಣವಾಗುವುದು.

**ಪಾರ್ಶ್ವಶೂಲ**—ಪಕ್ಕೆಯಲ್ಲಿ ಶ್ಲೇಷ್ಮದೋಷದಿಂದ ವಾತವು ತಡೆಯಲ್ಪಟ್ಟು ಅದರಿಂದ ಸ್ವಲ್ಪ ಹೊಟ್ಟೆಯುಬ್ಬರ, ಕರುಳಿನಲ್ಲಿ ಗುಡುಗುಡು ಶಬ್ದ, ಪಾರ್ಶ್ವದಲ್ಲಿ ಸೂಜಿಗಳಿಂದ ಚುಚ್ಚಿದಂತೆ ನೋವು, ಕಷ್ಟದಿಂದ ಉಸಿರಾಡಿಸುವುದು, ಆಹಾರದಲ್ಲಿ ಅಪೇಕ್ಷೆಯಿಲ್ಲದಿರುವುದು, ನಿದ್ದೆ ಬಾರದಿರುವುದು ಇವು ಉಂಟಾಗುತ್ತವೆ. ಈ ವಿಧ ಶೂಲೆಯಲ್ಲಿ ಪುಷ್ಕರಮೂಲ, ಹಿಂಗು, ಸೌವರ್ಚಲ ಲವಣ, ಬಿಡಲವಣ, ಸೈಂಧವಲವಣ, ಗೌಳನಬೀಜ, ಅಳಲೆಕಾಯಿ ಇವನ್ನು ಸಮಭಾಗ ಸೇರಿಸಿ ಚೂರ್ಣಮಾಡಿ ಯವೆಕ್ವಾಥದೊಂದಿಗೆ ಹಾಕಿ ಕುಡಿಸಬೇಕು. ಅಥವಾ ಪ್ಲೀಹೋದರದಲ್ಲಿ ಹೇಳಿರುವ ಷಟ್ಪಲಘೃತವನ್ನಾಗಲೀ, ತುಪ್ಪಕ್ಕೆ

ಸ್ವಲ್ಪ ಹಿಂಗುವನ್ನು ಸೇರಿಸಿಯಾಗಲೀ ಕೊಡಬೇಕು. ಎರಂಡತೈಲವನ್ನು ಮದ್ಯ, ಮಸ್ತು, ಹಾಲು ಅಥವಾ ಜಾಂಗಲಮಾಂಸ ರಸದೊಂದಿಗೆ ಕುಡಿಸಬಹುದು. ಇದು ಜೀರ್ಣಿಸಿದನಂತರ ಎಂದರೆ ವಿರೇಚನವಾದಮೇಲೆ ಹಾಲು, ಜಾಂಗಲಮಾಂಸಗಳನ್ನು ಭೋಜನಮಾಡಿಸಬೇಕು.

**ಕುಕ್ಷಿಶೂಲ ಅಥವಾ ಆಮಶೂಲ**—ವಾತದಿಂದ ದೂಷಿತವಾದ ಕೋಷ್ಠಾಗ್ನಿಯು ಬಲಹೀನವಾಗಿರುವಾಗ ಆಹಾರವು ಜೀರ್ಣವಾಗದೆ ಸ್ತಬ್ಧವಾಗಿ ನಿಲ್ಲುವುದು. ರೋಗಿಯು ಮೇಲುಸಿರನ್ನು ಬಿಡುತ್ತಾ ಅಪಕ್ವ ಆಹಾರಾಂಶವನ್ನು ತೇಗುತ್ತಿರುತ್ತಾನೆ. ಬಾರಿಬಾರಿಗೂ ನೋವಿನಿಂದ ನರಳುತ್ತಾನೆ. ಕೂತರೂ, ನಿಂತರೂ ಅಥವಾ ಮಲಗಿದರೂ ನೋವು ನಿಲ್ಲುವುದಿಲ್ಲ. ಎಂದರೆ ರೋಗಿಗೆ ಯಾವ ಸ್ಥಿತಿಯಲ್ಲೂ ಸುಖ ದೊರೆಯುವುದಿಲ್ಲ. ಇದು ಆಮದೋಷದಿಂದಾದುದೆಂದು ತಿಳಿಯಬೇಕು. ಕುಕ್ಷಿಯಲ್ಲಿ ಅಜೀರ್ಣಾಹಾರವು ಹೆಚ್ಚಾಗಿದ್ದರೆ ರೋಗಿಗೆ ವಮನವನ್ನು ಮಾಡಿಸಬೇಕು; ಸ್ವಲ್ಪವೇ ಇದ್ದರೆ ಲಂಘನವನ್ನು ಮಾಡಿಸಬೇಕು. ಪಾಚನೌಷಧಗಳಿಂದ ಕೂಡಿದ ಪೇಯಾದಿಗಳನ್ನು ಮತ್ತು ದೀಪನವಾದ ಅಮ್ಲಂಯುಕ್ತವಾದ ಆಹಾರಗಳನ್ನು ಕೊಡಬೇಕು. ಹುಳಿದಾಳಿಂಬೆ, ಹುಳಿಮಜ್ಜಿಗೆಗಳನ್ನು ಅಮ್ಲಕ್ಕಾಗಿಯೂ, ಪಂಚಕೋಲಗಳನ್ನು ದೀಪನಕ್ಕಾಗಿಯೂ ಉಪಯೋಗಿಸಬಹುದು. (i) ಶುಂಠಿ, ವೋಮ, ಚವ್ಯ, ಮಾದಳಬೀಜ, ಪರಂಗಿಚೆಕ್ಕೆ (ಚೋಪಚೀನಿ), ಹರಳುಬೇರು, ಹೆಗ್ಗುಳ್ಳ ಮತ್ತು ನೆಲಗುಳ್ಳಗಳನ್ನು ಹಾಕಿ ಕ್ವಾಥಮಾಡಿ ಅದರ ನಾಲ್ಕನೆಯ ಒಂದಂಶ ಹಿಂಗು, ಸೌವರ್ಚಲ ಮತ್ತು ಬಿಡಲವಣಗಳ ಚೂರ್ಣವನ್ನು ಸೇರಿಸಿ ಕುಡಿಸುವುದರಿಂದ ಈ ಶೂಲೆಯು ನಾಶವಾಗುವುದು. (ii) ಬಜೆ, ಸೌವರ್ಚಲಲವಣ, ಹಿಂಗು, ಚಂಗಲ್ಕೋಷ್ಠ, ಅತಿಬಜೆ, ಅಳಲೆಕಾಯಿ ಮತ್ತು ಕೊಡಸಿಗೆಬೀಜ ಇವುಗಳ ಚೂರ್ಣವು ಹೊಟ್ಟೆನೋವನ್ನು ಕೂಡಲೇ ಹೋಗಲಾಡಿಸುತ್ತದೆ. ದೋಷಬಲಾಬಲಗಳನ್ನರಿತು ವಿರೇಚನವನ್ನು ಮಾಡಿಸಬೇಕು. ವಾತವನ್ನು ಹೋಗಲಾಡಿಸುವುದಕ್ಕಾಗಿ ಸ್ನೇಹವಸ್ತಿ ಮತ್ತು ನಿರೂಹಗಳನ್ನು ಕೊಡಬೇಕು. ಸ್ನೇಹದ್ರವ್ಯಗಳ ಉಪನಾಹ, ಧಾನ್ಯಾಮ್ಲಗಳಿಂದ ಸ್ನಾನ, ಅವಗಾಹಗಳು ಹಿತವಾದುವು.

**ಹೃಚ್ಛೂಲ**—ಕಫಪಿತ್ತಗಳಿಂದ ವಾತವು ತಡೆಯಲ್ಪಟ್ಟು ಹೃದಯಭಾಗ ದಲ್ಲಿರುವ ರಸ ದುಷ್ಟವಾಗಿ ಹೃದಯಶೂಲೆಯನ್ನುಂಟುಮಾಡುತ್ತದೆ. ಬಹಳ ವಾಗಿ ಇದು ಉಸಿರಾಡುವುದನ್ನು ತಡೆಯುತ್ತದೆ. ಇದಕ್ಕೆ ಹೃದ್ರೋಗ ಚಿಕಿತ್ಸೆ ಯನ್ನು ಮಾಡಬೇಕು.

**ಪುರೀಷಶೂಲ**—ರೂಕ್ಷಾಹಾರ ಸೇವನೆಮಾಡುವ ಮನುಷ್ಯನಿಗೆ ವಾತವು ಪ್ರಕೋಪವಾಗಿ ಮಲವನ್ನು ತಡೆದು ಅಗ್ನಿಯನ್ನು ಮಂದವಾಗಿ ಮಾಡಿ ಸ್ರೋತಸ್ಸುಗಳನ್ನು ಆಶ್ರಯಿಸುತ್ತದೆ. ಇದರಿಂದ ಕುಕ್ಷಿಯ ಎಡಪಾರ್ಶ್ವ ದಲ್ಲಾಗಲೀ, ಬಲಪಾರ್ಶ್ವದಲ್ಲಾಗಲೀ ನೋವುಂಟಾಗುವುದು. ಜಾಗ್ರತೆಯಾಗಿ ಸುತ್ತುವಂತೆಯೂ, ಶಬ್ದಯುಕ್ತವಾಗಿಯೂ, ಎಲ್ಲಾ ಕಡೆಗಳಲ್ಲಿಯೂ ನೋವು ಹೆಚ್ಚುವುದು. ಬಾಯಾರಿಕೆ, ತಲೆಸುತ್ತುವುದು, ಮತ್ತು ಮೂರ್ಛೆಗಳುಂಟಾಗು ತ್ತವೆ. ಮಲಮೂತ್ರವಿಸರ್ಜನೆಗಳಾದರೂ ನೋವು ಕಡಿಮೆಯಾಗುವುದಿಲ್ಲ. ಬಹು ಕಷ್ಟಕಾರಿಯಾದ ಈ ವ್ಯಾಧಿಗೆ ಪುರೀಷಶೂಲೆಯೆಂದು ಹೆಸರು. ಇದಕ್ಕೆ ಕೂಡಲೇ ವಾತಹರ ಚಿಕಿತ್ಸೆಯನ್ನು ನಡೆಸಬೇಕು. ಸ್ವೇದನಶಮನಗಳನ್ನೂ ನಿರೂಹ ಮತ್ತು ಸ್ನೇಹವಸ್ತಿಗಳನ್ನೂ ಕೊಡಬೇಕು. ಕೋಷ್ಠಶುದ್ಧಿಮಾಡುವ ಮತ್ತು ಉದಾವರ್ತವನ್ನು ಹೋಗಲಾಡಿಸುವ ಎಲ್ಲಾ ಸುಖಕರಕ್ರಿಯೆಗಳನ್ನೂ ನಡೆಸಬೇಕು.

**ಅನ್ನಶೂಲ**—ಪ್ರಮಾಣ ಮೀರಿ ಊಟಮಾಡುವುದರಿಂದ ಅಗ್ನಿ ಮಾರ್ದವವುಂಟಾಗಿ ಕೋಷ್ಠದಲ್ಲಿ ವಾಯು ಆವರಿಸಿಕೊಂಡು ಅನ್ನಪಾಕವಾಗದೆ, ತೀವ್ರ ನೋವುಂಟಾಗುವುದು. ಮೂರ್ಛೆ, ಹೊಟ್ಟೆಯುಬ್ಬರ, ವಿದಾಹ, ಎದೆ ಯಲ್ಲಿ ಒತ್ತುವಿಕೆ, ವಿಲಂಬಿಕಾ, ಅತೀಸಾರ ಮತ್ತು ಛರ್ದಿಗಳಾಗುತ್ತವೆ. ರೋಗಿಯು ನಡುಗುತ್ತಾನೆ. ಇದಕ್ಕೆ ವಮನ, ಲಂಘನ, ಸ್ವೇದನ, ಪಾಚನ ಮತ್ತು ಫಲವರ್ತಿಗಳು ಹಿತವಾದುವು. ಕ್ಷಾರಯುಕ್ತವಾದ ಚೂರ್ಣ, ಗುಟಿಕೆ ಮತ್ತು ಶೂಲಹರ ಇತರ ಔಷಧಗಳನ್ನು ಪಯೋಗಿಸಬೇಕು.

**ಪರಿಣಾಮಶೂಲ**—ಸ್ವಕಾರಣಗಳಿಂದ ಪ್ರಕುಪಿತವಾದ ವಾತವು ಕಫ ಮತ್ತು ಪಿತ್ತಗಳೊಂದಿಗೆ ಕೂಡಿ ಆಹಾರ ಜೀರ್ಣವಾಗುವ ಸಮಯದಲ್ಲಿ ನೋವನ್ನುಂಟುಮಾಡುವುದು.

**ಭುಕ್ತೇ ಜೀರ್ಯತಿ ಯಚ್ಛೂಲಂ ತದೇವ ಪರಿಣಾಮಜಮ್ ।**

ಮಾ. ನಿ.

ಇದಕ್ಕೆ ಪರಿಣಾಮಶೂಲನೆಂದು ಹೆಸರು. ವಾತಶೂಲೆಗೆ ಹೇಳಿರುವ ಕಾರಣಗಳಾದ ರೂಕ್ಷಾಹಾರ, ಅತಿವ್ಯಾಯಾಮ, ವಾಹನಸಂಚಾರ, ಅತಿ ಮೈಥುನ, ಜಾಗರಣೆ, ಹಸಿದಾಗ ಹೆಚ್ಚಾಗಿ ತಣ್ಣೀರನ್ನು ಕುಡಿಯುವುದು ಮುಂತಾದುವುಗಳಿಂದಲೂ ದುಃಖ, ಕೋಪ, ಚಿಂತೆಗಳಿಂದಲೂ ಸಮಾನ ವಾತವು ಪ್ರಕೋಪಗೊಂಡು ತನ್ನ ಸ್ಥಾನದಿಂದ ಮೇಲಕ್ಕೆ ಪ್ರಸರಿಸಿ ಪಾಚಕಪಿತ್ತ ಮತ್ತು ಕ್ಲೇದಕಶ್ಲೇಷ್ಮಗಳನ್ನು ವ್ಯಾಪಿಸಿ ಮೊದಲು ಪಿತ್ತಸ್ಥಾನದಲ್ಲಿ ತೀವ್ರವಾದ ನೋವನ್ನುಂಟುಮಾಡುವುದು. ಅಲ್ಲಿಂದ ವಾತ ಪ್ರಸರಿಸಿದಂತೆಲ್ಲಾ ಮೇಲಕ್ಕೂ ಸುತ್ತಲೂ ನೋವು ಹರಡಿದಂತೆ ಸಂಚರಿಸುವುದು. ಜಠರ, ಪಾರ್ಶ್ವ, ನಾಭಿ ಮತ್ತು ಬಸ್ತಿಗಳಲ್ಲೂ ನೋವುಂಟಾಗುವುದು. ಕೋಷ್ಠದ ಹಿಂಭಾಗದಲ್ಲಿ ಎಂದರೆ ಪೃಷ್ಠಮೂಲಪ್ರದೇಶಗಳಲ್ಲೂ, ಮೇಲೆ ಸ್ತನಾಂತರಗಳಲ್ಲೂ ನೋವಿರುವುದು. ಕೋಷ್ಠವು ಬರಿದಾಗುತ್ತಹಾಗೆ ನೋವು ಹೆಚ್ಚುವುದು. ಊಟಮಾಡಿದಕೂಡಲೇ ನೋವು ಶಮನಹೊಂದುವುದು. ಜಠರದಿಂದ ಗೃಹಣೀಸ್ಥಾನಕ್ಕೆ ಆಹಾರ ಬರುವ ವೇಳೆಯವರೆಗೂ ನೋವು ಕಾಣಿಸುವುದಿಲ್ಲ. ಆಮಾಶಯವು ಬರಿದಾದ ಕೂಡಲೇ ಹಸಿವು ತೋರಿ ನೋವುಂಟಾಗುವುದು. ಇದಕ್ಕೆ ವಾತಶೂಲಚಿಕಿತ್ಸೆಯನ್ನು ನಡೆಸಬೇಕು. ಪಿತ್ತ ಹೆಚ್ಚದಂತೆ ವಿದಾಹಿ, ಅಮ್ಲ, ಮದ್ಯ, ಚಿಂತೆ ಮುಂತಾದುವನ್ನು ದೂರಪಡಿಸಬೇಕು ಮಲಬಂಧ ಮೂತ್ರಕೃಚ್ಛ್ರಗಳನ್ನು ಹೋಗಲಾಡಿಸುವ ಆನುಲೌಮಿಕ ಚಿಕಿತ್ಸೆಯನ್ನು ನಡೆಸಬೇಕು. ಅಂತರ್ವಿದ್ರಧಿಹರಕ್ವಾಥಗಳನ್ನೂ ಘೃತಗಳನ್ನೂ ಕೊಡಬೇಕು. ವರಣಾದಿಕ್ವಾಥ, ಸುಕುಮಾರ ಘೃತ, ಶಂಖ, ಶೃಂಗ, ಕಾಂತಭಸ್ಮಗಳೂ, ಸೂತಶೇಖರರಸ ಇವು ಸಿದ್ಧೌಷಧಗಳು. ಇವುಗಳಿಂದ ನಿಲ್ಲದಿದ್ದರೆ ಶಸ್ತ್ರಚಿಕಿತ್ಸೆಯನ್ನು ನಡೆಸಬೇಕು.

---

# ಉದರನಿದಾನ

ಹೃದಯ, ನಾಭಿ ಮತ್ತು ಪಾರ್ಶ್ವಗಳ ನಡುವೆ ಇರುವ ಪ್ರದೇಶದಲ್ಲಿ ಮಲಗಳು ಒಟ್ಟುಗೂಡಿ ಪ್ರತ್ಯಂಗಗಳನ್ನು ಉಬ್ಬಿದಂತೆ ಮಾಡಿರುವುದಕ್ಕೆ **ಉದರ**ವೆಂದು ಹೆಸರು. ಉದರವು ಮುಖ್ಯವಾಗಿ ಎಂಟು ಬಗೆ—(೧) ವಾತೋದರ, (೨) ಪಿತ್ತೋದರ, (೩) ಶ್ಲೇಷ್ಮೋದರ, (೪) ಸನ್ನಿಪಾತೋದರ (ದೂಷ್ಯೋದರ), (೫) ಪ್ಲೀಹ ಮತ್ತು ಯಕೃದ್ದಾಲ್ಯುದರ, (೬) ಬದ್ಧಗುದೋದರ, (೭) ಕ್ಷತೋದರ ಮತ್ತು (೮) ಉದಕೋದರ.

ಉದರ ರೋಗಗಳೆಲ್ಲವೂ ಮಂದಾಗ್ನಿ, ಅಜೀರ್ಣ ಮತ್ತು ಮಲಸಂಚಯಗಳಿಂದ ಹುಟ್ಟುತ್ತವೆ.

**ಸಾಮಾನ್ಯ ಲಕ್ಷಣಗಳು**—

**ಆಧ್ಮಾನಂ ಗಮನೇಽಶಕ್ತಿರ್ದೌರ್ಬಲ್ಯಂ ದುರ್ಬಲಾಗ್ನಿತಾ ।**
**ಶೋಥಃ ಸದನಮಂಗಾನಾಂ ಸಂಗೋವಾತಪುರೀಷಯೋಃ ॥**
**ದಾಹಸ್ತಂದ್ರಾ ಚ ಸರ್ವೇಷು ಜಠರೇಷು ಭವನ್ತಿ ಹಿ ।**

ಮಾ. ನಿ. ೩೫.

ಹೊಟ್ಟೆಯುಬ್ಬರ, ಓಡಾಡುವುದಕ್ಕೆ ಶಕ್ತಿಯಿಲ್ಲದಿರುವುದು, ಶರೀರದ ದೌರ್ಬಲ್ಯ, ತಕ್ಕಷ್ಟು ಅಗ್ನಿಯಿಲ್ಲದಿರುವುದು, ಪಾದಗಳಲ್ಲಿ ಶೋಥ ವಾತ ಮತ್ತು ಪುರೀಷಗಳ ತಡೆ, ಮೈಯುರಿ ಮತ್ತು ತೂಗಡಿಕೆಗಳು ಉದರದ ಸಾಮಾನ್ಯ ಲಕ್ಷಣಗಳು.

**ಪೂರ್ವರೂಪ**—ಹಸಿವಿಲ್ಲದಿರುವಿಕೆ, ಮಧುರ, ಸ್ನಿಗ್ಧ ಮತ್ತು ಗುರು ಆಹಾರಗಳು, ನಿಧಾನವಾಗಿ ಜೀರ್ಣವಾಗುವಿಕೆ, ಎಲ್ಲಾ ಆಹಾರವು ವಿದಗ್ಧವಾಗುವಿಕೆ, ಆಹಾರವು ಜೀರ್ಣವಾಗಿರುವುದು ಅಥವಾ ಆಗದಿರುವುದು ಇವುಗಳ ಅರಿವಿಲ್ಲದಿರುವಿಕೆ, ಸ್ವಲ್ಪ ಹೆಚ್ಚು ಊಟ ಮಾಡಿದರೂ ಸಹಿಸುವುದಕ್ಕಾಗದಿರುವಿಕೆ, ಪಾದಗಳಲ್ಲಿ ಸ್ವಲ್ಪ ಶೋಥ, ಬಲವಿದ್ದರೂ ಸ್ವಲ್ಪ ಕೆಲಸಮಾಡಿದರೂ ಹೆಚ್ಚು ಆಯಾಸ, ಮಲವು ತನ್ನ ಆಶಯದಲ್ಲಿ ವೃದ್ಧಿಹೊಂದುವಿಕೆ, ಉದಾವರ್ತದಿಂದ ರೂಕ್ಷತೆ, ವಂಕ್ಷಣಗಳಲ್ಲಿ ನೋವು, ಹೊಟ್ಟೆಯುಬ್ಬರ, ಸ್ವಲ್ಪ ಊಟ

ದಿಂದಲೇ ಹೊಟ್ಟೆಯು ವಿಶಾಲವಾಗುವಿಕೆ (ಜಗ್ಗುವುದು), ಹೊಟ್ಟೆಯ ಮೇಲೆ ಸಿರೆಗಳು ಕಾಣುವಿಕೆ ಮತ್ತು ಸುಕ್ಕುಗಳ ಹೋಗುವಿಕೆ ಇವು ಹುಟ್ಟಲಿರುವ ಉದರದ ಲಕ್ಷಣಗಳು.

**ಸಂಪ್ರಾಪ್ತಿ**—ಅತ್ಯುಷ್ಣ, ಲವಣ, ವಿದಾಹಿ, ಅಮ್ಲ, ಗರ ಮುಂತಾದ ಆಹಾರಗಳನ್ನು ಸೇವಿಸುವುದರಿಂದ ಪ್ರಕೋಪಹೊಂದಿದ ದೋಷಗಳು ಸ್ವೇದ ಮತ್ತು ಉದಕವಹಸ್ರೋತಸ್ಸುಗಳನ್ನು ಅಡ್ಡಗಟ್ಟಿ ಪ್ರಾಣವಾಯು, ಅಗ್ನಿ ಮತ್ತು ಅಪಾನಗಳನ್ನು ದೂಷಿಸುತ್ತವೆ. ಇದರಿಂದ ಬಂಧಿತ ಮಲಗಳು ಸ್ರೋತಸ್ಸುಗಳಲ್ಲೇ ನಿಂತು ಉದರ ಉಂಟಾಗುವುದು.

**ವಾತೋದರ**ದಲ್ಲಿ ಪಾಣಿ, ಪಾಯು, ನಾಭಿ, ಕುಕ್ಷಿ, ಉದರ, ಎರಡು ಪಕ್ಕೆ, ಸೊಂಟ, ಬೆನ್ನುಗಳಲ್ಲಿ ನೋವು ಮತ್ತು ಗಿಣ್ಣುಗಳಲ್ಲಿ ಒಡೆತ, ಒಣ ಕೆಮ್ಮು, ನಾಭಿಯ ಕೆಳಭಾಗದಲ್ಲಿ ಗುರುತ್ವ ಮುಂತಾದುವುಗಳಿರುತ್ತವೆ. ಉದರದ ಮೇಲೆ ತೆಳ್ಳಗೆ ಕಪ್ಪಗಿರುವ ಸಿರೆಗಳು ಕಾಣುತ್ತವೆ. ಹೊಟ್ಟೆಯು ಉಬ್ಬರಿಸಿರುತ್ತದೆ. ಮೇಲೆ ಬಡಿದರೆ ಟೊಳ್ಳು ಶಬ್ದ ಕೇಳಿಬರುತ್ತದೆ. ವಾಯು ಒಳಗೆ ಎಲ್ಲಾ ಕಡೆಗೂ ಓಡಾಡುತ್ತದೆ.

**ಪಿತ್ತೋದರ**ದಲ್ಲಿ ಜ್ವರ, ಮೂರ್ಛಾ, ದಾಹ, ತೃಷ್ಣಾ, ಬಾಯಿಕಹಿ, ತಲೆಸುತ್ತು, ಅತೀಸಾರ ಮುಂತಾದುವುಗಳಿರುತ್ತವೆ. ಚರ್ಮ, ಉಗುರುಗಳು ಪೀತವಾಗಿಯೂ ಉದರದ ಮೇಲೆ ಹಸುರು, ಪೀತ ತಾಮ್ರ ಸಿರೆಗಳು ಕಾಣಿಸುವುವು. ಸ್ವಲ್ಪ ಬೆವರು, ಊಷ್ಮ, ಉರಿಗಳು ಮತ್ತು ಉದರವು ಮೃದುವಾಗಿಯೂ ಇರುತ್ತದೆ.

**ಶ್ಲೇಷ್ಮೋದರ**ದಲ್ಲಿ ದೌರ್ಬಲ್ಯ, ಶೋಥ, ಮೈಭಾರ, ನಿದ್ದೆ, ಉತ್ಕ್ಲೇಶ ಮುಂತಾದುವುಗಳಿರುತ್ತವೆ. ಉದರವು ಸ್ತಿಮಿತವಾಗಿಯೂ ಸ್ನಿಗ್ಧವಾಗಿಯೂ ಬಿಳಿ ಗೆರೆಗಳಿಂದಲೂ ಕಾಣುತ್ತದೆ. ನಿಧಾನವಾಗಿ ವೃದ್ಧಿಹೊಂದುತ್ತದೆ ಮತ್ತು ಕಠಿಣವಾಗಿಯೂ ತಣ್ಣಗೂ ಇರುತ್ತದೆ.

**ದೂಷ್ಯೋದರ**—ದೂಷೀವಿಷ, ಗರ, ದುಷ್ಟಾನ್ನ, ದುಷ್ಟನೀರುಗಳ ಸೇವನೆಯಿಂದ ಪ್ರಕುಪಿತದೋಷಗಳು ಮತ್ತು ರಕ್ತವು ಜಾಗ್ರತೆಯಾಗಿ ಘೋರ

ವಾದ ಉದರವನ್ನುಂಟುಮಾಡುವುವು. ಈ ಉದರವು ತ್ರಿದೋಷಾತ್ಮಕವಾದುದು ಶೀತವಾತ, ಮೋಡ ಮಳೆಗಳಿಂದ ತೀವ್ರತರವಾಗುವುದು. ಮೂರ್ಛೆ, ಪಾಂಡು ಕಾರ್ಶ್ಯ, ತೃಷ್ಣಾ, ಮತ್ತು ಅಂಗಶೋಷಗಳಾಗುವುವು.

**ಪ್ಲೀಹ ಮತ್ತು ಯಕೃದ್ದಾಲ್ಯುದರ**—ವಿದಾಹಿ, ಅಭಿಷ್ಯಂದಿ ಆಹಾರ ಗಳನ್ನು ಸೇವಿಸುವುದರಿಂದ ದುಷ್ಟರಕ್ತ ಮತ್ತು ಕಫಗಳು ಪ್ಲೀಹವನ್ನು ವೃದ್ಧಿ ಮಾಡುತ್ತವೆ. ಹೀಗೆಯೇ ಯಕೃತ್ತಿನಲ್ಲೂ ಆದರೆ ಆಗ ಯಕೃತ್‌ವೃದ್ಧಿಯಾಗು ತ್ತದೆ. ಇವುಗಳಿಂದ ರೋಗಿಯು ದುರ್ಬಲನಾಗುತ್ತಾನೆ. ಮಂದಜ್ವರ, ಮಂದಾಗ್ನಿ, ಕಫ ಮತ್ತು ಪಿತ್ತಗಳ ಉಪದ್ರವಗಳು ಮತ್ತು ಪಾಂಡುತ್ವವೂ ಉಂಟಾಗುವುವು. ಉದಾವರ್ತ, ನೋವು ಮತ್ತು ಅನಾಹಗಳಿದ್ದರೆ ವಾತ ವನ್ನೂ, ಮೋಹ, ತೃಟ್, ದಾಹ ಮತ್ತು ಜ್ವರಗಳಿದ್ದರೆ ಪಿತ್ತವನ್ನೂ, ಗೌರವ, ಅರುಚಿ ಮತ್ತು ಕಾಠಿಣ್ಯಗಳಿದ್ದರೆ ಕಫವನ್ನೂ ತಿಳಿಯಬೇಕು.

**ಬದ್ಧಗುದೋದರ**—ಆಹಾರದಲ್ಲಿ ರೋಮ, ಕೂದಲು, ಕಲ್ಲುಚೂರು ಮುಂತಾದುವು ಸೇರಿದ್ದರೆ ಅವು ಅಂತ್ರದಲ್ಲಿ ಮಾರ್ಗವನ್ನು ಅಡ್ಡಗಟ್ಟಿ ಮಲ ವನ್ನು ತಡೆಯುವುವು. ಮೊದಲು ಮೊದಲು ಮಲವು ಸ್ವಲ್ಪ ಸ್ವಲ್ಪವೇ ಕಷ್ಟ ದಿಂದ ಹೋಗುತ್ತಿದ್ದು ಕೊನೆಗೆ ನಿಂತುಹೋಗುವುದು. ಉದರವು ಹೃದಯ ಮತ್ತು ನಾಭಿಗಳ ಮಧ್ಯದಲ್ಲಿ ದೊಡ್ಡದಾಗುವುದು.

**ಕ್ಷತೋದರ**—ಇದಕ್ಕೆ **ಛಿದ್ರೋದರ**ವೆಂದೂ ಹೆಸರಿದೆ. ಊಟದಲ್ಲಿ ಮುಳ್ಳು, ಕಲ್ಲುಚೂರು, ಗಾಜಿನ ಚೂರು ಮುಂತಾದುವು ಸೇರಿದ್ದರೆ ಅವು ಅಂತ್ರ ವನ್ನು ವಿಲೋಮಮಾಡುತ್ತವೆ. ಚೂಪಾಗಿರುವ ಈ ಶಲ್ಯಗಳು ಅಂತ್ರದ ಗತಿ ಯಿಂದಾಗಲೀ ಜೃಂಭಣ, ಆಯಾಮಾದಿಗಳಿಂದಾಗಲೀ ಕರುಳನ್ನು ಭೇದಿಸು ತ್ತವೆ. ಅನ್ನಪಾನಗಳು ಆ ಸೀಳಿಹೋದ ಅಥವಾ ತೂತು ಬಿದ್ದಿರುವ ಮಾರ್ಗ ದಿಂದ ಹೊರಕ್ಕೆ ಸುರಿಯುತ್ತ ನಾಭಿಯ ಕೆಳಗೆ ಸೇರಿ ಉದರವನ್ನು ದೊಡ್ಡದಾಗಿ ಮಾಡುತ್ತವೆ. ಉದರವು ತುಂಬಿ, ಅಂತ್ರದಲ್ಲಿಯೂ ತುಂಬಿ ಗುದಮಾರ್ಗದಿಂದ ಸ್ರಾವವಾಗುತ್ತಿರುತ್ತದೆ. ಬಹಳವಾದ ನೋವಿರುತ್ತದೆ.

**ಉದಕೋದರ ಅಥವಾ ಜಲೋದರ**—ಪಂಚಕರ್ಮಗಳಲ್ಲಿ ಅಪಥ್ಯ

ಮಾಡುವುದರಿಂದ ಎಂದರೆ ಶೋಧನಕ್ರಿಯೆ ಸಮಯದಲ್ಲಿ ತಣ್ಣೀರನ್ನು ಕುಡಿಯುವುದರಿಂದ ಕ್ಷೀಣನಾದವನು ಅಥವಾ ಕೃಶನಾದವನು ಅಗ್ನಿ ಬಹಳ ನಷ್ಟವಾಗಿರುವಾಗ ಹೆಚ್ಚಾಗಿ ತಣ್ಣೀರನ್ನು ಕುಡಿಯುವುದರಿಂದ ಕ್ಲೋಮದಲ್ಲಿರುವ ವಾತವು ಕುಪಿತವಾಗಿ ಉದಕವಹಸ್ರೋತಸ್ಸುಗಳನ್ನು ದೂಷಿಸುತ್ತದೆ. ಇದರಿಂದ ಕಫ ಮತ್ತು ಉದಕಗಳು (ಸ್ನೇಹ ಮತ್ತು ಅನ್ನರಸಗಳು) ಸ್ರೋತೋಮಾರ್ಗಗಳನ್ನು ಅಡ್ಡಗಟ್ಟಿ ರಸಸಂಚಾರವಾಗದಂತೆ ಮಾಡಿ ಉದರದಲ್ಲಿ ಜಲಾಂಶವನ್ನು ಸೇರುವಂತೆ ಮಾಡುತ್ತವೆ. ಉದರವು ದೊಡ್ಡದಾಗಿ ಹೊಳಪಾಗಿ ತೋರುವುದು. ನೀರಿನ ಬುದ್ದಲಿಯಂತೆ ವಿಸ್ತಾರವಾಗುತ್ತದೆ. ಉದರದ ಮೇಲೆ ಒತ್ತಿದರೆ ಅಥವಾ ಬಡಿದರೆ ನೀರಿನ ಸಂಚಾರ ಮತ್ತು ಅಲೆಗಳು ತಿಳಿಯುತ್ತವೆ. ಒಳಗೆ ಗುಡಗುಡ ಶಬ್ದವಾಗುತ್ತದೆ.

**ಸಾಧ್ಯಾಸಾಧ್ಯ**—ಉದರಗಳು ಸ್ವಭಾವವಾಗಿಯೇ ಕೃಚ್ಛ್ರಸಾಧ್ಯವಾದುವು, ಬಲಿಷ್ಠನಿಗೆ ನೀರು ತುಂಬಿಕೊಳ್ಳುವುದಕ್ಕೆ ಮೊದಲೇ ಎಂದರೆ ರೋಗದ ತರುಣಾವಸ್ಥೆಯಲ್ಲಾದರೆ ಯತ್ನಸಾಧ್ಯ. ಹದಿನೈದು ದಿನಗಳು ಕಳೆದ ಬದ್ಧಗುದೋದರಿಯು ನಾಶವಾಗುವನು. ಉದಕೋದರ ಮತ್ತುಛಿದ್ರೋದರಗಳು ಶಸ್ತ್ರಸಾಧ್ಯ. ಕಣ್ಣುಗಳು ಊದಿರುವುದು, ಗುಹ್ಯವು ಕುಟಿಲವಾಗಿರುವುದು, ಚರ್ಮವು ತೆಳ್ಳಗಾಗಿರುವುದು, ರಕ್ತ, ಮಾಂಸ ಮತ್ತು ಅಗ್ನಿಗಳ ಕ್ಷೀಣತೆಗಳು ಅಸಾಧ್ಯ. ಪಾರ್ಶ್ವಗಳಲ್ಲಿ ಒಡೆತ, ಅನ್ನದ್ವೇಷ, ಶೋಥ ಮತ್ತು ಅತೀಸಾರಗಳಿದ್ದರೂ ಅಸಾಧ್ಯ.

## ಉದರಚಿಕಿತ್ಸಾ

ಪ್ರಕುಪಿತವಾತದಿಂದಲೂ, ಸಂಚಿತಮಲದಿಂದಲೂ ಸ್ರೋತೋಮಾರ್ಗಗಳು ತಡೆಯಲ್ಪಟ್ಟು ಉದರವುಂಟಾಗುತ್ತದೆ. ಆದುದರಿಂದ ಉದರರೋಗಿಗೆ ನಿತ್ಯವೂ ಮಲವಿಸರ್ಜನೆಯಾಗುವಂತೆ ಮಾಡಬೇಕು.

**ಕುಪಿತಾನಿಲಮೂಲತ್ವಾತ್ ಸಂಚಿತತ್ವಾನ್ಮಲಸ್ಯ ಚ ।**
**ಸರ್ವೋದರೇಷು ಶಂಸಂತಿ ಬಹುಶಸ್ತ್ವನುಲೋಮನಮ್ ॥**

**ಸು. ಚಿ. ೧೬**

ಅದಕ್ಕೆ ಗೋಮೂತ್ರ ಅಥವಾ ಕ್ಷೀರದೊಡನೆ ಏರಂಡತೈಲವನ್ನು ಮಿಶ್ರ ಮಾಡಿ ಕುಡಿಸಬೇಕು. ರೋಗಿಯು ಎರಡು ತಿಂಗಳುಕಾಲ ಗೋಮೂತ್ರ ಅಥವಾ ಮಾಹಿಷಮೂತ್ರವನ್ನು ಕುಡಿಯುತ್ತಲೂ ಮೊದಲು ಏಳು ದಿನ ನಿರನ್ನ ಲಂಘನ ಅನಂತರ ಕ್ಷೀರಾನ್ನ ಭೋಜನಮಾಡುತ್ತಲೂ ಇರಬೇಕು. ಹದಿನೈದು ದಿನ ನೀರನ್ನು ಕುಡಿಯಬಾರದು. ಒಂಟೆಯ ಹಾಲು ಉದರಿಗೆ ಒಳ್ಳೆಯದು. ವಿಶೇಷವಾಗಿ ಇದು ರೋಗಿಯ ದಾಹ, ಆನಾಹ, ಅತಿತೃಷ್ಣಾ ಮತ್ತು ಮೂರ್ಛೆಗಳಲ್ಲಿ ಪ್ರಯೋಜನಕಾರಿಯಾದುದು.

**ವಾತೋದರ**—ವಾತದೋಷವು ಹೆಚ್ಚಾಗಿದ್ದು ರೂಕ್ಷತೆ ಇರುವ ಅಥವಾ ದೋಷಶೋಧನವಾಗಬೇಕಾಗಿರುವ ರೋಗಿಗೆ ಮೊದಲು ಸ್ನೇಹಯೋಗ್ಯವಾದ ಮತ್ತು ಉದರರೋಗಹರವಾದ ಘೃತಪಾನವನ್ನೂ[೧] ಅನಂತರ ಸ್ವೇದವನ್ನೂ ಮಾಡಿಸಿ ಕಡೆಯಲ್ಲಿ ಸ್ನೇಹವಿರೇಚನೌಷಧವನ್ನು ಕುಡಿಸಬೇಕು. ಇವುಗಳಿಂದ ಸಂಚಿತ ಮಲವು ಹೋಗಿ ಉದರದ ಗಾತ್ರವು ಕಡಿಮೆಯಾಗುವುದು. ಕೂಡಲೇ ಉದರವನ್ನು ಬಟ್ಟೆಗಳಿಂದ ಬಿಗಿಯಬೇಕು. ಇಲ್ಲವಾದರೆ ಮಲವಿದ್ದ ಸ್ಥಳದಲ್ಲಿ ವಾತವು ಸೇರಿ ಪುನಃ ಗಾತ್ರವನ್ನು ಹೆಚ್ಚಿಸುವುದು. ಬಲ ಹೆಚ್ಚಿಸುವುದಕ್ಕೆ ವಿಶೇಷ ವಾಗಿ ಹಾಲನ್ನು ಕುಡಿಸಬೇಕು. ಆದರೆ ಅವನಿಗೆ ಹಾಲಿನ ಜಿಗುಪ್ಸೆ ಯುಂಟಾಗುವುದಕ್ಕೆ ಮೊದಲೇ ಬಲ ಹೆಚ್ಚಿದಂತೆ ಹಾಲಿನ ಪ್ರಮಾಣವನ್ನು ಕಡಿಮೆಮಾಡುತ್ತಾ ಬರಬೇಕು. ಬಲಿಷ್ಠನಿಗೆ ಮಲವು ಸುರಿಯುತ್ತಿದ್ದರೂ ವಾತವು ಸಮಸ್ಥಿತಿಗೆ ಬರದಿದ್ದರೆ ಪುನಃ ಕಲ್ಪೋದ್ದಿಷ್ಟವಾದ ವಿರೇಚನವನ್ನು ಮಾಡಿಸಿ ಅನಂತರ ಲಘುಭೋಜನ ಎಂದರೆ ಜಾಂಗಲಮಾಂಸರಸ, ಮಂಡ, ಪೇಯಗಳನ್ನು ಕುಡಿಸಬೇಕು. ಆರು ದಿನಗಳವರೆಗೂ ಹಾಲಿಗೆ ಸ್ವಲ್ಪ ತ್ರಿಕಟು

೧. ಷಟ್ಪಲಂ ದಶಮೂಲಾಂಬು ಮಸ್ತುದ್ವ್ಯಾಢಕ ಸಾಧಿತಮ್ ।
ನಾಗರಂ ತ್ರಿಪಲಂ ಪ್ರಸ್ಥಂ ಘೃತತೈಲಾತ್ತಥಾಢಕಮ್ ॥
ಮಸ್ತುನಃ ಸಾಧಯಿತ್ವೈತತ್ಪಿಬೇತ್ಸರ್ವೋದರಾಪಹಮ್ ।
ಕಫಮಾರುತಸಂಭೂತೇ ಗುಲ್ಮೇಚ ಪರಮಂಹಿತಮ್ ॥ ಅ.ಹೃ.ಚಿ. ೧೫

ವನ್ನು ಹಾಕಿ ಕುಡಿಸುತ್ತಿರಬೇಕು. ವಿರೇಚನಕ್ಕೆ ಪಟೋಲಾದಿ[೧] ಚೂರ್ಣವನ್ನು ಕೊಡಬಹುದು. ಇದು ಎಲ್ಲಾ ಉದರಿಗಳಿಗೂ ಒಳ್ಳೆಯದು. ಹೀಗೆಯೇ ನಾರಾಯಣಚೂರ್ಣವನ್ನು ಕೊಡಬಹುದು. ಆನಾಹಕ್ಕೆ ಮಿಶ್ರಕ ಸ್ನೇಹವನ್ನು ಕೊಡಬೇಕು. ಉಳಿದ ದೋಷವನ್ನು ಹೋಗಲಾಡಿಸಲು ಲಘ್ವನ್ನವನ್ನು ಪ ಯೋಗಿಸಬೇಕು. ಪಿಪ್ಪಲೀ ರಸಾಯನ, ವರ್ಧಮಾನ ಪಿಪ್ಪಲೀ ಅಥವಾ ಶಿಲಾಜತುರಸಾಯನಗಳನ್ನು ಪ್ರಯೋಗಿಸಬೇಕು.

**ಉದರದಲ್ಲಿ ವಿರೇಚನಕ್ಕೆ ಅನರ್ಹರು**—ದುರ್ಬಲರು[೨], ಮುದುಕರು, ಮಕ್ಕಳು ಸುಕುಮಾರ ದೇಹವುಳ್ಳವರು, ಸ್ವಲ್ಪವೇ ದೋಷವಿರುವವರು ಮತ್ತು ಅತಿವಾತವುಳ್ಳ ಉದರಿಗಳಿಗೆ ವಿರೇಚನವನ್ನು ಮಾಡಿಸಬಾರದು. ಇಂತಹ ವರಿಗೆ ಘೃತ, ಯೂಷ, ಮಾಂಸರಸ, ಕ್ಷೀರ, ಶಾಲಿ, ಷಷ್ಟಿಕಾನ್ನಗಳಿಂದಲೂ, ಬಸ್ತಿ, ಅಭ್ಯಂಗಮತ್ತು ಅನುವಾಸನಗಳಿಂದಲೂ ಶಮನಕ್ರಿಯೆಗಳು ಹಿತವಾದುವು.

ವಿರೇಚನದಿಂದ ಶುದ್ಧನಾದವನಿಗೆ ಯೂಷ, ಮಾಂಸರಸಗಳಿಗೆ ಸ್ವಲ್ಪವೇ ಅಮ್ಲ ಮತ್ತು ಲವಣಗಳನ್ನು ಹಾಕಿ ಕುಡಿಸಬೇಕು. ಇವುಗಳಿಂದ ಅಗ್ನಿಯು ವೃದ್ಧಿಯಾಗುವುದು. ಉದಾವರ್ತ, ಸ್ಫುರಣ, ಆಕ್ಷೇಪಗಳಿದ್ದರೆ ಪುನಃ ಸ್ನೇಹ ಸ್ವೇದಗಳನ್ನು ನಡೆಸಿ ಶೋಧನವಸ್ತಿಯನ್ನು ಕೊಡಬೇಕು. ಹಸಿವು ಚೆನ್ನಾಗಿ ದ್ದರೆ ಮಲ ಮತ್ತು ವಾತಗಳು ಸರಿಯದೆ ಇರುವ ರೂಕ್ಷನಿಗೆ ಅನುವಾಸನವಸ್ತಿ ಯನ್ನು ಕೊಡಬೇಕು. ಶೋಧನವಸ್ತಿಗೆ ದಶಮೂಲ ಕಷಾಯವನ್ನೂ, ಅನು

---

೧. ಪಟೋಲಮೂಲಂತ್ರಿಫಲಾಂನಿಶಾಂವೇಲ್ಲಂಚಕಾರ್ಷಿಕಮ್ ।
ಕಂಪಿಲ್ಲನೀಲಿನೀಕುಂಭ ಭಾಗಾನ್ ದ್ವಿತ್ರಿಚತುರ್ಗುಣಾನ್ ॥
ಪಿಬೇತ್ಸಂಚೂರ್ಣ್ಯ ಮೂತ್ರೇಣ ಪೇಯಾಂ ಪೂರ್ವಂ ತತೋರಸೈಃ ।
ವಿರಕ್ತೋ ಜಾಂಗಲೈರದ್ಯಾತ್ತತಃ ಷಡ್ದಿವಸಂಪಯಃ ॥
ಶೃತಂ ಪಿಬೇದ್ವ್ಯೋಷಯುತಂ ಪೀತಮೇವಂ ಪುನಃ ಪುನಃ ।
ಹನ್ತಿ ಸರ್ವೋದರಾಣ್ಯೇತಚ್ಚೂರ್ಣಂ ಜಾತೋದಕಾನ್ಯಪಿ ॥ ಅ.ಹೃ.ಚಿ. ೧೫.

೨. ಅವಿರೇಚ್ಯಂ ತು ಯಂ ವಿದ್ಯಾದ್ದುರ್ಬಲಂ ಸ್ಥವಿರಂ ಶಿಶುಮ್ ॥
ಸುಕುಮಾರಂ ಪ್ರಕೃತ್ಯಾಲ್ಪದೋಷಂ ವಾಽಥೋಲ್ಬಣಾನಿಲಮ್ ॥
ಚ.ಚಿ.ಅ. ೧೩.

ವಾಸನಕ್ಕೆ ವಾತಘ್ನಕ್ವಾಥ, ಅಮ್ಲರಸ, ತಿಲ ಮತ್ತು ಏರಂಡತೈಲಗಳಿಂದ ಸಿದ್ಧ ವಾದ ಸ್ನೇಹವನ್ನೂ ಉಪಯೋಗಿಸಬೇಕು. ಬಾಯಾರಿಕೆಯು ತೋರಿಬಂದಾಗ ಶುಂಠೀಕ್ವಾಥವನ್ನು ಕೊಡಬೇಕು. ಕುಲತ್ಥಯೂಷವನ್ನು ಕುಡಿಸಬೇಕು. ಪಾರ್ಶ್ವಶೂಲ, ಹೃದ್ಗ್ರಹಾದಿಗಳಲ್ಲಿ ತೈಲಕ್ಕೆ ಬಿಲ್ವಕ್ವಾಥ ಮತ್ತು ಯವಕ್ಷಾರ ಗಳನ್ನು ಹಾಕಿ ಕುಡಿಸಬೇಕು.

**ಪಿತ್ತೋದರ**ದಲ್ಲಿ ಬಲಿಷ್ಠನಾಗಿರುವವನಿಗೆ ಮೊದಲು ವಿರೇಚನವನ್ನು ಮಾಡಿಸಬೇಕು. ದುರ್ಬಲನಾಗಿದ್ದರೆ ಮೊದಲು ಅನುವಾಸನ ಮಾಡಿಸಿ ಅನಂತರ ಕ್ಷೀರವಸ್ತಿಯಿಂದ ಮಲಶೋಧನ ಮಾಡಿಸಬೇಕು. ದೇಹಬಲ, ಅಗ್ನಿಬಲಗಳುಂಟಾದಮೇಲೆ ಪುನಃ ಸ್ನೇಹನವನ್ನು ಮಾಡಿಸಿ ವಿರೇಚನವನ್ನು ಮಾಡಿಸಬೇಕು. ವಿರೇಚನಕ್ಕೆ ಕ್ಷೀರ, ತ್ರಿವೃತ್ ಕಲ್ಕ ಮತ್ತು ಹರಳೆಣ್ಣೆಗಳಿಂದ ಸಿದ್ಧಪಡಿಸಿದ ತೈಲವನ್ನುಪಯೋಗಿಸಬಹುದು. ಕಫಸಂಸರ್ಗವೂ ಇದ್ದರೆ ಈ ತೈಲಕ್ಕೆ ಗೋಮೂತ್ರವನ್ನು ಸೇರಿಸಿ ಕುಡಿಸಬೇಕು. ವಾತಸಂಸರ್ಗವಿದ್ದರೆ ಕೇವಲ ತಿಕ್ತಘೃತವನ್ನು ಕುಡಿಸಬೇಕು. ಪುನಃ ಕ್ಷೀರಪ್ರಯೋಗ, ಬಸ್ತಿಕರ್ಮ ಮತ್ತು ವಿರೇಚನಗಳನ್ನು ಕ್ರಮವಾಗಿ ಮಾಡಿಸುವುದರಿಂದ ಪಿತ್ತೋದರವು ನಾಶಹೊಂದುವುದು.

**ಕಫೋದರ**—ರೋಗಿಗೆ ಸ್ನೇಹ, ಸ್ವೇದ ಮತ್ತು ವಿರೇಚನಗಳನ್ನು ಮಾಡಿಸಬೇಕು. ಕಟುಕ್ಷಾರಯುಕ್ತವಾದ ಕಫಹರವಾದ ಆಹಾರವನ್ನು ಕೊಡ ಬೇಕು. ಅಯಸ್ಕೃತಿ ಚೂರ್ಣವನ್ನು ಗೋಮೂತ್ರ ಅಥವಾ ಅರಿಷ್ಟಾನುಪಾನ ದಲ್ಲಿ ಯೋಜಿಸಬೇಕು. ಜೊತೆಗೆ ಕ್ಷಾರ ಮತ್ತು ತೈಲಗಳನ್ನು ಕುಡಿಸುವುದರಿಂದ ಕಫೋದರವು ಗುಣವಾಗುವುದು.

**ಸನ್ನಿಪಾತೋದರ**—ಮೇಲೆ ಹೇಳಿದ ಎಲ್ಲಾ ಕ್ರಿಯೆಗಳನ್ನೂ ನಡೆಸ ಬೇಕು. ಉಪದ್ರವಯುಕ್ತವಾಗಿದ್ದರೆ ಅಸಾಧ್ಯ. ಇದನ್ನು ರೋಗಿಯ ಆಪ್ತ ಬಂಧುಗಳಿಗೆ ತಿಳಿಸಿ ಅವರ ಅನುಮತಿಯನ್ನು ಪಡೆದು ವಿಷಪ್ರಯೋಗ ವನ್ನು ಮಾಡಬೇಕು. ವಿಷವು ಪ್ರಮಾಥಿಯಾದುದರಿಂದ ಸ್ರೋತಸ್ಸುಗಳಲ್ಲಿ ಲೀನವಾಗಿರುವ ದೋಷಗಳನ್ನು ಹೊರಹಾಕುವುದು. ಅನಂತರ ತಣ್ಣೀರಿನಿಂದ ಸ್ನಾನಮಾಡಿಸಿ ಹಾಲನ್ನು ಅಥವಾ ಪೇಯವನ್ನು ಕುಡಿಸಬೇಕು. ತ್ರಿವೃತ್

ಎಲೆ, ಒಂದೆಲಗ, ಚಕ್ರೋತಸೊಪ್ಪು, ಕರಿಬೇವುಸೊಪ್ಪು ಯವೆಗಳ ಗಂಜಿಯನ್ನು ಕುಡಿಸಬೇಕು. ಅಥವಾ ಯಾವುದಾದರೊಂದರಿಂದ ಹುಳಿ, ಉಪ್ಪು ಮತ್ತು ಸ್ನೇಹಗಳಿಲ್ಲದೆ ಎಂದರೆ ಆಯಾ ಶಾಕದ ಸ್ವರಸದಿಂದ ಬೇಯಿಸಿ ಅಥವಾ ಬೇಯಿಸದೆ ಮಾಡಿರುವ ಪದಾರ್ಥವನ್ನು ತಿನ್ನಿಸಬೇಕು. ಅನ್ನವನ್ನು ಕೊಡಬಾರದು. ಬಾಯಾರಿಕೆಗೆ ಆ ಸೊಪ್ಪಿನ ಸ್ವರಸವನ್ನೇ ಕುಡಿಸುತ್ತಿರಬೇಕು. ಈ ರೀತಿ ಒಂದು ತಿಂಗಳು ನಡೆಸುವುದರಿಂದ ದೋಷಗಳ ನಿವೃತ್ತಿಯಾಗುವುದು. ಅನಂತರ ಅವನ ದೌರ್ಬಲ್ಯವನ್ನು ಹೋಗಲಾಡಿಸಲು ಒಂಟೆಯ ಹಾಲನ್ನು ಕುಡಿಸಬೇಕು.

**ದೂಷ್ಯೋದರ**— ಇದು ದೂಷೀವಿಷಜನ್ಯವಾದುದರಿಂದ ವಿಷಹರ ಚಿಕಿತ್ಸೆಯನ್ನು ನಡೆಸಿ ಅನಂತರ ಸನ್ನಿಪಾತೋದರ ಚಿಕಿತ್ಸೆಯನ್ನೇ ಮಾಡಬೇಕು.

**ಉದಾವರ್ತರುಜಾನಾಹೈರ್ದಾಹಮೋಹತೃಷಾಜ್ವರೈಃ ।**
**ಗೌರವಾರುಚಿಕಾಠಿನ್ಯೈಃ ಶ್ಚಾನಿಲಾದೀನ್ಯಥಾಕ್ರಮಮ್ ॥**
**ಲಿಂಗೈಃ ಪ್ಲೀಹ್ನ್ಯಧಿಕಾನ್ ದೃಷ್ಟ್ವಾ ರಕ್ತಂಚಾಪಿ ಸ್ವಲಕ್ಷಣೈಃ[೧] ।**
**ಚಿಕಿತ್ಸಾಂ ಸಂಪ್ರಕುರ್ವೀತ ಯಥಾ ದೋಷಂ ಯಥಾ ಬಲಮ್ ॥**
ಚ.ಚಿ.ಅ. ೧೩

ಉದಾವರ್ತ, ಶೂಲೆ ಮತ್ತು ಹೊಟ್ಟೆಯುಬ್ಬರಗಳಿಂದ ವಾತದೋಷವಿದೆಯೆಂದೂ, ದಾಹ, ಮೋಹ, ಬಾಯಾರಿಕೆ ಮತ್ತು ಜ್ವರಗಳಿಂದ ಪಿತ್ತದೋಷವಿದೆಯೆಂದೂ, ಮೈಭಾರ, ಅರುಚಿ ಮತ್ತು ಉದರಕಾಠಿಣ್ಯಗಳಿಂದ ಕಫದೋಷವಿದೆಯೆಂದೂ, ಪ್ಲೀಹವೃದ್ಧಿ ಮತ್ತು ರಕ್ತವೃದ್ಧಿ ಲಕ್ಷಣಗಳಿಂದ ರಕ್ತದೋಷವಿದೆಯೆಂದೂ ತಿಳಿದು, ದೋಷ ಮತ್ತು ರೋಗಿಯ ಬಲಾಬಲಗಳಿಗನುಸಾರವಾಗಿ ಚಿಕಿತ್ಸಿಸಬೇಕು.

**ಪ್ಲೀಹೋದರ**— ರೋಗಿಗೆ ಸ್ನೇಹ ಸ್ವೇದನಗಳನಂತರ ಮೊಸರು ಅನ್ನ

---

೧. ............ರಕ್ತಂ ವಿಸರ್ಪಪ್ಲೀಹವಿದ್ರಧೀನ್ ।
ಕುಷ್ಠವಾತಾಸ್ರಪಿತ್ತಾಸ್ರಗುಲ್ಮೋಪಕುಶಕಾಮಲಾಃ ॥
ವ್ಯಂಗಾಗ್ನಿನಾಶಸಂಮೋಹರಕ್ತತ್ವಙ್ನೇತ್ರಮೂತ್ರತಾಃ । ಅ.ಹೃ.ಸೂ. ೧೧.

ವನ್ನು ಭೋಜನಮಾಡಿಸಿ ಎಡಬಾಹುವಿನಿಂದ ಶಕ್ಯವಷ್ಟು ರಕ್ತಮೋಕ್ಷಣವನ್ನು ನಡೆಸಬೇಕು. ಶಮನಕ್ರಿಯೆಗಳಿಂದ ಅವನಿಗೆ ಬಲವೃದ್ಧಿಯಾದನಂತರ ಪುನಃ ಹೀಗೆಯೇ ಸ್ನೇಹನ ಮತ್ತು ರಕ್ತಮೋಕ್ಷಣಗಳನ್ನು ಮಾಡಬೇಕು.

(i) ಸಮುದ್ರದ ಕಪ್ಪೆಚಿಪ್ಪಿನ ಭಸ್ಮವನ್ನು ಹಾಲಿನೊಡನೆ ಕುಡಿಸಬೇಕು.

(ii) ಓಟೆಹುಳಿ ಮತ್ತು ಹೊಂಗೆಬೀಜಗಳನ್ನು ಕ್ವಾಥಮಾಡಿ ಅದಕ್ಕೆ ಬಿಡಲವಣ ಮತ್ತು ಹಿಪ್ಪಲಿ ಚೂರ್ಣಗಳನ್ನು ಸೇರಿಸಿ ಕುಡಿಸಬೇಕು.

(iii) ನುಗ್ಗೇಬೀಜದ ಕಷಾಯಕ್ಕೆ ಸೈಂಧವ, ಚಿತ್ರಕ ಮತ್ತು ಹಿಪ್ಪಲಿ ಇವುಗಳ ಚೂರ್ಣವನ್ನು ಹಾಕಿ ಕುಡಿಸಬಹುದು.

(iv) ಹಿಂಗ್ವಾದಿ ಚೂರ್ಣಕ್ಕೆ ಯವಕ್ಷಾರ ಮತ್ತು ತುಪ್ಪಗಳನ್ನು ಬೆರಸಿ ತಿನ್ನಿಸಬಹುದು.

(v) ಹಿಪ್ಪಲಿ, ಶುಂಠಿ ಮತ್ತು ಜಾಪಾಳದ ಬೇರು ಇವು ಸಮಾಂಶ, ಅಳಲೆ ಕಾಯಿ ಇವಿಷ್ಟರ ಎರಡು ಭಾಗ ಮತ್ತು ಬಿಡಲವಣ ಅರ್ಧ ಭಾಗ; ಇವನ್ನು ಒಟ್ಟಿಗೆ ಚೂರ್ಣಿಸಿ ಬಿಸಿನೀರಿನೊಡನೆ ಕುಡಿಸಬೇಕು.

(vi) ವಾಯುವಿಳಂಗ, ಚಿತ್ರಮೂಲ, ಆಕ್ಕಿ, ಸೈಂಧವಲವಣ ಮತ್ತು ಬಜೆ ಇವನ್ನು ಚೂರ್ಣಿಸಿ ಸ್ವಲ್ಪ ತುಪ್ಪದಲ್ಲಿ ಕಲಸಿ ಶ್ರಾವೆಗಳಲ್ಲಿಟ್ಟು ಪುಟಹಾಕಿ ಬಂದ ಕ್ಷಾರವನ್ನು ಕ್ಷೀರಾನುಪಾನದಲ್ಲಿ ಕೊಡುವುದರಿಂದ ಗುಲ್ಮ ಮತ್ತು ಪ್ಲೀಹ ಗಳು ಗುಣವಾಗುವುವು.

ವಾತಕಫ ಹೆಚ್ಚಾಗಿರುವ ಪ್ಲೀಹವನ್ನು ಹೋಗಲಾಡಿಸಲು ಅಗ್ನಿಕರ್ಮ ವನ್ನು ಮಾಡಬೇಕು. ಪಿತ್ತದೋಷವಿದ್ದರೆ ಜೀವನೀಯಘೃತ, ಕ್ಷೀರವಸ್ತಿ, ರಕ್ತಮೋಕ್ಷಣ, ವಿರೇಚನ ಮತ್ತು ಕ್ಷೀರಪಾನಗಳು ಹಿತವಾದುವು. ಯೂಷ ಮತ್ತು ಮಾಂಸರಸಗಳಿಗೆ ದೀಪನದ್ರವ್ಯಗಳನ್ನು ಸೇರಿಸಿ ಕೊಡಬೇಕು. ಲಘು ವಾದ ಅನ್ನಪಾನಗಳನ್ನು ಕೊಡಬೇಕು.

**ಯಕೃದ್ದಾಲ್ಯುದರ**—ಪ್ಲೀಹೋದರದ ಕ್ರಮವನ್ನೇ ಅನುಸರಿಸಬೇಕು. ಬಲತೋಳಿನಿಂದ ರಕ್ತಸೇಚನ ಮಾಡಿಸಬೇಕು. ಇವೆರಡು ಉದರಗಳಲ್ಲೂ ಪಿಪ್ಪಲೀರಸಾಯನ ಮತ್ತು ವರ್ಧಮಾನಪಿಪ್ಪಲೀಯೋಗಗಳು ಶ್ರೇಷ್ಠವಾದುವು.

**ಬದ್ಧೋದರ**—ಸ್ವೇದನವನ್ನು ಮಾಡಿಸಿ ಗೋಮೂತ್ರ, ಸೈಂಧವಲವಣ ಮತ್ತು ಇತರ ತೀಕ್ಷ್ಣೌಷಧಗಳಿಂದ ಕೂಡಿದ ನಿರೂಹವನ್ನೂ ಅನಂತರ ಅನುವಾಸನವನ್ನೂ ಕೊಡಬೇಕು. ಅನುಲೋಮನಮಾಡುವ ಆಹಾರಗಳನ್ನು ತಿನ್ನಿಸಿ ಆ ರೋಗಿಗೆ ತೀಕ್ಷ್ಣವಿರೇಚನವನ್ನು ಪಯೋಗಿಸಬೇಕು. ವಾತಹರವಾದ ಮತ್ತು ಉದಾವರ್ತವನ್ನು ಹೋಗಲಾಡಿಸುವ ಎಲ್ಲಾ ಕ್ರಿಯೆಗಳನ್ನೂ ನಡೆಸಬೇಕು.

**ಛಿದ್ರೋದರ**—ಸ್ವೇದಕರ್ಮ ವಿನಹ ಕಫೋದರಿಗೆ ಮಾಡುವ ಉಳಿದ ಎಲ್ಲಾ ಚಿಕಿತ್ಸಾಕ್ರಮವನ್ನೂ ಅನುಸರಿಸಬೇಕು.

**ಜಲೋದರ**ದಲ್ಲಿ ಸ್ವೇದಮಾಡಿಸಿ, ಉದರದಲ್ಲಿ ದ್ರವ ತುಂಬಿದಂತೆಲ್ಲಾ ಆಗಾಗ್ಗೆ ಅದನ್ನು ಯಂತ್ರದಿಂದ ತೆಗೆದು ಹಾಕಬೇಕು. ಜಲದೋಷ ಹೋಗುವಂತೆ ಎಲ್ಲಾ ಕಾರ್ಯಗಳನ್ನೂ ಕೈಗೊಳ್ಳಬೇಕು. ಅವನ ಆಹಾರದಲ್ಲಿ ಕಫಹರವಾದ, ದೀಪನೀಯವಾದ ಔಷಧಗಳನ್ನೂ, ಗೋಮೂತ್ರ ಮತ್ತು ಕ್ಷಾರವೇ ಮುಂತಾದ ತೀಕ್ಷ್ಣ ದ್ರವ್ಯಗಳನ್ನೂ ಸೇರಿಸಿರಬೇಕು. ಗೋಮೂತ್ರದಲ್ಲಿ ಪಕ್ವಮಾಡಿದ ಅಜಕರೀಷ ಕ್ಷಾರವನ್ನು ಪಿಪ್ಪಲ್ಯಾದಿ[೧] ಚೂರ್ಣಕ್ಕೆ ಬೆರಸಿ ಮಾತ್ರೆಗಳನ್ನು ಮಾಡಿ ಹುಳಿಗಂಜಿಯೊಡನೆ ಕುಡಿಸಬೇಕು.

ಬದ್ಧಗುದೋದರ, ಛಿದ್ರೋದರ ಮತ್ತು ಜಲೋದರಗಳು ಈ ವಿಧ ಚಿಕಿತ್ಸೆಗಳಿಂದ ಗುಣವಾಗದಿದ್ದರೆ ಶಸ್ತ್ರಕರ್ಮವನ್ನು ಮಾಡಬೇಕು. ಬದ್ಧ ಮತ್ತು ಛಿದ್ರೋದರಗಳಲ್ಲಿ ವಿಧಿಪೂರ್ವಕವಾಗಿ ನಾಭಿಯ ಕೆಳಗೆ ಪಾಟನಕ್ರಿಯೆಯನ್ನು ನಡೆಸಿ ಅಂತ್ರದಲ್ಲಿ ಸೇರಿರಬಹುದಾದ ಕೂದಲು, ಕೊಳೆ, ಕಲ್ಲುಚೂರು ಮುಂತಾದುವನ್ನು ತೆಗೆದುಹಾಕಿ ಶುದ್ಧಿಮಾಡಿ ಛಿದ್ರಸ್ಥಾನವನ್ನು ಕೂಡಿಸಲು ಕಟ್ಟೆ ಇರುವೆಗಳಿಂದ ಕಚ್ಚಿಸಿ ಅವನ್ನು ಕತ್ತರಿಸಿ ಹೊರಹಾಕಬೇಕು. ಅಂತ್ರವನ್ನು

---

೧. ಪಿಪ್ಪಲೀ ಪಿಪ್ಪಲೀಮೂಲಂ ಶುಂಠೀ ಲವಣಪಂಚಕಮ್ ।
ನಿಕುಂಭಕುಂಭತ್ರಿಫಲಾಸ್ವರ್ಣಕ್ಷೀರೀ ವಿಷಾಣಿಕಾಃ ॥
ಸ್ವರ್ಜಿಕಾಕ್ಷಾರಷಡ್ಗ್ರಂಥಾ ಸಾತಲಾಯವಶೂಕಜಮ್ ।
ಕೋಲಾಭಾಗುಟಿಕಾಃ ಕೃತ್ವಾ ತತಃ ಸೌವಿರಕಾಪ್ಲುತಾಃ ॥
ಪಿಬೇದಜರಕೇಶೋಥೇ ಪ್ರವೃದ್ಧೇಚದಕೋದರೇ । ಅ.ಹೃ.ಚಿ. ೧೫.

ಹಿಂದಿದ್ದ ಸ್ಥಳಕ್ಕೆ ಸೇರಿಸಿ ಮಧುಸರ್ಪಿಗಳನ್ನು ಸವರಿ ಅನಂತರ ಸೀವನರೋಪಣ ಗಳನ್ನು ಮಾಡಬೇಕು. ಉದಕ ಕೂಡಿದ್ದರೆ ಈ ಮೂರು ಉದರಗಳಲ್ಲೂ ನಾಭಿಯ ಕೆಳಗೆ ಎಡಪಾರ್ಶ್ವದಲ್ಲಿ ನಾಡೀಯಂತ್ರವನ್ನು ಚುಚ್ಚಿ ಅರ್ಧ ಮೂತ್ರ ದ್ರವವನ್ನು ಸ್ರವಿಸಿ ಗಾತ್ರವು ಸಡಿಲವಾಗಂತೆಲ್ಲಾ ವಸ್ತ್ರವನ್ನು ಬಿಗಿಯುತ್ತಿರ ಬೇಕು. ಯಂತ್ರವನ್ನು ತೆಗೆದಮೇಲೆ ತೈಲ ಮತ್ತು ಲವಣಗಳನ್ನು ರಂಗಳಿಸಿ ಚುಚ್ಚಿದ ಸ್ಥಾನಕ್ಕೆ ಲೇಪಿಸಬೇಕು. ಇದಾದಮೇಲೆ ಲಂಘನವನ್ನು ಮಾಡಿಸಿ ಅನಂತರ ಸ್ನೇಹ ಮತ್ತು ಲವಣಗಳನ್ನು ಹಾಕದಿರುವ ಪೇಯವನ್ನು ಕುಡಿಸ ಬೇಕು. ರೋಗಿಗೆ ವಿಶ್ರಾಂತಿ ಕೊಡುತ್ತಲಿದ್ದು ಮೂರು ಅಥವಾ ನಾಲ್ಕು ದಿನ ಗಳಿಗೊಂದು ಸಲ ಜಲಸ್ರಾವವನ್ನು ಮಾಡುತ್ತಿರಬೇಕು. ಕರ್ಮಕೌಶಲ್ಯವುಳ್ಳ ಶಲ್ಯಜ್ಞರಿಂದ ಈ ಕ್ರಿಯೆಗಳು ನಡೆಯಬೇಕು.

ಈ ಉದರಿಗಳಿಗೆ ಆರು ತಿಂಗಳವರೆಗೆ ಹಾಲು ಒಂದನ್ನೇ ಕುಡಿಸುತ್ತಿರ ಬೇಕು. ಮುಂದೆ ಮೂರು ತಿಂಗಳವರೆಗೆ ಹಾಲು ಮತ್ತು ಪೇಯಗಳನ್ನು ಕುಡಿಸುತ್ತಿರಬೇಕು. ಇನ್ನು ಮೂರು ತಿಂಗಳು ಸಾಮೆ, ನವಣೆ ಮುಂತಾದು ವನ್ನು ಉಪ್ಪಿಲ್ಲದೆ, ಲಘುವಾಗಿರುವಂತೆ ಹಾಲಿನೊಡನೆ ಭೋಜನ ಮಾಡಿಸ ಬೇಕು. ಹೀಗೆ ಒಂದು ಸಂವತ್ಸರ ನಡೆಸುವುದರಿಂದ ಜಲೋದರವು ಗುಣ ವಾಗುವುದು. ಈ ಎಲ್ಲಾ ಪ್ರಯೋಗಗಳಲ್ಲೂ ಬಲ ಸ್ಥೈರ್ಯಗಳ ರಕ್ಷಣೆ ಮತ್ತು ಅನುಬಂಧದೋಷ ಶಮನಗಳಿಗಾಗಿ ಹಾಲು ಬಹುಮುಖ್ಯವಾದುದು. ಧಾತುಗಳೆಲ್ಲಾ ಕ್ಷಯವಾಗಿರುವವನಿಗೆ ಹಾಲೇ ಜೀವನಾಧಾರ.

**ಉದರಿಗೆ ಪಥ್ಯಾಪಥ್ಯಗಳು**—ದುಷ್ಟದೋಷಸಂಘಾತ, ಅಗ್ನಿ ಮಾಂದ್ಯ ಮತ್ತು ಮಲಿನಾಹಾರಗಳಿಂದ ಉದರ ಸಂಭವಿಸುವುದು. ಆದುದ ರಿಂದ ತ್ರಿದೋಷ ಶಮನಮಾಡುವ ಔಷಧಾಹಾರಗಳನ್ನು ಕೊಡಬೇಕು. ಇವು ಲಘು ಮತ್ತು ದೀಪನಗಳಾಗಿರಬೇಕು. ಕೆಂಪುಶಾಲಿ, ಯವೆ, ಹೆಸರು, ಜಾಂಗಲ ದೇಶದ ಮೃಗಪಕ್ಷಿಗಳ ಮಾಂಸಗಳು ಶ್ರೇಷ್ಠವಾದುವು. ಹಾಲು, ಗೋಮೂತ್ರ, ಆಸವಾರಿಷ್ಟಗಳು, ಜೇನುತುಪ್ಪ, ಯೂಷ ಮುಂತಾದುವು ಹಿತವಾದುವು. ಗೋಮೂತ್ರದಲ್ಲಿ ಭಾವನೆಮಾಡಿರುವ ಷಷ್ಟಿಕ ಅಕ್ಕಿಯನ್ನು ಪಂಚಮೂಲ ಕ್ವಾಥದಲ್ಲಿ ಕುದಿಸಿ ಸ್ವಲ್ಪವೇ ಹುಳಿ, ಉಪ್ಪು, ತುಪ್ಪ ಮತ್ತು ಖಾರಗಳನ್ನೂ

ಹಾಲನ್ನೂ ಹಾಕಿ ಮಾಡಿದ ಯವಾಗುವನ್ನೂ ಮೇಲೆ ಕಬ್ಬಿನಹಾಲನ್ನೂ ಕುಡಿಸ ಬೇಕು.

ಉದರದಲ್ಲಿ ಹೆಚ್ಚು ಸಾಂದ್ರ ಅಥವಾ ಹೆಚ್ಚು ದ್ರವವಲ್ಲದ ತಕ್ರವು ಬಹು ಒಳ್ಳೆಯದು ಇದಕ್ಕೆ ವಾತೋದರಿಗೆ ಸ್ವಲ್ಪ ಹಿಪ್ಪಲಿ ಸೈಂಧವಲವಣಗಳನ್ನೂ, ಪಿತ್ತೋದರಿಗೆ ಮರಿಚ ಮತ್ತು ಸಕ್ಕರೆಗಳನ್ನೂ, ಕಫೋದರಿಗೆ ಖುರಾಸಾನಿ ವೋಮ, ಸೈಂಧವಲವಣ, ಜೀರಿಗೆ, ಜೇನುತುಪ್ಪ ಮತ್ತು ತ್ರಿಕಟುಗಳನ್ನೂ, ಸನ್ನಿಪಾತೋದರಿಗೆ ತ್ರಿಕಟು, ಯವಕ್ಷಾರ, ಸೈಂಧವಲವಣಗಳನ್ನೂ ಹಾಕಿ ಕುಡಿಸಬೇಕು. ಪ್ಲೀಹವೃದ್ಧಿಯಲ್ಲಿ ಮಧು, ತೈಲ, ವಚಾ, ಶುಂಠಿ, ಸಬ್ಬಸೀಗೆ ಬೀಜ, ಚಂಗಲ್ಕೋಷ್ಠ ಮತ್ತು ಸೈಂಧವಲವಣಗಳನ್ನು ಸೇರಿಸಿರುವ ತಕ್ರವನ್ನು ಕೊಡಬೇಕು. ಉದಕೋದರಿಗೆ ತ್ರಿಕಟುವನ್ನೂ, ಬದ್ಧೋದರಿಗೆ ನೀರುಹಬ್ಬೆ, ಖುರಾಸಾನಿವೋಮ, ಜೀರಿಗೆ ಮತ್ತು ಸೈಂಧವ ಇವುಗಳ ಚೂರ್ಣವನ್ನೂ, ಛಿದ್ರೋದರಿಗೆ ಹಿಪ್ಪಲಿಚೂರ್ಣ ಮತ್ತು ಜೇನುತುಪ್ಪಗಳನ್ನು ಹಾಕಿರುವ ತಕ್ರ ವನ್ನೂ ಕುಡಿಸಬೇಕು. ವಾತ ಮತ್ತು ಪಿತ್ತಗಳಲ್ಲಿ ಮಜ್ಜಿಗೆಯು ಸಿಹಿಯಾ ಗಿಯೂ, ಕಫದಲ್ಲಿ ವ್ಯಕ್ತಾಮ್ಲವಾಗಿಯೂ ಇರುವಂತೆ ಉಪಯೋಗಿಸಬೇಕು. ವಾತಕಫದಿಂದ ಗೌರವ, ಅರೋಚಕ, ಮಂದಾಗ್ನಿ ಅಥವಾ ಅತೀಸಾರವಿರುವ ವರಿಗೆ ತಕ್ರಪಾನವು ಪ್ರಾಣರಕ್ಷಣೆಮಾಡುವುದು.

ಶೋಥ, ಆನಾಹ, ತೃಟ್, ಮೂರ್ಛಾಪೀಡಿತರಿಗೆ ಒಂಟೆಹಾಲು ಪಥ್ಯ ವಾದುದು. ಕೋಷ್ಠ ಶುದ್ಧಿಯಾಗಿರುವವರಿಗೆ ಮತ್ತು ಬಲಹೀನರಾದವರಿಗೆ ಹಸುವಿನ ಹಾಲು, ಆಡಿನ ಹಾಲು ಮತ್ತು ಎಮ್ಮೆಹಾಲುಗಳು ಹಿತವಾದುವು.

ಅತಿಯಾಗಿ ಉಷ್ಣ,[೧] ಲವಣ, ಅಮ್ಲ, ರೂಕ್ಷ, ಗ್ರಾಹಿ, ಹಿಮ ಮತ್ತು ಗುರುವಾದ ಪದಾರ್ಥಗಳು ಉದರಿಗೆ ಅಪಥ್ಯವಾದುವು. ಬೆಲ್ಲ, ತೈಲದಿಂದ

---

೧. ಅತ್ಯರ್ಥೋಷ್ಣಾಮ್ಲಲವಣ ರೂಕ್ಷಂಗ್ರಾಹಿ ಹಿಮಂ ಗುರು ।
ಗುಡಂತೈಲಕೃತಂ ಶಾಕಂ ವಾರಿ ಪಾನಾವಗಾಹಯೋಃ ॥
ಆಯಾಸಾಧ್ವದಿವಾಸ್ವಪ್ನ ಯಾನಾನಿ ಚ ಪರಿತ್ಯಜೇತ್ ॥ ಅ. ಹೃ. ಚಿ. ೧೫.
ಉದರೀತು ಗುರ್ವಭಿಷ್ಯಂದಿರೂಕ್ಷ ವಿದಾಹಿ ಸ್ನಿಗ್ಧಪಿಶಿತಪರಿಷೇಕಾವ
ಗಾಹಾನ್ಪರಿಹರೇತ್ ।
ಶಾಲಿಷಷ್ಟಿಕಯವ ಗೋಧೂಮ ನೀವಾರಾನ್ನಿತ್ಯಮಶ್ನೀಯಾತ್ ॥ ಸು. ಚಿ. ೧೪.

ಮಾಡಿದ ತರಕಾರಿಯ ಅಡಿಗೆ, ಕುಡಿಯುವುದಕ್ಕೆ ಮತ್ತು ಸ್ನಾನಕ್ಕೆ ನೀರು, ಶ್ರಮದ ಕೆಲಸ, ಮಾರ್ಗಾಯಾಸ, ಹಗಲು ನಿದ್ದೆ ಮತ್ತು ವಾಹನಸಂಚಾರ ಇವೆಲ್ಲವನ್ನೂ ಉದರರೋಗಿಗಳು ತ್ಯಜಿಸಬೇಕು.

**ಉದರಕ್ಕೆ ಲೇಪಾದಿಗಳು**—ದೇವದಾರು, ಪಲಾಶಬೀಜ, ಅರ್ಕರಸ, ಗಜಹಿಪ್ಪಲಿ, ನುಗ್ಗೆರಸ ಮತ್ತು ಅಶ್ವಗಂಧಿಬೇರುಗಳನ್ನು ಅರೆದು ಗೋಮೂತ್ರ ದಲ್ಲಿ ಕಲಸಿ ಉದರದ ಮೇಲೆ ಲೇಪಿಸಬೇಕು. ಚೇಳುಬಾಲದ ಸೊಪ್ಪು (ವೃಶ್ಚಿ ಕಾಲೀ), ಬಜೆ, ಚಂಗಲ್ಕೋಷ್ಠ, ಮಹತ್ಪಂಚಮೂಲ, ಪುನರ್ನವಾ, ದೊಡ್ಡ ಕೊನ್ನಾರೀಗೆಡ್ಡೆ, ಶುಂಠಿ ಮತ್ತು ಧನಿಯಗಳನ್ನು ನೀರಿನಲ್ಲಿ ಕ್ವಾಥಮಾಡಿ ಬಿಸಿಯಾಗಿರುವಾಗಲೇ ಅದರಿಂದ ಉದರದ ಮೇಲ್ಭಾಗವನ್ನು ತೊಳೆಯಬೇಕು. ಪಲಾಶ, ಗಂಜಿಣೀಹುಲ್ಲು ಮತ್ತು ರಾಸ್ನೆಗಳ ಕ್ವಾಥವನ್ನಾದರೂ ಸೇಚನಕ್ಕಾಗಿ ಉಪಯೋಗಿಸಬಹುದು. ಉದರಿಗಳಿಗೆ ಎಂಟು ಬಗೆಯ ಮೂತ್ರಗಳೂ ಸೇಚನ ಮತ್ತು ಪಾನಗಳಿಗೆ ಒಳ್ಳೆಯದಾಗಿವೆ.

## ಸಂಗ್ರಹ

**ವಾತೋದರೇ**—ಬಲಿನಂ ಸ್ನಿಗ್ಧಸ್ವಿನ್ನಂ ಸ್ನೇಹೈರ್ವಿರೇಚಯೇತ್। ಪರಿಮ್ಲಾನ ಮುದರಂವಾಸಸಾವೇಷ್ಟಯೇತ್ । ದೋಷಾತಿಮಾತ್ರೋಪ ಚಯೇ ನಿತ್ಯಂ ವಿರೇಚಯೇತ್ । ಬಲಾರ್ಥಂ ಕ್ಷೀರಸಂಸ ರ್ಜನಂ। ಕ್ಷೀರೋತ್ಕ್ಲೇಶೇಮಂದಾಮ್ಲಲವಣಯೂಷಾರಸಾಃ। ಏಧಿತೇಗ್ನೌಸ್ನಿಗ್ಧಸ್ವಿನ್ನಸ್ಯಾಸ್ಥಾಪನಂ । ಸ್ಫುರಣಾಕ್ಷೇಪಕಾದಿ ಷ್ವನುವಾಸನವ್ । ಅವಿರೇಚ್ಯಸ್ಯ ಶಮನಂ—ಸರ್ಪಿಃಕ್ಷೀರ ಮಾಂಸರಸೌದನ್ಯೈಃ ।

**ಪಿತ್ತೋದರೇ**—ಬಲಿನಃ ಸ್ವಾದುಘೃತವಿರೇಚನಂ ನಿರೂಹಶ್ಚ । ನ್ಯಗ್ರೋಧಾದಿ ಸ್ನೇಹವಸ್ತಿಃ। ದುರ್ಬಲಸ್ಯಾನುವಾಸನಂ । ದೀಪ್ತೇ ಕ್ಷೀರಬಸ್ತಿಃ। ಸ್ನಿಗ್ಧೇ ರೇಚನಂ ತ್ರಿವೃತ್‌ಕ್ಷೀರೇಣ । ಕ್ಷೀರಪಾನಂ ವಸ್ತಿ ವಿರೇಚನಂ ಚ ।

**ಕಫೋದರೇ**—ಸ್ನಿಗ್ಧಸ್ವಿನ್ನಸ್ಯ ವಿರೇಚನಂ । ಕಟುಕ್ಷಾರಸಂಸರ್ಜನಂಕಫ ಕ್ರಮಶ್ಚ । ಮೂತ್ರವ್ಯೋಷತೈಲಾಢ್ಯನಿರೂಹಃ । ದುರ್ಬಲಸ್ಯ ಗೋಮೂತ್ರಾರಿಷ್ಟಚೂರ್ಣಾಯಸ್ಕೃತಿಪಾನಂ । ಸಕ್ಷಾರತೈಲ ಪಾನಮುಪನಾಹಾಶ್ಚ ।

**ಸಾನ್ನಿಪಾತಿಕೇ**—ತೀಕ್ಷ್ಣರೇಚನಂ, ವಿಷಪ್ರಯೋಗಃ, ಹೃತದೋಷೇ ಶೀತಾಂಬುಸ್ನಾನಂ, ಕ್ಷೀರಪಾನಂ, ನಿರಮ್ಲಲವಣಸ್ನೇಹ ಮೇಕಮಾಸಮನನ್ನಭುಕ್ । ಮಾಸಂ ಕಾರಭಂ ಪಯಃ । ಅನ ವಮವಾಸಾತ್ಸಾಮಾನ್ಯಪಥ್ಯಕ್ರಮಶ್ಚ ।

**ಪ್ಲೀಹೋದರೇ**—ವಾಮಬಾಹೌ ಸಿರಾಮೋಕ್ಷಣಂ, ರೋಹಿತಕಘೃತಂ ಷಟ್ಪಲಂವಾ, ಯಕೃದ್ದಾಲ್ಯೇಪ್ಯೇಷ ಏವ ದಕ್ಷಿಣಬಾಹೌ ಸಿರಾ ಮೋಕ್ಷಣಂ । ವರ್ಧಮಾನಪಿಪ್ಪಲೀ, ಕ್ಷಾರಾರಿಷ್ಟಾಃ । ವಾತ ಕಫೋಲ್ಬಣೇಽಗ್ನಿಕರ್ಮ । ಪೈತ್ತಿಕೇ ಜೀವನೀಯಘೃತಂ । ಕ್ಷೀರಬಸ್ತಯಃ । ಯೂಷೈರ್ಮಾಂಸರಸೈಶ್ಚಾಪಿ ಲಘೂನ್ಯನ್ನ ಪಾನಾನಿ ।

**ಬದ್ಧೋದರೇ**—ಸ್ವಿನ್ನಾಯತೀಕ್ಷ್ಣೌಷಧಾನ್ವಿತಂ ಸತೈಲಲವಣಂ ನಿರೂಹ ಮನುವಾಸನಂ । ತೀಕ್ಷ್ಣವಿರೇಚನಂ, ವಾತೋದಾವರ್ತ ಹರಣಂ ಚ ।

**ಛಿದ್ರೋದರೇ**—ಸ್ವೇದಂ ವಿನಾ ಕಫೋದರವತ್ । ಜಾತಂಜಾತಂ ಜಲಂ ಸ್ರಾವಯೇತ್ ।

**ಜಲೋದರೇ**—ಅಪಾಂ ದೋಷಹರಾಣಿ । ಮೂತ್ರಯುಕ್ತಾನಿ ತೀಕ್ಷ್ಣಾನಿ ವಿವಿಧಕ್ಷಾರವಂತಿಚ । ಅಶಾನ್ತೌ ಜಲಸ್ರಾವಣಂ । ಷಣ್ಮಾ ಸಾತ್ ಕ್ಷೀರಂ ತತಶ್ಚಾಲವಣಂಲಘುಭೋಜನಮ್ । ಸರ್ವತ್ರ ತಕ್ರೋಪಯೋಗಃ । ಸರ್ವೇಷು ವಮನಂ ನಿಷಿದ್ಧಮ್ ।

---

# ಶ್ವಯಥುನಿದಾನ

ಶರೀರದ ಯಾವ ಭಾಗವಾದರೂ ತನ್ನ ಪ್ರಮಾಣಕ್ಕಿಂತಲೂ ಹೆಚ್ಚಾದ ಆಕಾರವನ್ನು ಪಡೆದಿರುವುದಕ್ಕೆ **ಶ್ವಯಥು** ಎಂದು ಹೆಸರು. ಇದಕ್ಕೆ ಶೋಫ, ಶೋಥ ಮುಂತಾದ ಹೆಸರುಗಳೂ ಇವೆ.

ನಿಜ ಶೋಥವು ದೋಷಭೇದಗಳಿಂದ ಏಳು ಬಗೆ: (೧) ವಾತ, (೨) ಪಿತ್ತ, (೩) ಕಫ, (೪) ವಾತಪಿತ್ತ, (೫) ಪಿತ್ತಕಫ, (೬) ವಾತಶ್ಲೇಷ್ಮ ಮತ್ತು (೭) ಸನ್ನಿಪಾತ. ಆಗಂತುವು (೧) ಅಭಿಘಾತ ಮತ್ತು (೨) ವಿಷಜನ್ಯಗಳಿಂದು ಎರಡು ವಿಧ. ಒಟ್ಟು ಶೋಥವು ಒಂಬತ್ತು ವಿಧ.

**ಕಾರಣ**—ಪಂಚಕರ್ಮಗಳಲ್ಲಿ ಅಪಥ್ಯಮಾಡುವುದರಿಂದಲೂ, ಜ್ವರ, ಪಾಂಡು ಮುಂತಾದ ವ್ಯಾಧಿಗಳಿಂದ ಬಹಳವಾಗಿ ನರಳುವುದರಿಂದಲೂ, ಉಪ ವಾಸ, ವಿಷಮಭೋಜನಗಳಿಂದಲೂ, ಕ್ಷಾರ, ಅಮ್ಲ, ತೀಕ್ಷ್ಣ, ಉಷ್ಣ ಮತ್ತು ಗುರುಪದಾರ್ಥಗಳನ್ನು, ಮೊಸರು, ಪಕ್ವವಾಗದಿರುವ ತರಕಾರಿಗಳನ್ನು, ಮಣ್ಣು, ವಿರುದ್ಧಾಹಾರ, ದುಷ್ಟಾಹಾರ, ಗರ ಮಿಶ್ರಾಹಾರಗಳನ್ನು ಸೇವಿಸು ವುದರಿಂದಲೂ, ಅರ್ಶ, ನಿಶ್ಚೇಷ್ಟೆ (ವ್ಯಾಯಾಮ ಮಾಡದಿರುವುದು), ಶರೀರವನ್ನು ಆಗಾಗ್ಗೆ ವಮನಾದಿಗಳಿಂದ ಶುದ್ಧಿಮಾಡಿಕೊಳ್ಳದಿರುವುದರಿಂದಲೂ, ಮರ್ಮ ಗಳಿಗೆ ಪೆಟ್ಟು ಬೀಳುವುದರಿಂದಲೂ, ಅಕಾಲದಲ್ಲಿ ಅಥವಾ ಹೆಚ್ಚು ಕಡಿಮೆಯಾಗಿ ಪ್ರಸವವಾಗುವುದರಿಂದಲೂ ಶೋಥವುಂಟಾಗುವುದು.

**ಸಂಪ್ರಾಪ್ತಿ**—ಪ್ರಕುಪಿತ ವಾತವು ದುಷ್ಟವಾದ ರಕ್ತ, ಪಿತ್ತ ಮತ್ತು ಕಫ ಗಳನ್ನು ಶರೀರದ ಹೊರ ಸ್ರೋತಸ್ಸುಗಳಿಗೆ ಒಯ್ಯುವುದು. ಚರ್ಮ ಮತ್ತು ಮಾಂಸಗಳ ನಡುವೆ ರಕ್ತಪಿತ್ತ ಮತ್ತು ಕಫಗಳಿಂದ ಅಡ್ಡಗಟ್ಟಲ್ಪಟ್ಟ ವಾತವು ಮುಂದಕ್ಕೆ ಹೋಗದೆ ಅಲ್ಲಿಯೇ ನಿಲ್ಲುವುದರಿಂದ ಶೋಥ ಸಂಭವಿಸುವುದು.

**ಪೂರ್ವರೂಪ**—ಶೋಥವುಂಟಾಗುವ ಸ್ಥಳದಲ್ಲಿ ತಾಪ, ಸಿರೆಗಳ ವಿಸ್ತ ರಣ ಮತ್ತು ಮೈಭಾರ ಇವು ತೋರುವುವು.

**ಸಾಮಾನ್ಯ ಲಕ್ಷಣಗಳು**—ಅನವಸ್ಥಿತತ್ವವಾದ ಮೈಭಾರ, ಶೋಥದ ಭಾಗವು ಉಬ್ಬಿರುವುದು, ಬಿಸಿಯಾಗಿರುವುದು, ಸಿರೆಗಳು ತೆಳ್ಳಗಾಗುವುದು,

ರೋಮಾಂಚನ ಮತ್ತು ಬಣ್ಣ ವ್ಯತ್ಯಾಸ ಇವು ಎಲ್ಲಾ ಶೋಥಗಳಲ್ಲೂ ಇರುವುವು.

**ವಾತಶೋಥ**ದಲ್ಲಿ ಚರ್ಮವು ತೆಳ್ಳಗೂ, ಅಲ್ಲಾಡುವಂತೆಯೂ, ಒರಟಾಗಿಯೂ, ಕಪ್ಪಗೂ ಇರುವುದು. ಸ್ಪರ್ಶನಾಶ ಮತ್ತು ಜುಮುಗುಟ್ಟುವುದು, ಇದಕ್ಕಿದ್ದಂತೆ ಶೋಥ ತಗ್ಗುವುದು ಅಥವಾ ಉಬ್ಬುವುದು, ಒಂದು ಕಡೆ ಒತ್ತಿದರೆ ಅದರ ಮತ್ತೊಂದು ಕಡೆ ಉಬ್ಬುವುದು ಮತ್ತು ಹಗಲುವೇಳೆ ಶೋಥ ಹೆಚ್ಚಾಗಿರುವುದು ಇವು ವಾತಶೋಥದ ಲಕ್ಷಣಗಳು.

**ಪಿತ್ತಶೋಥವು** ಸ್ವಲ್ಪ ವಾಸನೆಯಿಂದ ಕೂಡಿರುವುದು; ಮೃದುವಾಗಿಯೂ, ಕಪ್ಪು ಅಥವಾ ಹೊಂಬಣ್ಣ ಇಲ್ಲವೆ ಕೆಂಪುಬಣ್ಣವಾಗಿಯೂ ಇರುವುದು. ಭ್ರಮ, ಜ್ವರ, ಮೈಬೆವರು, ಬಾಯಾರಿಕೆ, ಮದಗಳು, ಮುಟ್ಟಿದರೆ ಬಿಸಿ ಮತ್ತು ನೋವೂ ಇರುವುವು. ಕಣ್ಣು ಕೆಂಪೇರಿರುವುದು; ಶೋಥದಲ್ಲಿ ಉರಿ ಇರುವುದು.

**ಕಫಶೋಥವು** ಗುರುವಾಗಿಯೂ, ಸ್ಥಿರವಾಗಿಯೂ, ಬೆಳ್ಳಗೂ ಇರುವುದು ಅರೋಚಕ, ಪ್ರಸೇಕ, ನಿದ್ದೆ, ವಾಂತಿ ಮತ್ತು ಅಗ್ನಿಮಾಂದ್ಯಗಳಿರುವುವು. ನಿಧಾನವಾಗಿ ಉಬ್ಬುವುದು ಮತ್ತು ಬಹುಕಾಲದನಂತರ ತಗ್ಗುವುದು; ಒತ್ತಿದರೆ ಮತ್ತೊಮ್ಮೆ ಉಬ್ಬುವುದಿಲ್ಲ. ಇದು ರಾತ್ರಿಯಲ್ಲಿ ಹೆಚ್ಚಾಗಿರುವುದು.

ಮಿಶ್ರದೋಷಗಳಿಂದ ಮಿಶ್ರಲಕ್ಷಣಗಳಿರುವುವು.

ಅಭಿಘಾತದಿಂದಾದ ಶೋಥದಲ್ಲಿ ವಿಶೇಷವಾಗಿ ಪಿತ್ತಲಕ್ಷಣಗಳಿರುವುವು. ಶಸ್ತ್ರ, ಕಾಷ್ಠ, ಭಲ್ಲಾತಕ, ಕಪಿಕಚ್ಛು ಮುಂತಾದುವುಗಳಿಂದ ಅಭಿಘಾತವಾದರೆ ಒಂದು ಕಡೆಯಿಂದ ಮತ್ತೊಂದು ಕಡೆಗೆ ಹರಡುವ (ಹರಿಯುವ) ಶೋಥ ಸಂಭವಿಸುವುದು. ಇದು ಬಿಸಿಯಾಗಿಯೂ ಕೆಂಪಗೂ ಇರುವುದು.

ವಿಷಪ್ರಾಣಿಗಳು ಮೈಮೇಲೆ ಓಡಾಡುವುದರಿಂದಲೂ, ಅವುಗಳ ದಂತ, ನಖಾದಿಗಳಿಂದ ಅಭಿಘಾತವಾಗುವುದರಿಂದಲೂ, ವಿಣ್ಮೂತ್ರಾದಿಗಳ ಸ್ಪರ್ಶದಿಂದಲೂ ವಿಷಜಶೋಥವುಂಟಾಗುವುದು. ಇದು ಮೃದುವಾಗಿಯೂ, ಒತ್ತಿದರೆ ಆಡುವುದಾಗಿಯೂ, ಹರಡಿಕೊಂಡೂ ಇರುವುದು. ಜಾಗ್ರತೆಯಾಗಿ ಉರಿ ಮತ್ತು ನೋವುಗಳಾಗುವುವು.

**ಶೋಥದ ಉಪದ್ರವಗಳು**—ಶ್ವಾಸ, ಪಿಪಾಸ, ಛರ್ದಿ, ದೌರ್ಬಲ್ಯ, ಜ್ವರ ಮತ್ತು ಅರುಚಿ.

**ಸಾಧ್ಯಾಸಾಧ್ಯ**—ಉಪದ್ರವಗಳಿಲ್ಲದೆ ಹೊಸದಾಗಿ ಬಂದಿರುವ ಶೋಥವು ಸಾಧ್ಯ. ಪಾದಗಳಿಂದ ಮೇಲಕ್ಕೆ ಏರುತ್ತಿರುವ ಶೋಥವು ಪುರುಷನನ್ನೂ, ಮುಖದಿಂದ ಕೆಳಕ್ಕೆ ಹರಡುತ್ತಿರುವ ಶೋಥವು ಸ್ತ್ರೀಯನ್ನೂ ಕೊಲ್ಲುವುದು. ಮಧ್ಯಭಾಗದ ಶೋಥ, ಗಲ, ಮರ್ಮಗಳಲ್ಲಾದ ಶೋಥಗಳು, ಮಕ್ಕಳ ಮತ್ತು ಮುದುಕರ ಶೋಥಗಳು ಅಸಾಧ್ಯ.

## ಶ್ವಯಥುಚಿಕಿತ್ಸಾ

ಶರೀರದೋಷಗಳಿಂದ ಹುಟ್ಟಿದ ಶೋಥಕ್ಕೆ ನಿಜಶೋಥವೆಂದೂ, ಅಭಿಘಾತ ವಿಷ ಮುಂತಾದುವುಗಳಿಂದ ಹುಟ್ಟಿದ ಶೋಥಕ್ಕೆ ಆಗಂತುಶೋಥವೆಂದೂ ಹೆಸರು. ನಿಜಶೋಥವು ಆಶ್ರಯಭೇದದಿಂದ ಸರ್ವಾಂಗ, ಅರ್ಧಾಂಗ ಮತ್ತು ಏಕಾಂಗ (ಅವಯವಕ್ಕೆ ಸೇರಿದ್ದು) ಎಂದು ಮೂರು ಬಗೆ. ಆಗಂತುವನ್ನೂ ಹೀಗೆಯೇ ಪರಿಗಣಿಸಬಹುದು. ಶೋಥವನ್ನು ಆಮ ಮತ್ತು ನಿರಾಮವೆಂದು ಆಯಾ ಅವಸ್ಥೆಗೆ ತಕ್ಕಂತೆ ಎರಡು ವಿಧವಾಗಿ ಭಾವಿಸಿ ನಿಜದಲ್ಲಿ ಅಂತಃಪರಿಮಾರ್ಜನ ಮತ್ತು ಬಹಿಃಪರಿಮಾರ್ಜನಗಳಿಂದಲೂ, ಆಗಂತುವಿನಲ್ಲಿ ಕಾರಣಕ್ಕೆ ಅನುಸಾರವಾಗಿ ಅಭಿಘಾತವಾಗಿದ್ದರೆ ಉಪನಾಹ, ಶೋಧನಾದಿಗಳಿಂದಲೂ, ವಿಷಜನ್ಯವಿದ್ದರೆ ವಿಷಹರ ಪ್ರಯೋಗಗಳಿಂದಲೂ ಚಿಕಿತ್ಸಿಸಬೇಕು. ಇವುಗಳಲ್ಲೆಲ್ಲಾ ನಿದಾನ, ದೋಷ ಮತ್ತು ಕಾಲಗಳ ಬಲಾಬಲಗಳನ್ನರಿತು ಅವುಗಳಿಗೆ ವಿಪರ್ಯಯವಾದ ಕ್ರಮವನ್ನು ನಡೆಸಬೇಕು.

ಆಮದೋಷಯುಕ್ತವಾದ ರೋಗಿಗೆ ಲಂಘನ ಪಾಚನಗಳನ್ನು ಮಾಡಿಸಬೇಕು. ದೋಷಗಳು ಅಧಿಕವಾಗಿದ್ದರೆ ಶೋಧನಗಳಿಂದ ಎಂದರೆ ಶಿರೋಗತವಾದುದನ್ನು ಶಿರೋವಿರೇಚನದಿಂದಲೂ, ಆಮಾಶಯದಿಂದ ಮೇಲಿರುವುದನ್ನು ವಮನದಿಂದಲೂ, ಕೆಳಗಿರುವುದನ್ನು ವಿರೇಚನದಿಂದಲೂ ಹೋಗಲಾಡಿಸಬೇಕು. ಸ್ನಿಗ್ಧತೆಯಿಂದಾದುದನ್ನು ರೂಕ್ಷಣ ಕರ್ಮದಿಂದಲೂ, ರೂಕ್ಷತೆಯಿಂದಾದುದನ್ನು ಸ್ನೇಹನದಿಂದಲೂ ಗುಣಪಡಿಸಬೇಕು. ವಾತದಲ್ಲಿ ಮಲಬಂಧವಿದ್ದರೆ ನಿರೂಹ

ವಸ್ತಿಯನ್ನು ಕೊಡಬೇಕು. ವಾತ ಮತ್ತು ಪಿತ್ತಗಳೆರಡರಲ್ಲೂ ತಿಕ್ತಘೃತವನ್ನು ಕೊಡಬೇಕು. ಮೂರ್ಛೆ, ಸಂಕಟ, ಉರಿ, ಬಾಯಾರಿಕೆಗಳಲ್ಲಿ ಹಾಲನ್ನು ಕುಡಿಸಬೇಕು. ವಿರೇಚನ ಕೊಡಬೇಕಾಗಿದ್ದಲ್ಲಿ ಹಾಲು ಮತ್ತು ಗೋಮೂತ್ರ ಗಳೆರಡನ್ನೂ ಕೂಡಿಸಿ ಉಪಯೋಗಿಸಬೇಕು.

ಸರ್ವಾಂಗದಲ್ಲಿ ಹುಟ್ಟಿರುವ ನಿಜಶೋಥದಲ್ಲಿ ವಿಶೇಷತಃ ಆಮದೋಷ ಸೇರಿರುವಾಗ ರೋಗಿಗೆ ಸ್ವಲ್ಪವೇ ಊಟ ಮಾಡಿಸಿ ಬಿಸಿನೀರನ್ನು ಕುಡಿಸಬೇಕು. ದೋಷಪಾಚನ ಮಾಡುವುದಕ್ಕೋಸ್ಕರ ಅಳಲೆಕಾಯಿ, ಶುಂಠಿ ಮತ್ತು ಪುನರ್ನವಾಗಳ ಚೂರ್ಣ ಅಥವಾ ನವಾಯಸ[1] ಚೂರ್ಣವನ್ನು ಕೊಡಬೇಕು. ದೋಷವು ಹೆಚ್ಚಾಗಿದ್ದಲ್ಲಿ ಅದನ್ನು ಹೋಗಲಾಡಿಸುವುದಕ್ಕೆ ಗೋಮೂತ್ರಹರೀತಕಿಯನ್ನು ಕೊಡಬೇಕು. ಇದು ವಾತಾದಿ ಮೂರು ದೋಷಗಳನ್ನೂ ಹೋಗಲಾಡಿಸುವುದು. ಶುದ್ಧ ಗುಗ್ಗುಳು ಅಥವಾ ಗೋಮೂತ್ರ ಶಿಲಾಜತುವನ್ನು ಉಪಯೋಗಿಸುವುದರಿಂದಲೂ ವಾತಾದಿ ದೋಷಗಳು ಶಮನವಾಗುವುವು. ಅಗ್ನಿಮಾಂದ್ಯ, ಆಮದೋಷ, ಮೈಭಾರ, ಮಲ ಒಡಕು ಅಥವಾ ಮಲಬಂಧಗಳಿದ್ದರೆ ತಕ್ರಕ್ಕೆ ಸೌವರ್ಚಲ, ತ್ರಿಕಟು, ಜೇನುತುಪ್ಪ, ಬೆಲ್ಲ ಮತ್ತು ಅಳಲೆಕಾಯಿಗಳ ಚೂರ್ಣವನ್ನು ಸೇರಿಸಿ ಕುಡಿಸಬೇಕು. ಅಥವಾ ಬೆಲ್ಲ ಮತ್ತು ಶುಂಠಿಗಳನ್ನು ತಕ್ರದ ಅನುಪಾನದಲ್ಲಿ ಪ್ರಯೋಗಿಸಬಹುದು. ಸಮಭಾಗ ಹಸಿ ಶುಂಠಿ ಮತ್ತು ಬೆಲ್ಲಗಳನ್ನು ಸೇರಿಸಿ ಕಲ್ಕಮಾಡಿ ದಿನಕ್ಕೆ ಅರ್ಧಅರ್ಧ ಪಲದಂತೆ ಹೆಚ್ಚಿಸುತ್ತಾ ಐದು ಪಲಗಳಾಗುವವರೆಗೂ ಹೆಚ್ಚಿಸಿಕೊಂಡು ಇದೇ ಪ್ರಮಾಣವನ್ನು ಒಂದು ತಿಂಗಳವರೆಗೂ ಕೊಡುತ್ತಿರಬೇಕು. ಔಷಧವು ಜೀರ್ಣವಾದ ಮೇಲೆ ಹಾಲು, ಯೂಷ, ಹಾಲು ಅನ್ನ ಅಥವಾ ಮಾಂಸರಸಗಳನ್ನು ಉಪಯೋಗಿಸುವುದರಿಂದ ಶೋಥ, ಅರ್ಶಸ್ಸು, ಉದರ, ಗುಲ್ಮ ಮುಂತಾದುವು ಹೋಗುವುವು. ಹಸೀ ಶುಂಠಿ ಕಲ್ಕ ಮತ್ತು ಸ್ವರಸಗಳಿಗೆ ಹಾಲು ತುಪ್ಪಗಳನ್ನು

---

೧. ಶುಂಠಿ, ಹಿಪ್ಪಲಿ, ಮೆಣಸು, ತಿಗಡೆ, ಕಟುಕರೋಹಿಣಿ, ತ್ರಿಫಲಾ (ಅಳಲೆ, ತಾರೆ, ನೆಲ್ಲೀಕಾಯಿಗಳು) ಇವುಗಳ ಸಮಾಂಶ ಚೂರ್ಣಕ್ಕೆ ನಾಲ್ಕನೇ ಒಂದಂಶ ಲೋಹಭಸ್ಮವನ್ನು ಸೇರಿಸಬೇಕು. ಇದು ಕಫಶೋಥವನ್ನು ಹೋಗಲಾಡಿಸುತ್ತದೆ.

ಹಾಕಿ ಪಾಕಮಾಡಿದ ಘೃತವು ಅಗ್ನಿಹೀನತೆಯಿಂದಾದ ರೋಗಗಳನ್ನು ನಾಶ ಮಾಡುವುದು.

ನಿರಾಮದಲ್ಲಿ ಮಲಬಂಧವಿದ್ದರೆ ತ್ರಿಕಟು, ತಿಗಡೆ, ದಂತೀಮೂಲ ಮತ್ತು ಚಿತ್ರಕಗಳಿಂದ ಸಿದ್ಧಪಡಿಸಿದ ಕ್ಷೀರಪಾಕವನ್ನು ಕೊಡಬೇಕು. ಹಸು ಮತ್ತು ಎಮ್ಮೆಗಳ ಹಾಲು ಮತ್ತು ಮೂತ್ರಗಳನ್ನು ಕುಡಿಸಬಹುದು. ಹಾಲು ಅನ್ನವನ್ನು ತಿನ್ನಿಸಬೇಕು. ಒಂಟೆ ಹಾಲು ಬಹಳ ಶ್ರೇಷ್ಠವಾದುದು. ಚಿತ್ರಕ ಘೃತವನ್ನು[೧] ಉಪಯೋಗಿಸಬೇಕು.

**ಶೋಥರೋಗಿಗೆ ಪಥ್ಯಗಳು**—ದಶಮೂಲಕಷಾಯದಿಂದ ಮಾಡಿದ ಹಳೆಯವೆ ಮತ್ತು ಶಾಲಿಗಳ ಅನ್ನ; ಯವಕ್ಷಾರ ತ್ರಿಕಟುಗಳನ್ನು ಹಾಕಿರುವ ಹೆಸರು ಕಟ್ಟುಸಾರು, ಹುರುಳಿ ಕಟ್ಟುಸಾರು ಅಥವಾ ಕಡಲೆ ಕಟ್ಟುಸಾರು; ಜಾಂಗಲ ಮೃಗಪಕ್ಷಿ ಮಾಂಸ, ಆಮೆ, ಉಡ, ಮುಳ್ಳುಹಂದಿ ಮಾಂಸಗಳು ಹಿತವಾದುವು. ಹುಳಿ ಇಲ್ಲದಿರುವ ಮದ್ಯಕ್ಕೆ ಶೋಥಹರ ಔಷಧಿಗಳನ್ನು ಹಾಕಿ ಕುಡಿಸಬೇಕು. ಚಿತ್ರಕಘೃತ ಮತ್ತು ತಕ್ರಗಳನ್ನು ಅನ್ನಪೇಯಾದಿಗಳಿಗೆ ಹಾಕಿ ಕೊಡಬೇಕು. ಉಪ್ಪು ಮತ್ತು ಎಣ್ಣೆಗಳನ್ನು ಬಹಳ ಕಡಿಮೆ ಪ್ರಮಾಣಗಳಲ್ಲಿ ಕೊಡಬಹುದು. ಜೀವಂತಿ, ಅಜಮೋದ, ಕರ್ಪೂರ ಶುಂಠಿ, ಪುಷ್ಕರಮೂಲ, ಜೀರಿಗೆ, ಚಿತ್ರಮೂಲ, ಬಿಲ್ವದ ತಿರುಳು ಮತ್ತು ಹುಣಿಸೇಹಣ್ಣು ಇವು ಅರ್ಧ ಅರ್ಧ ಕರ್ಷಹಾಕಿ ಕಷಾಯ ಮಾಡಿ ಶೋಧಿಸಿ ಅದಕ್ಕೆ ಯವಕ್ಷಾರ ಮತ್ತು ತುಪ್ಪ ಎಣ್ಣೆಗಳ ಒಗ್ಗರಣೆಗಳನ್ನು ಹಾಕಿ ಮಾಡಿದ ಪೇಯವನ್ನು ಕುಡಿಸಬೇಕು. ಹೀಗೆಯೇ ಪಂಚಕೋಲ ಮತ್ತು ಅಗಳುಶುಂಠಿಕ್ವಾಥಕ್ಕೆ ಯವಕ್ಷಾರ ಮತ್ತು ಒಗ್ಗರಣೆಗಳನ್ನು ಹಾಕಿ ಕುಡಿಸಬಹುದು. ತರಕಾರಿಗಳಲ್ಲಿ ಸುವರ್ಚಲಾ (ಸೂರ್ಯಕಾಂತಿ ಎಲೆ), ಗೃಂಜನಕ (ಗರ್ಜರಗೆಡ್ಡೆ), ಪಡವಲ, ಗಣಿಕೆಸೊಪ್ಪು,

---

೧. ಚಿತ್ರಮೂಲದ ಕಲ್ಕವನ್ನು ಒಂದು ಮಡಕೆಯ ಒಳಭಾಗಕ್ಕೆ ಲೇಪಿಸಿ ಅದು ಒಣಗಿದ ಮೇಲೆ ಆ ಮಡಕೆಯಲ್ಲಿ ಹಾಲನ್ನು ಹೆಪ್ಪುಹಾಕಿ, ಕಡೆದು ಬೆಣ್ಣೆ ತುಪ್ಪಮಾಡಿ ಇದಕ್ಕೆ ಅದೇ ಮಜ್ಜಿಗೆ ಮತ್ತು ಚಿತ್ರಕ ಪ್ರತಿವಾಪವನ್ನು ಹಾಕಿ ಘೃತವನ್ನು ಸಿದ್ಧಪಡಿಸಬೇಕು. ಬೆಣ್ಣೆ ತೆಗೆದನಂತರ ನಿಂತ ಮಜ್ಜಿಗೆಗೆ ಚಿತ್ರಕ ತಕ್ರವೆಂದು ಹೆಸರು.

ಮೂಲಂಗಿ, ಬೆತ್ತದ ಚಿಗುರು, ಬೇವಿನ ಚಿಗುರುಗಳು ಹಿತವಾದುವು. ಅಡಕೆ ಪುಟ್ಟೆ, ಕೊಳವಳಿಕೆ, ಗರುಗದಸೊಪ್ಪು, ಹೊನಗೊನೆ ಸೊಪ್ಪುಗಳು ಶೋಥ ರೋಗಿಗೆ ಒಳ್ಳೆಯ ತರಕಾರಿಗಳು.

ಬಹಿಃಪರಿಮಾರ್ಜನೆಗಾಗಿ ವಾತಾಧಿಕ್ಯದಲ್ಲಿ ಕಲ್ಲುಹೂವು, ಚಂಗಲ್ಕೋಷ್ಠ, ಅಗಿಲು ಮುಂತಾದುವುಗಳಿಂದ ಸಿದ್ಧಪಡಿಸಿದ ತೈಲವನ್ನು ಹಚ್ಚಿ ಅದೇ ದ್ರವ್ಯಗಳ ನೀರಿನಿಂದ ಸ್ನಾನ ಮಾಡಿಸಬೇಕು. ಸ್ನಾನಕ್ಕೆ ಬೇವು, ಕೊಮ್ಮೆ, ಹೊಂಗೆ, ಎಕ್ಕದೆಲೆ ಕ್ವಾಥವನ್ನಾದರೂ ಉಪಯೋಗಿಸಬಹುದು. ಸ್ನಾನದನಂತರ ಸುಗಂಧದ್ರವ್ಯಗಳನ್ನು ಲೇಪಿಸಬೇಕು. ಏಕಾಂಗಶೋಥದಲ್ಲಿ ಕೊಮ್ಮೆ, ಕಣಿಗಲೆ, ಕೆಂಪು ಮುಳ್ಳುಮುತ್ತುಗ, ದಾಸವಾಳ್ಕೆ ಬೇರು ಇವುಗಳಿಂದ ಮಾಡಿದ ಸುಖೋಷ್ಣಲೇಪಗಳನ್ನು ಹಾಕಬೇಕು.

**ವಾತಶೋಥ**ದಲ್ಲಿ ಹದಿನೈದು ದಿನಗಳವರೆಗೆ ತ್ರಿವೃತ್ ಮತ್ತು ಎರಂಡ ತೈಲಗಳನ್ನು ಕುಡಿಸಬೇಕು. ಇದರಿಂದ ಮಲವಾತಗಳ ವಿಬಂಧಗಳು ಹೋಗುತ್ತವೆ. ಪ್ರಾತಃಕಾಲದಲ್ಲಿ ತ್ರಿವೃತ್ ಏರಂಡ ತೈಲಗಳನ್ನು ಹಾಲಿನೊಡನೆ ಅಥವಾ ಮಾಂಸರಸದೊಡನೆ ಕೊಡಬಹುದು. ವಾತಹರದ್ರವ್ಯಗಳಿಂದ ಸ್ವೇದಾಭ್ಯಂಗ ಲೇಪಗಳನ್ನು ಮಾಡಿಸಬೇಕು. ಏಕಾಂಗವಾತವಾಗಿದ್ದರೆ ಲೇಪಕ್ಕೆ ತಗ್ಗಿ, ಶುಂಠಿ, ನೆಗ್ಗಿಲು, ದೇವದಾರುಗಳನ್ನು ಚೂರ್ಣಿಸಿ ಮಾತುಲುಂಗ ರಸದಲ್ಲಿ ಅರೆದು ಉಪಯೋಗಿಸಬೇಕು.

**ಪಿತ್ತಶೋಥ**ದಲ್ಲಿ ತಿಕ್ತಘೃತ ಅಥವಾ ನ್ಯಗ್ರೋಧಾದಿ ಕ್ಷೀರಪಾಕವನ್ನು ಕುಡಿಸಬೇಕು. ಬಾಯಾರಿಕೆ, ಉರಿ ಮತ್ತು ಮೋಹಗಳಿದ್ದರೆ ಶೀತಲವಾದ ಲೇಪ, ಅಭ್ಯಂಗಗಳನ್ನು ಮಾಡಿಸಬೇಕು. ಪಟೋಲಮೂಲ, ಕಹಿದಸರಿ, ಅತಿಮಧುರ, ಕಟುಕರೋಹಿಣಿ, ಅಳಲೆಕಾಯಿ, ದೇವದಾರು, ಮರದರಿಸಿನ, ಶ್ರೀಗಂಧ, ದಂತಿ, ದಾಸವಾಳ್ಕೆಬೇರು, ನೀರುಹಬ್ಬೆ ಮತ್ತು ಹಿಪ್ಪಲಿ ಇವುಗಳ ಕ್ವಾಥಕ್ಕೆ ಸ್ವಲ್ಪ ತುಪ್ಪವನ್ನು ಹಾಕಿ ಕುಡಿಸುವುದರಿಂದ ಉರಿ, ಬಾಯಾರಿಕೆ ಮತ್ತು ತಲೆಸುತ್ತುವುದು ಇವೆಲ್ಲಾ ಗುಣವಾಗುವುವು.

ಬಹಿಃಪರಿಮಾರ್ಜನೆ ಮಾಡುವುದಕ್ಕೆ ಪಂಚವಲ್ಕಲಗಳು, ಮಂಜಿಷ್ಠೆ, ತಾವರೆದಂಟು, ಚಂದನ, ಪದ್ಮಕ, ಮುಡಿವಾಳ ಮತ್ತು ನಿರುವಂಜಿಗಳ

ಚೂರ್ಣದ ಲೇಪ, ತೈಲದಿಂದ ಅಭ್ಯಂಗಗಳನ್ನು ಮಾಡಿಸಬೇಕು. ತೈಲ ಹಚ್ಚಿ ಬಿಸಿಲಲ್ಲಿ ಕಾದ ನೀರು ಅಥವಾ ಚಂದನಾದಿ ಕ್ವಾಥ ಅಥವಾ ಪಂಚವಲ್ಕಲ ಕ್ವಾಥ ದಿಂದ ಸ್ನಾನ ಮಾಡಿಸಬೇಕು.

**ಶ್ಲೇಷ್ಮಶೋಥ**ದಲ್ಲಿ ಆರಗ್ವಧಾದಿ ತೈಲವನ್ನು ಕುಡಿಸಬೇಕು. ಸ್ರೋತಸ್ಸು ಗಳ ತಡೆಯಿಂದ ಅಗ್ನಿಮಾಂದ್ಯ, ಅರುಚಿ, ಮತ್ತು ಆಶಯಗಳಲ್ಲಿ ಸ್ಥೈಮಿತ್ಯ ಇವುಗಳಿದ್ದರೆ ಶೋಥಹರವಾದ ಕ್ಷಾರ, ಚೂರ್ಣ, ಆಸವ, ಗೋಮೂತ್ರ ಮತ್ತು ಮಜ್ಜಿಗೆಗಳನ್ನು ಉಪಯೋಗಿಸಬೇಕು. ಗಂಡೀರಾದ್ಯರಿಷ್ಟ, ಪುನರ್ನವಾದ್ಯರಿಷ್ಟ, ಪುನರ್ನವಾಷ್ಟಕ ಕ್ವಾಥ, ತ್ರಿಫಲಾದ್ಯರಿಷ್ಟಗಳು ಫಲಕಾರಿಯಾದುವು. ಪುನರ್ನ ವಾಷ್ಟಕವನ್ನು ಎಲ್ಲಾ ಬಗೆಯ ಶೋಥಗಳಲ್ಲೂ ಉಪಯೋಗಿಸಬಹುದು. ಚಿತ್ರಕ ತಕ್ರವನ್ನು ಕುಡಿಸಬೇಕು

ಲೇಪಕ್ಕೆ ಹಿಪ್ಪಲಿ, ಹಳೇ ಹಿಂಡಿ, ನುಗ್ಗೇಚೆಕ್ಕೆ, ಮರಳು, ಅಗಸೆಬೀಜ ಗಳನ್ನು ಉಪಯೋಗಿಸಬೇಕು. ಇವುಗಳನ್ನೇ ಗೋಮೂತ್ರದಲ್ಲಿ ಕಲ್ಕಮಾಡಿ ಬಿಸಿಯಾಗಿರುವಾಗಲೇ ಮೇಲೆ ಉಜ್ಜಬೇಕು. ಸ್ನಾನಕ್ಕೆ ಚಂಗಲ್ಕೋಷ್ಠ, ಅಗ್ನಿಮಂಥ ಮತ್ತು ಚಿತ್ರಕಗಳನ್ನು ಕ್ವಾಥಮಾಡಿ ಗೋಮೂತ್ರವನ್ನು ಸೇರಿಸಿ ಉಪಯೋಗಿಸಬೇಕು. ಹುರಳಿ, ಶುಂಠಿ, ಅಗಿಲುಗಳನ್ನು ಲೇಪಿಸಬಹುದು.

**ಏಕಾಂಗಶೋಥ**ದಲ್ಲಿ ಆಯಾಸ್ಥಳಕ್ಕೆ ತಕ್ಕಂತೆ ದೋಷಾನುಗುಣವಾಗಿ ರಕ್ತಮೋಕ್ಷಣ ಮುಂತಾದುವನ್ನು ಮಾಡಬೇಕು ಮಿಶ್ರದೋಷಗಳನ್ನು ಮಿಶ್ರಚಿಕಿತ್ಸೆಯಿಂದ ಸರಿಪಡಿಸಬೇಕು

**ಆಗಂತುಶೋಥ**ದಲ್ಲಿ ಕ್ಷತಚಿಕಿತ್ಸೆಯನ್ನೂ, ಶೋಧನವನ್ನೂ ಮಾಡಿಸ ಬೇಕು. ರಕ್ತಸ್ರಾವ, ಘೃತಲೇಪ, ಸ್ವೇದ ಮತ್ತು ವಿರೇಚನಗಳನ್ನುಪಯೋಗಿಸ ಬೇಕು

**ಶೋಥರೋಗಿಗೆ ಅಪಥ್ಯಗಳು**—ಒರಟು ಆಹಾರ, ನೀರಿನಲ್ಲಿರುವ ಮತ್ತು ಅನೂಪದೇಶದಲ್ಲಿರುವ ಪ್ರಾಣಿಮಾಂಸ, ಒಣಗಿದ ತರಕಾರಿ, ಹೊಸ ಅಕ್ಕಿ ಅನ್ನ, ಬೆಲ್ಲ ಮತ್ತು ಪಿಷ್ಟಗಳು ಸೇರಿರುವ ಪದಾರ್ಥಗಳು, ಮೊಸರು, ಉಪ್ಪು, ಜೀರ್ಣವಾಗದ ಗಟ್ಟಿಪದಾರ್ಥಗಳು, ಹುಳಿಮದ್ಯ, ಒಣಗಿದ ಮಾಂಸ, ಸಮಶನ, ಗುರು, ಅಸಾತ್ಮ್ಯ ಮತ್ತು ವಿದಾಹಿಕರ ಆಹಾರಗಳು, ಹಗಲು ನಿದ್ದೆ ಮತ್ತು ಮೈಥುನಗಳು ಅಪಥ್ಯವಾದುವು.

## ಶ್ವಯಥು

### ಆಮ

ಲಂಘನಂ, ಪಾಚನಂ ।
ಸರ್ವಾಂಗಗೇ ಸಾಮೇಲಂಘನಮುಷ್ಣೋದಕಂ ।
ಪಾಚನಾಯ ಶುಂಠೀಹರೀತಕೀ, ನವಾಯಸಯಂವಾ ।

### ನಿರಾಮ

ದೋಷಾಧಿಕ್ಯೇ
- ಶಿರೋಗತೇ ಶಿರೋ ವಿರೇಚನಮ್ ।
- ಊರ್ಧ್ವಜೇ ವಮನಮ್ ।
- ಅಧೋಜೇ ವಿರೇಚನಮ್ ।

ಸ್ನೇಹಜೇ ರೂಕ್ಷಣಮ್ ।
ರೂಕ್ಷಜೇ ಸ್ನೇಹಃ ।
ವಾತಿಕೇವಿಬಂಧೇ ನಿರೂಹಃ, ತ್ರಿವೃದೇರಂಡ ತೈಲಂ ಸಕ್ಷೀರಮ್ । ಸ್ವೇದಾಭ್ಯಂಗಲೇಪಾಃ ।
ವಾತೇಪಿತ್ತೇಚ ತಿಕ್ತಘೃತಮ್ ।
ಪೈತ್ತಿಕೇ ಮೂರ್ಛಾದಿಷು ಕ್ಷೀರಪಾನಮ್ ।
ಗೋಮೂತ್ರಕ್ಷೀರರೇಚನಂ । ಶೀತಾಲೇಪಾಭ್ಯಂಗಾಃ ।
ಕಫಶ್ವಯಥೌ ಆರಗ್ವಧಾದಿಘೃತಮ್ ।
ವಿಬಂಧೇಮಂದೇನಲೇಽರುಚೌಕ್ಷಾರಚೂರ್ಣ ಸವಾರಿಷ್ಟ ಮೂತ್ರತಕ್ರಾಣಿ, ಗೋಮೂತ್ರ ಹರೀತಕೀ ।
ಅತಸೀಶಿಗ್ರುಪಿಣ್ಯಾಕಲೇಪಃ ।

# ಪ್ರಮೇಹನಿದಾನ

ಶರೀರದ ಪೋಷಕದ್ರವ್ಯಗಳು ಜೀರ್ಣವಾಗದೇ ಮೇಹನಮಾರ್ಗದಲ್ಲಿ ವಿಶೇಷವಾಗಿ ಹೋಗುವುದಕ್ಕೆ **ಪ್ರಮೇಹ**ವೆಂದು ಹೆಸರು.

**ಕಾರಣಗಳು**—ಯಾವಾಗಲೂ ಸುಖಾಸನ ಶಯ್ಯೆಗಳಲ್ಲೇ ಕಾಲ ಕಳೆಯುವುದು, ಮೊಸರು, ಪರಿಷ್ಕಾರವಾಗದಿರುವ ಜಲಚರ ಮತ್ತು ಆನೂಪ ಪ್ರಾಣಿಗಳ ಮಾಂಸ, ಹಾಲು, ತುಪ್ಪ, ಹೊಸ ಧಾನ್ಯ, ಹೊಸ ನೀರು, ಹೊಸ ಮದ್ಯ ಮತ್ತು ಬೆಲ್ಲದಿಂದ (ಸಕ್ಕರೆಯಿಂದ) ಮಾಡಿದ ಪದಾರ್ಥಗಳನ್ನು ವಿಶೇಷವಾಗಿ ಸೇವಿಸುವುದು ಇವುಗಳಿಂದ ಪ್ರಮೇಹವುಂಟಾಗುವುದು.

**ಸಂಪ್ರಾಪ್ತಿ**—ಮೇಲೆ ಹೇಳಿದ ಕಾರಣಗಳಿಂದ ಶರೀರದಲ್ಲಿ ಕಫವು ಅತಿಯಾಗಿ ವೃದ್ಧಿಹೊಂದಿ ಮೇದಸ್ಸು ಮತ್ತು ಮಾಂಸಗಳ ಸಾರಗಳನ್ನೂ, ಧಾತುಗಳಲ್ಲಿರುವ ಇತರ ದ್ರವಪದಾರ್ಥಗಳನ್ನೂ ಬಸ್ತಿಯಲ್ಲಿ ಸೇರಿಸಿ ಮೂತ್ರರೂಪದಲ್ಲಿ ಹೊರಗೆ ಹೋಗುತ್ತದೆ. ಉಷ್ಣವೀರ್ಯ ದ್ರವ್ಯಗಳನ್ನು ಸೇವಿಸುವುದರಿಂದ ಪಿತ್ತವು ಪ್ರಕೋಪಹೊಂದಿ ಮೇದಸ್ಸು ಮುಂತಾದುವನ್ನು ದೂಷಿಸಿ ಅವುಗಳ ಸಾರಗಳನ್ನು ಮೂತ್ರಮಾರ್ಗವಾಗಿ ಹೊರಡಿಸುವುದು. ಶರೀರದಲ್ಲಿ ಪಿತ್ತಕಫಗಳು ಕ್ಷೀಣವಾಗುತ್ತಿರಲಾಗಿ ವಾತವು ಪ್ರಕೋಪಹೊಂದಿ ಧಾತುಗಳನ್ನು ಕೆಡಿಸಿ ವಾತಮೇಹವನ್ನುಂಟುಮಾಡುವುದು. ಕಫದಿಂದ ಹತ್ತು, ಪಿತ್ತದಿಂದ ಆರು ಮತ್ತು ವಾತದಿಂದ ನಾಲ್ಕು ಎಂಬುದಾಗಿ ಪ್ರಮೇಹವು ಒಟ್ಟು ಇಪ್ಪತ್ತು ಪ್ರಕಾರ.

ಕಫಪ್ರಮೇಹದಲ್ಲಿ ದೋಷದೂಷ್ಯಗಳೆರಡೂ ಸಮಾನ ಚಿಕಿತ್ಸೆಯಿಂದ ಸಾಧ್ಯವಾಗುವುವು. ಪಿತ್ತಪ್ರಮೇಹದಲ್ಲಿ ದೋಷದೂಷ್ಯಗಳಿಗೆ ವಿಷಮ ಚಿಕಿತ್ಸೆಯನ್ನು ನಡೆಸಬೇಕಾಗಿರುವುದರಿಂದ ಯಾಪ್ಯ, ಪಿತ್ತಹರಗಳಾದ ಮಧುರ, ಘೃತಗಳು ಮೇದಸ್ಸನ್ನು ಹೆಚ್ಚಿಸುವುವು. ಮೇದಸ್ಸನ್ನು ಕಡಿಮೆ ಮಾಡುವ ಕಟುರಸ ಮುಂತಾದುವು ಪಿತ್ತವನ್ನು ಹೆಚ್ಚಿಸುವುವು. ವಾತಮೇಹದಲ್ಲಿ ಮಜ್ಜಾಶುಕ್ರಗಳ ಸಾರಗಳೂ ಸಹ ನಷ್ಟವಾಗುತ್ತಿರುವುದರಿಂದ ಬಹಳ ಗಂಭೀರ ಧಾತುಗಳಲ್ಲಿರುವ ದುಷ್ಟವಾತವನ್ನು ಸರಿಪಡಿಸುವುದು ಕಷ್ಟಸಾಧ್ಯ.

**ದೋಷ ಮತ್ತು ದೂಷ್ಯಗಳು**—ಕಫ, ಪಿತ್ತ ಮತ್ತು ವಾತಗಳು ದೋಷಗಳು; ಮೇದಸ್ಸು, ರಕ್ತ, ಶುಕ್ರ, ರಸ, ವಸಾ, ಲಸೀಕಾ, ಮಜ್ಜಾ, ಓಜಸ್ಸು ಮತ್ತು ಮಾಂಸಗಳು ದೂಷ್ಯಗಳು.

**ಪೂರ್ವರೂಪಗಳು**—ಹಲ್ಲು, ಉಗುರು, ನಾಲಿಗೆ, ತಾಲು, ಗಲ, ಕಣ್ಣು, ಕಿವಿ ಮುಂತಾದ ಸ್ಥಳಗಳಲ್ಲಿ ಹೆಚ್ಚಾಗಿ ಕೊಳೆಸೇರುತ್ತಿರುವುದು, ಕೈಕಾಲುಗಳಲ್ಲಿ ಉರಿ, ಚರ್ಮವು ಜಿಗುಟಾಗಿಯೂ, ಮೈ ಭಾರವಾಗಿಯೂ ತೋರುವುದು, ಶ್ವಾಸವು ದುರ್ಗಂಧವಾಗಿರುವುದು, ತೂಗಡಿಕೆ, ದೌರ್ಬಲ್ಯ, ಬಾಯಾರಿಕೆ, ಕೂದಲು ತಿರಿಗಟ್ಟುವುದು, ಕೇಶ ಮತ್ತು ನಖಗಳು ಅಭಿವೃದ್ಧಿಯಾಗುವುದು —ಇವು ಪ್ರಮೇಹದ ಪೂರ್ವರೂಪಗಳು.

**ಸಾಮಾನ್ಯ ಲಕ್ಷಣ**—ಮೂತ್ರವು ಹೆಚ್ಚಾಗಿ ವಿಸರ್ಜನೆಯಾಗುವುದು ಮತ್ತು ಕೊಳೆಯಾಗಿರುವುದು ಇವು ಎಲ್ಲಾ ಮೇಹಗಳಲ್ಲೂ ಸಾಮಾನ್ಯವಾಗಿರುವುವು. ದೋಷ ಮತ್ತು ದೂಷ್ಯಗಳ ಸಂಸರ್ಗಗಳಿಂದ ವಿಶೇಷವಾಗಿ ಆಯಾ ಮೇಹದಲ್ಲಿ ಬೇರೆಬೇರೆ ಲಕ್ಷಣಗಳು ಕಂಡುಬರುತ್ತವೆ. ಮೂತ್ರದ ಪ್ರಮಾಣ, ವರ್ಣ, ಆಕೃತಿ ಮುಂತಾದುವುಗಳಿಂದ ಪ್ರಮೇಹಗಳಿಗೆ ಪ್ರತ್ಯೇಕ ಹೆಸರುಗಳು ಬಂದಿವೆ.

ನೀರಿನಂತೆ ತಣ್ಣಗೆ, ನಿರ್ಗಂಧವಾಗಿ ಆದರೆ ಸ್ವಲ್ಪವೇ ಕೊಳೆ ಮತ್ತು ಪೈಚ್ಛಿಲ್ಯಗಳಿಂದ ಹೆಚ್ಚಾಗಿ ಮೂತ್ರವಿಸರ್ಜನೆಯಾಗುತ್ತಿದ್ದರೆ **ಉದಕಮೇಹ**ವೆಂದೂ, ಕಬ್ಬಿನ ಹಾಲಿನಂತೆ ಸಿಹಿಯಾಗಿ ಮೂತ್ರವು ಹೋಗುತ್ತಿದ್ದರೆ **ಇಕ್ಷುಮೇಹ**ವೆಂದೂ, ಅಕ್ಕಿತೊಳೆದ ನೀರಿನಂತೆ ಅಥವಾ ಹಿಟ್ಟುಕಲಸಿದ ನೀರಿನಂತಿದ್ದರೆ **ಪಿಷ್ಟಮೇಹ**ವೆಂದೂ, ಸಾಂದ್ರವಾಗಿದ್ದರೆ **ಸಾಂದ್ರಮೇಹ**ವೆಂದೂ, ಮದ್ಯದಂತಿದ್ದರೆ **ಸುರಾಮೇಹ**ವೆಂದೂ, ಶುಕ್ರದಂತೆಯೂ ಶುಕ್ರಮಿಶ್ರವಾಗಿಯೂ ಇದ್ದರೆ **ಶುಕ್ರಮೇಹ**ವೆಂದೂ, ಮರಳಿನಂತೆ ಮೂರ್ತಮತ್ತಾದ ಕೊಳೆಗಳಿದ್ದರೆ **ಸಿಕತಾಮೇಹ**ವೆಂದೂ, ತಣ್ಣೀರಿನಂತೆಯೂ, ಹೆಚ್ಚಾಗಿಯೂ ಮಧುರವಾಗಿ ವಿಸರ್ಜನೆಯಾಗುತ್ತಿದ್ದರೆ **ಶೀತಮೇಹ**ವೆಂದೂ, ಮೆಲ್ಲಮೆಲ್ಲನೆ ಮಂದವಾಗಿರುವ ಮೂತ್ರವು ಹೋಗುತ್ತಿದ್ದರೆ **ಶನೈರ್ಮೇಹ**ವೆಂದೂ, ಜೊಲ್ಲಿನಂತೆ ತಂತುಮತ್ತಾಗಿದ್ದರೆ **ಲಾಲಾಮೇಹ**ವೆಂದೂ ಕಫದ ಹತ್ತು ವಿಧ ಪ್ರಮೇಹಗಳನ್ನು ತಿಳಿಯಬೇಕು.

ಕ್ಷಾರಕ್ಕೆ ಸಮಾನ ಗಂಧವರ್ಣ, ರಸ ಮತ್ತು ಸ್ಪರ್ಶಗಳಿಂದ ಕೂಡಿರುವ ಮೂತ್ರವಿದ್ದರೆ **ಕ್ಷಾರಮೇಹ**ವೆಂದೂ, ನೀಲವರ್ಣವಿದ್ದರೆ **ನೀಲಮೇಹ**ವೆಂದೂ, ಕಪ್ಪುವರ್ಣವಿದ್ದರೆ **ಕಾಲಮೇಹ**ವೆಂದೂ, ಅರಿಸಿನ ಬಣ್ಣ ಮತ್ತು ಕಟುರಸಗಳಿಂದಿದ್ದರೆ **ಹಾರಿದ್ರಮೇಹ**ವೆಂದೂ, ಮಂಜಿಷ್ಠೆಯ ಬಣ್ಣ ಮತ್ತು ದುರ್ಗಂಧಗಳಿದ್ದರೆ **ಮಂಜಿಷ್ಠಮೇಹ**ವೆಂದೂ, ದುರ್ಗಂಧವಾಗಿಯೂ, ಕೆಂಪಗೂ, ಬಿಸಿಯಾಗಿಯೂ, ಲವಣರಸದಿಂದ ಮೂತ್ರ ಹೋಗುತ್ತಿದ್ದರೆ **ರಕ್ತಮೇಹ**ವೆಂದೂ ಪಿತ್ತದೋಷದಿಂದಾಗುವ ಆರು ಪ್ರಮೇಹಗಳನ್ನು ತಿಳಿಯಬೇಕು.

ಮೂತ್ರವು ವಸಾಮಿಶ್ರವಾಗಿ ಅಥವಾ ವಸೆಯುಂತಿದ್ದರೆ **ವಸಾಮೇಹ** (ಸರ್ಪಿಮೇಹ)ವೆಂದೂ, ಮಜ್ಜದಂತೆ ಅಥವಾ ಮಜ್ಜಮಿಶ್ರವಾಗಿದ್ದರೆ **ಮಜ್ಜಾಮೇಹ**ವೆಂದೂ ಹೆಸರು. ಇವೆರಡರಲ್ಲೂ ಮೂತ್ರವೇಗವು ಬಾರಿಬಾರಿಗೂ ಉಂಟಾಗುವುದು. ಒಗರು ಮತ್ತು ಸಿಹಿರಸಗಳಿಂದಲೂ ರೂಕ್ಷತೆಯಿಂದಲೂ ಮೂತ್ರವು ಹೋಗುತ್ತಿದ್ದರೆ **ಕ್ಷೌದ್ರಮೇಹ**ವೆಂದೂ, ಒಂದೇ ಸಮನಾಗಿ (ವಿರಾಮವಿಲ್ಲದೆ) ವೇಗವೇ ತಿಳಿಯದಂತೆ ಮೂತ್ರ ಹೋಗುತ್ತಿದ್ದರೆ **ಹಸ್ತಿಮೇಹ**ವೆಂದೂ ಹೆಸರು. ಈ ನಾಲ್ಕು ವಾತದಿಂದಾಗುವ ಪ್ರಮೇಹಗಳು.

**ಉಪದ್ರವಗಳು**—ಅಜೀರ್ಣ, ಅರುಚಿ, ಛರ್ದಿ, ನಿದ್ದೆ, ಕಾಸ ಮತ್ತು ಪೀನಸ ಇವು ಕಫಜಪ್ರಮೇಹಗಳ ಉಪದ್ರವಗಳು. ಬಸ್ತಿ, ಮೇಹನಗಳಲ್ಲಿ ತೋದ, ಮುಷ್ಕಾವದರಣ, ಜ್ವರ, ದಾಹ, ತೃಷ್ಣಾ, ಅಮ್ಲೋದ್ಗಾರ (ಹುಳಿತೇಗು), ಮೂರ್ಛೆ ಮತ್ತು ವಿಡ್ಭೇದ ಇವು ಪಿತ್ತಪ್ರಮೇಹಗಳ ಉಪದ್ರವಗಳು. ಉದಾವರ್ತ, ಕಂಪ, ಹೃದ್ಗ್ರಹ, ಚಪಲಚಿತ್ತತೆ, ಶೂಲ, ನಿದ್ರಾನಾಶ, ಶೋಷ, ಶುಷ್ಕಕಾಸ ಮತ್ತು ಶ್ವಾಸಗಳು ವಾತಪ್ರಮೇಹಗಳ ಉಪದ್ರವಗಳು. ಪ್ರಮೇಹದಲ್ಲಿ ಧಾತುಗಳು ಬಹುವಾಗಿ ನಷ್ಟವಾಗುವುದರಿಂದ ಹಳೆಯದಾದ ನಂತರ ಪಿಟಿಕೆಗಳು ಹುಟ್ಟುವುವು. ಶರಾವಿಕಾದಿ ಹತ್ತು ಪಿಟಿಕೆಗಳನ್ನು ಅವುಗಳ ಲಕ್ಷಣಗಳಿಂದ ತಿಳಿಯಬಹುದು. ಇವೂ ಸಹ ಉಪದ್ರವಗಳು. ಪಿಟಿಕೆಗಳು ಉತ್ಪತ್ತಿಯಾದ ಪ್ರಮೇಹವೂ, ಸಹಜವಾದ ಪ್ರಮೇಹವೂ ಅಸಾಧ್ಯ. ವಂಶಪರಂಪರೆಯಾದ ಎಲ್ಲಾ ವಿಕಾರಗಳೂ ಅಸಾಧ್ಯ.

ಎಲ್ಲಾ ಪ್ರಮೇಹಗಳೂ ಸಕಾಲದಲ್ಲಿ ಗುಣವಾಗದಿದ್ದರೆ ಕೊನೆಗೆ **ಮಧು ಮೇಹ**ವಾಗಿ ಪರಿಣಮಿಸುವುವು. ಮೂತ್ರವು ಜೇನುತುಪ್ಪದಂತೆ ಇರುವುದ ರಿಂದ ಇದಕ್ಕೆ ಮಧುಮೇಹವೆಂದು ಹೆಸರು ಬಂದಿದೆ.

**ಮಧುಮೇಹವು ಎರಡು ಕಾರಣಗಳಿಂದ ಬರುವುದು**—(೧) ಧಾತುಗಳು ಕ್ಷೀಣವಾಗಿ ವೃದ್ಧಿಹೊಂದಿದ ವಾತವು ಪಿತ್ತ ಕಫಗಳಿಂದ ದುಷ್ಟ ವಾದ ಸ್ರೋತಸ್ಸುಗಳನ್ನು ಸೇರಿ ಮಧುಮೇಹವನ್ನುಂಟುಮಾಡುವುದು. ಇಲ್ಲಿ ಕೇವಲ ವಾತಲಕ್ಷಣಗಳೇ ಇರುವುವು. (೨) ಕಫಪಿತ್ತಗಳು ವೃದ್ಧಿಹೊಂದಿ ವಾತವನ್ನಾವರಿಸಿ ಮಧುಮೇಹವನ್ನುಂಟುಮಾಡುವುವು. ಒಂದು ಸಲ ಶರೀರ ಕ್ಷೀಣವಾದಂತೆಯೂ ಮತ್ತೊಂದು ಸಲ ಪುಷ್ಟಿಯಾದಂತೆಯೂ ಅಕಸ್ಮಾತ್ತಾಗಿ ತೋರುವುದರಿಂದ ಇದು ಕೃಚ್ಛ್ರಸಾಧ್ಯ. ಜೇನುತುಪ್ಪದಂತೆ ಮೂತ್ರ ವಿಸರ್ಜನೆ ಯಾಗುವುದು, ಶರೀರವೆಲ್ಲವೂ ಮಧುರವಾಗಿರುವುದು ಇದರ ಲಕ್ಷಣಗಳು.

ಗುಹ್ಯ, ಹೃದಯ, ಶಿರಸ್ಸು, ಬೆನ್ನು ಮತ್ತು ಮರ್ಮಗಳಲ್ಲಿ ಹುಟ್ಟಿದ ಪಿಟಿಕೆಗಳನ್ನೂ ಉಪದ್ರವಗಳಿಂದ ಕೂಡಿದ ಪಿಟಿಕೆಗಳನ್ನೂ ತ್ಯಜಿಸಬೇಕು.

## ಪ್ರಮೇಹಚಿಕಿತ್ಸಾ

ಪ್ರಮೇಹಿಗಳಲ್ಲಿ ಸ್ಥೂಲ ಮತ್ತು ಬಲಿಷ್ಠರಾಗಿರುವವರು ಒಂದು ವಿಧ; ಕೃಶ ಮತ್ತು ದುರ್ಬಲರಾಗಿರುವವರು ಮತ್ತೊಂದು ವಿಧ. ದೋಷ ಹೆಚ್ಚಾ ಗಿರುವ ಬಲಿಷ್ಠನಿಗೆ ಶೋಧನಚಿಕಿತ್ಸೆಯನ್ನೂ, ಕೃಶನಿಗೆ ಬೃಂಹಣಚಿಕಿತ್ಸೆ ಯನ್ನೂ ನಡೆಸಬೇಕು. ಶೋಧನ ಮಾಡಿಸಬೇಕಾದರೆ ಮೊದಲು ಸ್ನೇಹನ ಮಾಡಿಸಿ ಸಿದ್ಧವಮನವಿರೇಚನ ಯೋಗಗಳನ್ನು ಕೊಡಬೇಕು. ಸರ್ಷಪ, ನಿಂಬ, ದಂತೀ, ಕರಂಜ ಮುಂತಾದುವನ್ನು ಶೋಧನೆಗಾಗಿ ಕೊಡಬಹುದು. ಊರ್ಧ್ವ ಮತ್ತು ಅಧೋಮಾರ್ಗಗಳು ಶುದ್ಧವಾದನಂತರ ಆ ಮೇಹಿಗೆ ಸಂತರ್ಪಕಗಳನ್ನು ಉಪಯೋಗಿಸಬೇಕು. ಏಕೆಂದರೆ ಶೋಧನದನಂತರ ಅವನಲ್ಲಿ ವಾತವೃದ್ಧಿಯಾಗಿ ಗುಲ್ಮ, ಕ್ಷಯ, ಮೂತ್ರಗ್ರಹ, ಮೇಹನ ಮತ್ತು ಬಸ್ತಿಶೂಲೆಗಳು ಸಂಭವಿಸುವುದುಂಟು. ಇವನ್ನು ತಡೆಗಟ್ಟಲು ಅವನ ಅಗ್ನಿ ಬಲಕ್ಕೆ ತಕ್ಕಂತೆ ಯವೆ, ಗೋಧೂಮ ಮುಂತಾದ ಹಳೇ ಧಾನ್ಯಗಳಿಂದ

ಮಾಡಿದ ಸಕ್ತು, ಮಂಥ ಇವುಗಳನ್ನು ಕೊಡಬೇಕು. ಶೋಧನಕರ್ಮಗಳಿಗೆ ಅರ್ಹನಾಗಿಲ್ಲದಿರುವ ರೋಗಿಗೆ ಶಮನ ಚಿಕಿತ್ಸೆಯನ್ನು ನಡೆಸಬೇಕು. ಇದಕ್ಕಾಗಿ ಸುಲಭವಾಗಿ ಜೀರ್ಣವಾಗುವಂತೆ ಕಷಾಯಗಳಿಂದ ಭಾವನೆ ಮಾಡಿರುವ ಧಾನ್ಯಗಳ ಭಕ್ಷ್ಯಗಳು, ಮಂಥ, ಅರಳು ಹಿಟ್ಟುಗಳು ಹಿತ ವಾದುವು. ಹೀಗೆಯೇ ಜಾಂಗಲದೇಶದ ವಿಷ್ಕಿರ (ಕಾಲಿಂದ ಕೆರೆದು ಆಯ್ದು ತಿನ್ನುವ ಪ್ರಾಣಿ—ಕೋಳಿ, ನವಿಲು), ಪ್ರತುದಾ (ಕೊಕ್ಕಿಂದ ಕುಕ್ಕಿ ತಿನ್ನುವ —ಗುಬ್ಬಚ್ಚಿ, ಬಾತು) ಮುಂತಾದ ಹಕ್ಕಿಗಳ ಮಾಂಸರಸಗಳನ್ನು ಮನಸ್ಸಿಗೆ ಹಿತವಾಗಿರುವಂತೆ ರುಚಿಕರವಾಗಿ ಮಾಡಿ ತಿನ್ನಿಸಬೇಕು. ರೂಕ್ಷವಾದ ಯವೆ ಅನ್ನ, ವಾಟ್ಯ, ಸಕ್ತು ಮತ್ತು ರೊಟ್ಟಿಗಳನ್ನು ಕೊಡಬೇಕು. ಹೆಸರು, ತೊಗರಿ, ಹುರಳಿ ಮುಂತಾದುವುಗಳಿಂದ ಮಾಡಿದ ಕಟ್ಟುಸಾರು; ಕಹಿಯಾ ಗಿರುವ ಅಗಸೆ ಸೊಪ್ಪು, ಕಹಿಸೋರೆ, ಕಹಿಹಾಗಲ ಮುಂತಾದ ತರಕಾರಿ ಗಳಿಂದ ಮಾಡಿದ ಪಲ್ಯ, ತೊವ್ವೆ; ಹಳೇ ಶಾಲಿ, ಷಷ್ಟಿಕ ಅಕ್ಕಿ, ಯವೆ ಅಥವಾ ತೃಣಧಾನ್ಯಗಳಿಂದ ಮಾಡಿದ ಅನ್ನ ಇವುಗಳನ್ನು ಊಟಮಾಡಿಸ ಬೇಕು. ಕಫಹರವಾಗಿರುವಂತೆ ಯವೆಯಿಂದ ಮಾಡಿದ ವಿವಿಧ ಭಕ್ಷ್ಯಗಳಿಗೆ ಜೇನುತುಪ್ಪವನ್ನು ಸೇರಿಸಿ ಕೊಡಬೇಕು.

(i) ಯವೆಯಿಂದ ಮಾಡಿದ ಅರಳುಹಿಟ್ಟನ್ನು ಒಂದು ರಾತ್ರಿಯೆಲ್ಲಾ ತ್ರಿಫಲಾಕಷಾಯದಲ್ಲಿ ನೆನೆಸಿ ಮರುದಿನ ಜೇನುತುಪ್ಪವನ್ನು ಬೆರಸಿ ತಿನ್ನಿಸ ಬೇಕು. ಇದನ್ನೇ ಸೀಧು ಅನುಪಾನದೊಂದಿಗೆ ಪ್ರತಿದಿನವೂ ಸೇವಿಸುವುದಕ್ಕೆ ಕೊಡಬೇಕು. (ii) ಯವೆಧಾನ್ಯವನ್ನು ಕಫಪ್ರಮೇಹಹರವಾದ ಕ್ವಾಥ ದಲ್ಲಿ[೧] ಭಾವನೆಮಾಡಿ ಅದರಿಂದ ಸಕ್ತು, ಅಪೂಪ ಮುಂತಾದ ಭಕ್ಷ್ಯಗಳನ್ನು ಮಾಡಿ ಕೊಡಬೇಕು. ಯವೆಧಾನ್ಯಕ್ಕೆ ಬದಲಾಗಿ ಬಿದಿರಕ್ಕಿ ಅಥವಾ ಗೋಧಿ ಗಳನ್ನು ಭಾವನೆಮಾಡಿ ಉಪಯೋಗಿಸಬಹುದು. ಕತ್ತೆ, ಕುದುರೆ, ಹಸುಗಳಿಗೆ

---

೧. ಲೋಧ್ರ, ಅಭಯಾ, ಮುಸ್ತಾ, ಕಟ್ಫಲ ಇವುಗಳಿಂದ ಮಾಡಿದ ಕ್ವಾಥ; ಅಗಳುಶುಂಠಿ, ವಾಯುವಿಳಂಗ, ಎತ್ತಿಚಿಕ್ಕೆ ಮತ್ತು ಧನಿಯಗಳ ಕ್ವಾಥ; ಖದಿರ, ಮರದರಿಸಿನ, ವಾಯುವಿಳಂಗ ಮತ್ತು ಬಜೆಗಳ ಕ್ವಾಥ; ಈ ಮೂರು ಕಫಪ್ರಮೇಹಹರ ಕ್ವಾಥಗಳು.

ಹೆಚ್ಚಾಗಿ ಯವೆ, ರಾಗಿ, ಗೋಧಿ ಮುಂತಾದ ಧಾನ್ಯಗಳನ್ನು ತಿನ್ನಿಸಿ, ಆ ಪ್ರಾಣಿಗಳ ಮಲಗಳಿಂದ ವಿಸರ್ಜಿಸಲ್ಪಟ್ಟ ಕಾಳುಗಳನ್ನು ಸಂಗ್ರಹಿಸಿ ಉಪಯೋಗಿಸಬೇಕು. ಸಕಾಲದಲ್ಲಿ ಮಾಡಿಸಿದ ವಮನ, ವಿರೇಚನ ಮತ್ತು ಲಂಘನಗಳಿಂದ ಕಫಪ್ರಮೇಹವೂ, ವಿರೇಚನ, ಸಂತರ್ಪಣ ಮತ್ತು ಸಂಶಮನ ಗಳಿಂದ ಪಿತ್ತಪ್ರಮೇಹವೂ ನಾಶವಾಗುವುವು. ಹೀಗೆಯೇ ಪಿತ್ತಪ್ರಮೇಹ ಹರವಾದ[೧] ಕ್ವಾಥದಲ್ಲಿ ಧಾನ್ಯಗಳನ್ನು ಭಾವನೆಮಾಡಿ ಉಪಯೋಗಿಸುವುದ ರಿಂದ ಆ ಪ್ರಮೇಹವು ಹೋಗುವುದು. ಕುಡಿಯುವುದಕ್ಕೆ ಆಯಾ ದೋಷಹರ ಕ್ವಾಥಕ್ಕೆ ಸ್ವಲ್ಪ ಜೇನುತುಪ್ಪವನ್ನು ಕಲಸಿಕೊಡಬೇಕು. ಮರದರಿಸಿನ, ದೇವ ದಾರು, ತ್ರಿಫಲಾ ಮತ್ತು ಮುಸ್ತಾಗಳ ಕ್ವಾಥವೂ, ಅರಿಸಿನ ಚೂರ್ಣ ಮತ್ತು ಜೇನುತುಪ್ಪಗಳನ್ನು ಹಾಕಿರುವ ನೆಲ್ಲೀಕಾಯಿಯ ಸ್ವರಸವೂ ಎಲ್ಲಾ ಪ್ರಮೇಹ ಗಳಲ್ಲೂ ಉಪಯೋಗವಾಗುವುವು.

ಕಫ ಮತ್ತು ಪಿತ್ತಮೇಹಗಳಲ್ಲಿ ವಾತಾನುಬಂಧವಿದ್ದರೆ ಸಿದ್ಧತೈಲಘೃತ ಗಳನ್ನು ಉಪಯೋಗಿಸಬೇಕು. ಮೇದಸ್ಸು ಮತ್ತು ಕಫಗಳನ್ನು ಕಷಾಯ ಗಳೂ, ಪಿತ್ತವನ್ನು ಕಷಾಯಘೃತಗಳೂ, ವಾತವನ್ನು ತೈಲಘೃತಗಳೂ ಹೋಗ ಲಾಡಿಸುವುದರಿಂದ ಕಷಾಯಸಿದ್ಧಸ್ನೇಹಗಳು ವಾತಾನುಬಂಧಪ್ರಮೇಹಗಳಲ್ಲಿ ಉಪಯೋಗವಾಗುವುವು. ಕಫಪಿತ್ತಮೇಹಿಗೆ ತಾರೆಹೂ, ಮುಳ್ಳುಮುತ್ತುಗದ ಹೂ, ಕುಟಜದ ಹೂ ಅಥವಾ ಬೇಲದ ಹೂವನ್ನು ಅರೆದು ಜೇನುತುಪ್ಪ ಸೇರಿಸಿ ಬೆಳಿಗ್ಗೆ ಒಂದು ತೊಲದಷ್ಟನ್ನು ತಿನ್ನಿಸಿ ಅನಂತರ ನೆಲ್ಲೀಕಾಯಿ ರಸವನ್ನು ಕುಡಿಸಬೇಕು. ಅದು ಜೀರ್ಣವಾದಮೇಲೆ ಆ ರೋಗಿಯು ಜಾಂಗಲ ಮಾಂಸ, ಹಳೇ ಧಾನ್ಯ, ಹೆಸರು ಮುಂತಾದುವುಗಳಿಂದ ಮಾಡಿದ ಆಹಾರವನ್ನು ಊಟಮಾಡಬೇಕು.

ವಾತಮೇಹದಲ್ಲಿ ಕಫ ಅನುಬಂಧವಿದ್ದರೆ ಕಫಹರಕಷಾಯದಿಂದ ಸಿದ್ಧ ಮಾಡಿದ ತೈಲವನ್ನೂ ಪಿತ್ತಾನುಬಂಧವಿದ್ದರೆ ಪಿತ್ತಹರಕಷಾಯದಿಂದ ಸಿದ್ಧ

---

೧. ಲಾವಂಚ, ಲೋಧ್ರ, ದಾರ್ವೀರಸಾಂಜನ ಮತ್ತು ರಕ್ತಚಂದನ; ಲೋಧ್ರ, ಮುಸ್ತಾ, ಪತಂಗಚೆಕ್ಕೆ ಮತ್ತು ಧಾತಕೀಕುಸುಮ; ಪಟೋಲ, ಬೇವು, ನೆಲ್ಲೀ ಕಾಯಿ ಮತ್ತು ಅಮೃತಬಳ್ಳಿ. ಈ ಮೂರು ಪಿತ್ತಪ್ರಮೇಹಹರಕ್ವಾಥಗಳು.

ವಾದ ಘೃತವನ್ನೂ ಉಪಯೋಗಿಸಬೇಕು. ಮೂರು ದೋಷಗಳೂ ಪ್ರಬಲ ವಾಗಿದ್ದರೆ ಘೃತ ತೈಲಗಳೆರಡನ್ನೂ ತ್ರಿದೋಷಘ್ನ ಕಷಾಯಕ್ಕೆ ಸೇರಿಸಿ ಸಿದ್ಧ ಮಾಡಿದ ಸ್ನೇಹವನ್ನು ಕುಡಿಸಬೇಕು. ತ್ರಿಕಂಟಕಾದಿ[೧] ದ್ರವ್ಯಗಳನ್ನು ಈ ರೀತಿಯಲ್ಲಿ ಸಾಧಿಸಿ ಉಪಯೋಗಿಸಬಹುದು. ಪ್ರಬಲವಾಗಿರುವ ಎಲ್ಲಾ ಮೇಹಗಳಲ್ಲೂ ತ್ರಿಫಲಾ, ಮರದರಿಸಿನ, ಹಾವುಮೆಕ್ಕೆ ಬೇರು, ಕೊನ್ನಾರಿಗೆಡ್ಡೆ ಇವನ್ನು ಕಷಾಯಮಾಡಿ ಸ್ವಲ್ಪ ಅರಿಸಿನ ಮತ್ತು ಜೇನುತುಪ್ಪ ಸೇರಿಸಿ ಕುಡಿಸ ಬೇಕು. ಲೋಧ್ರಾಸವವು ಕಫಪಿತ್ತಮೇಹಗಳಲ್ಲಿ ಉಪಯೋಗವಾದುದು. ಹೀಗೆಯೇ ಮಧ್ವರಿಷ್ಟವನ್ನೂ ಹಳೇ ಸೀಧುವನ್ನೂ ಉಪಯೋಗಿಸಬಹುದು. ಅಸನಾದಿಕ್ವಾಥವನ್ನೂ, ದರ್ಭೋದಕವನ್ನೂ, ಮಧೂದಕವನ್ನೂ ಅಥವಾ ತ್ರಿಫಲಾಕ್ವಾಥವನ್ನೂ ಕುಡಿಸಬಹುದು. ಕೆಂಡದ ಮೇಲೆ ಸುಟ್ಟು ಬೇಯಿಸಿದ ಮೃಗಪಕ್ಷಿಗಳ ಮಾಂಸಗಳನ್ನು ತಿನ್ನಿಸಬೇಕು. ಸಂತರ್ಪಣದಿಂದ ಉಂಟಾದ ಪ್ರಮೇಹಗಳಲ್ಲಿ ಶೋಧನೌಷಧಗಳು, ಕಫಹರ ಅರಿಷ್ಟ, ಕಷಾಯ ಮತ್ತು ಲೇಹಗಳು ಉಪಯೋಗವಾಗುವುವು.

ಕಫಪಿತ್ತಪ್ರಮೇಹಿಯು ಬಗೆಬಗೆಯಾದ ವ್ಯಾಯಾಮಗಳನ್ನು ಎಂದರೆ ಅಂಗಸಾಧನೆ, ಬರಿಗಾಲಲ್ಲಿ ಬಿಸಿಲಲ್ಲಿ ನಡೆಯುವುದು, ಅಗೆಯುವುದು, ಭಾರ ಹೊರುವುದು, ಸೌದೆ ಒಡೆಯುವುದು, ಬಾವಿಯಿಂದ ನೀರನ್ನು ಸೇದುವುದು ಮುಂತಾದ ಶ್ರಮದಾಯಕವಾದ ಕೆಲಸಗಳನ್ನು ಮಾಡಬೇಕು. ಮುಡಿವಾಳ, ದಾಲ್ಚಿನ್ನಿ, ಏಲಕ್ಕಿ, ಅಗಿಲು, ಚಂದನ ಮುಂತಾದುವುಗಳಿಂದ ಮಾಡಿದ ಲೇಪ ಗಳನ್ನು ಮೈಗೆ ಹಚ್ಚಬೇಕು. ಸ್ನಾನ, ಉದ್ವರ್ತನ ಇವನ್ನು ಮಾಡಿಸಬೇಕು. ಇವುಗಳಿಂದ ಪ್ರಮೇಹಕ್ಕೆ ಕಾರಣವಾದ ಕ್ಲೇದ, ಮೇದ ಮತ್ತು ಕಫಗಳು ನಾಶಹೊಂದುವುವು.

ಮೇದಸ್ಸು ಕ್ಷೀಣವಾಗಿರುವವನಿಗೆ ಮೂತ್ರಲವಾದ ಮತ್ತು ಬೃಂಹಣ ವಾದ ಔಷಧಾಹಾರಗಳಿಂದ ಉಪಚರಿಸಬೇಕು.

---

೧. ನೆಗ್ಗಿಲು, ಹಿಟ್ಟುಳಕ, ಬಿಳಿಕಗ್ಗಲಿ, ಗೇರುಬೀಜ, ಅತಿಬಜೆ, ಲೋಧ್ರ, ಅಗಳುಶುಂಠಿ, ಕಹಿಪಡವಲ, ಮತ್ತಿಚೆಕ್ಕೆ, ಬೇವಿನಚೆಕ್ಕೆ, ಮುಸ್ತಾ, ಅರಿಸಿನ, ಪದ್ಮಕಾಷ್ಠ, ಪೋಮ, ಮಂಜಿಷ್ಠೆ, ಅಗಿಲು, ಚಂದನ.

ವಾತಮೇಹದಲ್ಲಿ ಅಸನಾದಿಕ್ವಾಥದಿಂದ (ಶಾಲಸಾರಾದಿಗಣ) ಸಿದ್ಧ ಪಡಿಸಿದ ತೈಲವನ್ನು ಕುಡಿಸಬೇಕು. ತ್ರಿಫಲಾಕ್ವಾಥದಲ್ಲಿ ಭಾವನೆಮಾಡಿದ ಯವೆಯ ವಿವಿಧ ಭಕ್ಷ್ಯಗಳನ್ನು ಜೇನುತುಪ್ಪದೊಂದಿಗೆ ಉಪಯೋಗಿಸಬೇಕು. ಗೋಮೂತ್ರ ಶಿಲಾಜತುವನ್ನು ಅಸನಾದಿಕ್ವಾಥವಲ್ಲಿ ಭಾವನೆಮಾಡಿ ಪ್ರತಿ ನಿತ್ಯವೂ ಕೊಡಬೇಕು.

ಶರವಿಕಾದಿಪ್ರಮೇಹ ಪಿಟಕೆಗಳನ್ನು ಅಪಕ್ವವಾಗಿದ್ದರೆ ವ್ರಣಶೋಥ ದಂತೆ, ಪಕ್ವವಾಗಿದ್ದರೆ ವ್ರಣದಂತೆ ಚಿಕಿತ್ಸಿಸಬೇಕು. ಪೂರ್ವರೂಪದಲ್ಲಿ ಪಂಚವಲ್ಕಲ ಕ್ವಾಥ ಮತ್ತು ಆಡಿನ ಮೂತ್ರಗಳನ್ನು ಕುಡಿಸಬೇಕು. ದೋಷವು ಹೆಚ್ಚಾಗಿದ್ದರೆ ತೀಕ್ಷ್ಣಶೋಧನವನ್ನು ಮಾಡಿಸಬೇಕು. ರೋಪಣಕ್ಕೆ ಏಲಾದಿ ತೈಲ ಲೇಪವನ್ನೂ ಉದ್ವರ್ತನಕ್ಕೆ ಆರಗ್ವಧಾದಿಕ್ವಾಥವನ್ನೂ ಸ್ನಾನಕ್ಕೆ ಅಸನಾದಿಕ್ವಾಥವನ್ನೂ ಅನ್ನಪಾನಗಳಲ್ಲಿ ವತ್ಸಕಾದಿಗಣದ್ರವ್ಯಗಳನ್ನೂ ಉಪ ಯೋಗಿಸಬೇಕು.

## ಮಧುಮೇಹ

ಸಕಾಲದಲ್ಲಿ ಚಿಕಿತ್ಸೆಯನ್ನು ಮಾಡದೆ ಉಪೇಕ್ಷಿಸಲ್ಪಟ್ಟ ಎಲ್ಲಾ ಪ್ರಮೇಹ ಗಳೂ ಮಧುಮೇಹವಾಗಿ ಪರಿಣಮಿಸುತ್ತವೆ. ಆದುದರಿಂದ ಇದನ್ನು ಅಸಾಧ್ಯ ವೆಂದು ತಿಳಿಯಬೇಕು. ಮಧುಮೇಹಿತ್ವವನ್ನು ಹೊಂದಿರುವವನಿಗೆ ದೌರ್ಬಲ್ಯ ವುಂಟಾಗದಂತೆಯೂ ಮತ್ತು ಇತರ ಉಪದ್ರವಗಳು ಬಾರದಂತೆಯೂ ಯಾಪನ ಚಿಕಿತ್ಸೆಯನ್ನು ನಡೆಸಬೇಕು. ಗೋಮೂತ್ರ ಶಿಲಾಜತುವು ಅತ್ಯಂತ ಶ್ರೇಷ್ಠ ವಾದ ಔಷಧ. ಇದು ಅನೇಕ ಲೋಹಮೂಲಗಳಿಂದ ಬರುವುದು. ಕೃಷ್ಣ ವರ್ಣವಾಗಿಯೂ, ಭಾರವಾಗಿಯೂ, ಸ್ನಿಗ್ಧವಾಗಿಯೂ, ಮಾಧುರ್ಯವಿಲ್ಲದೆಯೂ ಮತ್ತು ಗೋಮೂತ್ರದಂತೆ ವಾಸನೆಯುಳ್ಳ ಶಿಲಾಜತು ಮಧುಮೇಹ ಚಿಕಿತ್ಸೆಗೆ ಯೋಗ್ಯವಾದುದು.

**ತೇಷು ಯತ್ ಕೃಷ್ಣಮಲಘು ಸ್ನಿಗ್ಧಂ ನಿಃಶರ್ಕರಂಚ ಯತ್ ।**
**ಗೋಮೂತ್ರಗಂಧಿಯಚ್ಚಾಪಿ ತತ್ಪ್ರಧಾನಂ ಪ್ರಚಕ್ಷತೇ ॥**

**ಸು.ಚಿ.ಅ. ೧೩**

ಈ ವಿಧ ಶಿಲಾಜತುವನ್ನು ಶುದ್ಧಿಮಾಡಿ ಶಾಲಸಾರಾದಿಗಣ ಕ್ವಾಥದಲ್ಲಿ ಭಾವಿಸಿ ಶ್ಲಕ್ಷ್ಣಚೂರ್ಣ ಮಾಡಿಟ್ಟಿರಬೇಕು. ಪ್ರತಿದಿನ ಬೆಳಿಗ್ಗೆ ರೋಗಿಯ ಶಕ್ತಿಗನುಸಾರವಾಗಿ (ಎರಡರಿಂದ ಅರವತ್ತು ಗುಂಜಿ) ಕ್ರಮಕ್ರಮವಾಗಿ ಪ್ರಮಾಣವನ್ನು ಹೆಚ್ಚಿಸುತ್ತಾ ಸಾರೋದಕ (ಶಾಲಸಾರಾದಿಕ್ವಾಥ) ಅನುಪಾನದೊಂದಿಗೆ ಪ್ರಯೋಗಿಸಬೇಕು. ಇದು ಜೀರ್ಣವಾದನಂತರ ಜಾಂಗಲಮಾಂಸರಸ, ಶಾಲಿ ಷಷ್ಟಿಕ ಅನ್ನ, ಮುದ್ಗ ಮುಂತಾದ ಆಹಾರಗಳನ್ನು ಕೊಡಬೇಕು. ಹೀಗೆ ಒಂದು ನೂರು ಪಲ ಶಿಲಾಜತು ಮುಗಿಯುವವರೆಗೂ ಸಾಧಿಸಿದರೆ ರೋಗಿಯು ಮಧುಮೇಹದಿಂದ ನಿವೃತ್ತನಾಗಿ ನೆಮ್ಮದಿಯಾಗುತ್ತಾನೆ. ಶರೀರವು ಬಲವರ್ಣಗಳಿಂದ ಕೂಡಿಕೊಳ್ಳುವುದು. ಭಲ್ಲಾತಕ ರಸಾಯನ ವಿಧಿಗೆ ಹೇಳಿರುವ ಪಥ್ಯವನ್ನೇ ಅನುಸರಿಸಬೇಕು. ಶಿಲಾಜಿತುವು ಆಯಾ ವ್ಯಾಧಿಹರದ್ರವ್ಯಗಳ ಭಾವನೆಯಿಂದ ಅನೇಕ ಇತರ ವ್ಯಾಧಿಗಳನ್ನೂ ಹೋಗಲಾಡಿಸುವುದು. ಇದು ಉತ್ತಮ ರಸಾಯನ. ಇದೇ ರೀತಿಯಲ್ಲಿ ಸುವರ್ಣಮಾಕ್ಷಿಕ ಮತ್ತು ತಾರಮಾಕ್ಷಿಕಗಳನ್ನು ಭಾವನೆಮಾಡಿ ಉಪಯೋಗಿಸಬಹುದು. ಪಾರಿವಾಳದ ಮಾಂಸ, ಹುರಳಿಗಳು ವರ್ಜ್ಯ. ಪ್ರಮೇಹಿಗಳಿಗೆ ಸ್ವೇದನವನ್ನು ಮಾಡಿಸಬಾರದು.

**ರೋಗಮುಕ್ತನ ಲಕ್ಷಣ—**

**ಪ್ರಮೇಹಿಣೋ ಯದಾ ಮೂತ್ರಮಪಿಚ್ಛಿಲಮನಾವಿಲಮ್ ।**
**ವಿಶದಂ ತಿಕ್ತಕಟುಕಂ ತದಾರೋಗ್ಯಂ ಪ್ರಚಕ್ಷತೇ ॥**

ಸು.ಚಿ.ಅ. ೧೩

ಮೂತ್ರವು ಪಿಚ್ಛಿಲವಾಗಿಲ್ಲದೆ (ಒಂದೇ ದ್ರವರೂಪದಲ್ಲಿ), ಕೊಳೆಯಿಲ್ಲದೆ (ಸ್ವಚ್ಛವಾಗಿ), ವಿರಳವಾಗಿ (ವಿಶದ), ಕಟುತಿಕ್ತರಸಗಳಿಂದ ಕೂಡಿದ್ದಾಗಿ (ಇರುವೆ, ನೊಣ ಮುಂತಾದುವು ಸುತ್ತಿಕೊಂಡರೆ ಮಧುರ ರಸವಿದೆಯೆಂದರ್ಥ) ಇದ್ದರೆ ಆರೋಗ್ಯವಂತನಾಗಿದ್ದಾನೆಂದು ತಿಳಿಯಬೇಕು.

ಪ್ರಮೇಹ

| ಸ್ಥೂಲಪ್ರಮೇಹೀ (ಮೇದೋದೋಷ) | ಕೃಶಪ್ರಮೇಹೀ (ವಾತವೃದ್ಧಿ) |
|---|---|
| ಊರ್ಧ್ವಾಧಃ ಶೋಧನಂ । | ಬೃಂಹಣಂ |
| ವಾತಿಕೇಸುರಸಾದ್ಯಾಸ್ಥಾಪನಂ । | ಔಷಧಾಹಾರೈರಮೇದೋಮೂತ್ರಲೈಃ । |
| ಪೈತ್ತಿಕೇ ನ್ಯಗ್ರೋಧಾದ್ಯಾಸ್ಥಾಪನಂ । | ಸಮಾಕ್ಷಿಕಧಾತ್ರೀಹರಿದ್ರಾ । |
| ಶುದ್ಧೇಸಂತರ್ಪಣಂ । | ಕಫೇರೋಧ್ರಾದಿಭಾವಿತಗೋಧೂಮಯವಾದಯಃ । |
| ಅಸಂಶೋಧ್ಯಸ್ಯ ಶಮನಕ್ರಿಯಾ । ——> | ಪಿತ್ತೇ ಉಶೀರಾದಿಭಾವಿತಾಃ । |
| ಮಲೇಪನೀತೇ ರೂಕ್ಷಮುದ್ವರ್ತನಂಗಾಢಂ । | ಗವಾಶ್ವಗುದಮುಕ್ತಾಸಿಥಾನ್ಯಾನಿ । |
| ವ್ಯಾಯಾಮೋ ನಿಶಿಜಾಗರಃ । | ಜೀರ್ಣಶಾಲಿ ಷಷ್ಟಿಕಾದಯಃ । |
| ಬಹಿರಂತಶ್ಚ ಶ್ಲೇಷ್ಮಮೇದೋಘ್ನಾನಿ । | ಶುಷ್ಕಸಕ್ತವಃ । |
| ನವಾಯಸಪ್ರಯೋಗಃ । | ಧನ್ವಮಾಂಸಾನಿ । |

ಪಿಡಕಾಸು

ಅಪಕ್ವಾಃ ಶೋಫವತ್, ಪಕ್ವಾಃ ವ್ರಣವತ್ ।
ಪೂರ್ವರೂಪೇ ಕ್ಷೀರವೃಕ್ಷಾಂಬುಪಾನಂ,
ಬಸ್ತಮೂತ್ರಂಚ । ತೀಕ್ಷ್ಣಂ ಶೋಧನಂ ।
ಶಿಲಾಜತುಪ್ರಯೋಗಃ ।

# ಕುಷ್ಠನಿದಾನ

ಪರಸ್ಪರ ವಿರುದ್ಧ ಭಾವವನ್ನು ಹೊಂದುವ ಆಹಾರಗಳನ್ನು ಸೇವಿಸುವುದು, ದ್ರವ, ಸ್ನಿಗ್ಧ ಮತ್ತು ಗುರು ದ್ರವ್ಯಗಳನ್ನು ವಿಶೇಷವಾಗಿ ಉಪಯೋಗಿಸುವುದು, ಛರ್ದಿ ಮುಂತಾದ ವೇಗಗಳನ್ನು ತಡೆಯುವುದು, ಹೆಚ್ಚಾಗಿ ಊಟಮಾಡಿದ ನಂತರ ಶ್ರಮವಾಗುವ ಕೆಲಸಗಳನ್ನು ಮಾಡುವುದು, ಶೀತ, ಉಷ್ಣ, ಲಂಘನ ಮತ್ತು ಭೋಜನಗಳನ್ನು ಕ್ರಮ ತಪ್ಪಿ ಮಾಡುವುದು, ಬಿಸಿಲು, ಆಯಾಸ, ಭಯಗಳಿಂದ ಪೀಡಿಸಲ್ಪಟ್ಟನಂತರ ಸ್ವಲ್ಪ ವಿಶ್ರಮಿಸಿಕೊಳ್ಳದೆ ಹಿಂದೆಯೇ ತಣ್ಣೀರನ್ನು ಕುಡಿಯುವುದು, ಪಂಚಕರ್ಮಗಳಲ್ಲಿ ಅಪಥ್ಯಮಾಡುವುದು, ಅಜೀರ್ಣ, ಅಧ್ಯಶನಗಳಾಗುವುದು, ಹೊಸ ಧಾನ್ಯಗಳಿಂದ ಮಾಡಿದ ಆಹಾರ, ಮೊಸರು, ಮೀನು, ತಿಲ ಮುಂತಾದುವನ್ನು ತೆಗೆದುಕೊಳ್ಳುವುದು, ಆಹಾರ ಜೀರ್ಣವಾಗದಿರುವಾಗ ಎಂದರೆ ಅಜೀರ್ಣವಿರುವಾಗ ವ್ಯವಾಯಮಾಡುವುದು, ಹಗಲು ನಿದ್ರಿಸುವುದು, ಪೂಜ್ಯರಾದ ಬ್ರಾಹ್ಮಣ, ಗುರು, ದೇವತೆಗಳನ್ನು ಧಿಕ್ಕಾರಮಾಡುವುದು ಅಥವಾ ಬಯ್ಯುವುದು ಮುಂತಾದ ಇತರ ಪಾಪಕರ್ಮ ಮಾಡುವುದು ಇವುಗಳಿಂದ ಕುಷ್ಠರೋಗವು ಸಂಭವಿಸುವುದು.

**ದೋಷದೂಷ್ಯಗಳು**—ವಾತ, ಪಿತ್ತ ಮತ್ತು ಕಫಗಳು ದೋಷಗಳು; ತ್ವಕ್, ರಕ್ತ, ಮಾಂಸ ಮತ್ತು ಲಸೀಕಗಳು ದೂಷ್ಯಗಳು. ಕುಷ್ಠವು ತ್ರಿದೋಷಜವಾದುದು ಆದರೂ ದೋಷಾಧಿಕ್ಯತೆಯಿಂದ ಆಯಾ ದೋಷಜ ಕುಷ್ಠವೆಂದು ಹೇಳಲ್ಪಡುತ್ತದೆ. ಆಕೃತಿ ಮುಂತಾದ ಭೇದಗಳಿಂದ ಇದು ಹದಿನೆಂಟು ವಿಧ—(೧) ಏಳು ಮಹಾಕುಷ್ಠಗಳು ಮತ್ತು (೨) ಹನ್ನೊಂದು ಕ್ಷುದ್ರಕುಷ್ಠಗಳು.

**ಪೂರ್ವರೂಪ**—ಕುಷ್ಠ ಸಂಭವಿಸಲಿರುವ ಪ್ರದೇಶದಲ್ಲಿ ಸ್ಪರ್ಶನಾಶವಾಗುವುದು, ಅತಿಯಾಗಿ ಬೆವರುವುದು ಅಥವಾ ಬೆವರು ಬಾರದಿರುವುದು, ಬಣ್ಣ ಬದಲಾಗುವುದು, ಉಬ್ಬಿದ ಗಂದೆಗಳು, ರೋಮಹರ್ಷ, ಕಂಡೂ, ತೋದ, ಶರೀರದಲ್ಲಿ ಆಯಾಸ, ಬಳಲಿಕೆ, ವ್ರಣಗಳಾದರೆ ಹೆಚ್ಚಾದ ನೋವು, ವ್ರಣಗಳು ಶೀಘ್ರವಾಗಿ ಆಗುವುದು, ಬಹುಕಾಲದವರೆಗೂ ಮಾಯದಿರುವುದು,

ಕುಷ್ಠವಾಗುವ ಸ್ಥಳದಲ್ಲಿ ಉರಿ, ಚಟುವಟಿಯಿಲ್ಲದಿರುವುದು ಇವು ಕುಷ್ಠದ ಪೂರ್ವರೂಪಗಳು.

## ಮಹಾಕುಷ್ಠಗಳು

(೧) **ಕಪಾಲ**ಕುಷ್ಠವು ಬಕರೆಹೆಂಚಿನ ಆಕಾರಕ್ಕೆ, ಕಪ್ಪು ಅಥವಾ ಅರುಣವರ್ಣವಾಗಿ, ರೂಕ್ಷವಾಗಿ, ಒರಟಾಗಿ, ತೆಳ್ಳಗೆ, ಚುಚ್ಚಿದಂತೆ ನೋವು ಮತ್ತು ಹಳ್ಳತಿಟ್ಟಗಳಿಂದಿರುವುದು. ಇದು ವಾತಪ್ರಧಾನವಾದುದು.

(೨) **ಔದುಂಬರ**ದಲ್ಲಿ ಉರಿ, ನವೆ, ನೋವು ಮತ್ತು ಕೆಂಪುಬಣ್ಣಗಳಿರುವುವು. ಮೇಲಿನ ರೋಮವು ಕಪಿಲವರ್ಣಕ್ಕೂ, ಚರ್ಮವು ಅತ್ತಿಹಣ್ಣಿನ ಬಣ್ಣಕ್ಕೂ ಇರುವುದು. ಇದು ಪಿತ್ತಪ್ರಧಾನವಾದುದು.

(೩) **ಮಂಡಲ**ವು ಶ್ವೇತ, ರಕ್ತವರ್ಣಗಳಿಂದ ಕೂಡಿರುವುದು. ಚಲಿಸದೆ ಗಟ್ಟಿಯಾಗಿ ಗುಂಡಗೆ ಉಬ್ಬಿಕೊಂಡಿರುವುದು. ಸ್ನಿಗ್ಧವಾಗಿರುವುದು. ಮಂಡಲಗಳು ಒಂದಕ್ಕೊಂದು ಸೇರಿಕೊಂಡಂತಿರುವುವು. ಇದು ವಾತಪಿತ್ತ ದೋಷಗಳಿಂದಾದುದು.

(೪) **ಋಷ್ಯಜಿಹ್ವ**ವೆಂಬುದು ದೊಡ್ಡಜಾತಿ ಜಿಂಕೆಯ ನಾಲಿಗೆಯಂತೆ ಸುತ್ತಲೂ ಕೆಂಪಗೆ, ಮಧ್ಯೆ ಕಪ್ಪಗೆ, ನೋವುಯುಕ್ತವಾಗಿ, ಒರಟಾಗಿರುವುದು. ಇದೂ ಸಹ ವಾತಪಿತ್ತಜವಾದುದು.

(೫) **ಪುಂಡರೀಕ**ವು ಮಧ್ಯೆ ಬೆಳ್ಳಗೂ, ಸುತ್ತ ತಾವರೆ ದಳದಂತೆ ಕೆಂಪಗೂ, ಸ್ವಲ್ಪ ಉಬ್ಬಿಕೊಂಡು ಉರಿಯಿಂದ ಕೂಡಿರುವುದು. ಇದು ಶ್ಲೇಷ್ಮಪಿತ್ತಗಳಿಂದಾದುದು.

(೬) **ಸಿಧ್ಮ**ವು ಬೆಳ್ಳಗೆ ಅಥವಾ ತಾಮ್ರ ವರ್ಣಕ್ಕೆ ತೆಳ್ಳಗಿರುವುದು ; ಕೆರೆಯುವುದರಿಂದ ಪುಡಿ ಉದುರುವುದು ; ಸೋರೆಹೂವಿನ ಆಕಾರಕ್ಕಿರುವುದು ; ವಿಶೇಷವಾಗಿ ಎದೆಯ ಮೇಲೆ ಆಗುವುದು ; ವಾತಶ್ಲೇಷ್ಮದೋಷಗಳಿಂದಾಗುವುದು.

(೭) **ಕಾಕಣಕ**ವು ಗುಲಗುಂಜಿಯಂತೆ ಕೆಂಪಗೆ, ಪಾಕವಾಗದೆ,

ಕೀವು ನೋವುಗಳಿಂದ ಕೂಡಿರುವುದು. ಮೂರು ದೋಷಗಳೂ ಉಲ್ಬಣವಾಗಿ ಇರುವುದರಿಂದ ಇದು ಅಸಾಧ್ಯ.

## ಕ್ಷುದ್ರಕುಷ್ಠಗಳು

(೧) **ಏಕಕುಷ್ಠ**ದಲ್ಲಿ ಬೆವರುವುದಿಲ್ಲ. ಕುಷ್ಠಪ್ರದೇಶವು ವಿಶಾಲವಾಗಿ ಇರುವುದು; ಚರ್ಮವು ಮೀನಿನ ಚರ್ಮದಂತಿರುವುದು. ಇದು ವಾತಶ್ಲೇಷ್ಮ ದೋಷಯುಕ್ತವಾದುದು.

(೨) **ಚರ್ಮಕುಷ್ಠ**ದಲ್ಲಿ ಚರ್ಮವು ಆನೆಯ ಚರ್ಮದಂತೆ ದಪ್ಪವಾಗಿ ಇರುವುದು. ಇದು ವಾತಕಫಜವಾದುದು.

(೩) **ಕಿಟಿಮ**ವು ಶ್ಯಾವವರ್ಣವಾಗಿರುವುದು; ವ್ರಣಸ್ಥಾನದಂತೆ ಕಠಿಣ ವಾಗಿಯೂ, ಒರಟಾಗಿಯೂ ಇರುವುದು. ಇದೂ ಸಹ ವಾತಶ್ಲೇಷ್ಮಜ ವಾದುದು.

(೪) **ವೈಪಾದಿಕ**ದಲ್ಲಿ ಅಂಗೈ, ಅಂಗಾಲುಗಳು ಒಡೆದು ತೀವ್ರ ಉರಿ ಮತ್ತು ನೋವುಗಳಿರುವುವು. ಇದು ವಾತಕಫಜವಾದುದು.

(೫) **ಅಲಸಕ**ದಲ್ಲಿ ನವೆ, ರಾಗಗಳಿರುವ ದೊಡ್ಡ ದೊಡ್ಡ ಸ್ಫೋಟ ಗಳಾಗುತ್ತವೆ. ಇದೂ ಸಹ ವಾತಕಫಜವಾದುದು.

(೬) **ದದ್ರು** ಕುಷ್ಠವು ಅಲಸಕದಂತೆಯೇ ಇದ್ದರೂ ಸ್ಫೋಟಗಳು ಸಣ್ಣಗೆ ಗುಂಡಗಿರುತ್ತವೆ. ಇದು ಕಫಪಿತ್ತಜವಾದುದು.

(೭) **ಚರ್ಮದಲ**ವು ಕೆಂಪಗೆಬೊಬ್ಬೆಯಂತಿರುವುದು. ನವೆ, ನೋವು, ಸ್ಪರ್ಶಾಸಹನ ಮತ್ತು ಒಡೆಯುವುದು ಇದರ ಲಕ್ಷಣಗಳು. ಇದು ಕಫಪಿತ್ತಜ.

(೮) **ಪಾಮಾ** ಎಂಬುದು ಬೆಳ್ಳಗೆ, ಅರುಣವರ್ಣವಾಗಿ ಅಥವಾ ಕಪ್ಪಗೆ ಆಗುವ ಪಿಟಿಕೆಗಳು. ಇವು ಸ್ಥೂಲವಾಗಿಯೂ, ಅನೇಕವಾಗಿಯೂ ಆಗುವುವು. ನವೆ, ಉರಿ ಮತ್ತು ಸ್ರಾವಗಳುಂಟಾಗುವುವು. ವಿಶೇಷವಾಗಿ ಕೈ ಮತ್ತು ಸ್ಫಿಚ(ಪಿರ್ರೆ)ಗಳ ಮೇಲೆ ಆಗಿರುವುದಕ್ಕೆ **ಕಚ್ಛೂ** ಎಂದು ಹೆಸರು. ಇವು ಕಫಪಿತ್ತಗಳಿಂದಾಗುವುವು.

(೯) **ವಿಸ್ಫೋಟ**ಗಳು ಶ್ವೇತ ಅಥವಾ ಅರುಣವರ್ಣವಾಗಿ ತೆಳ್ಳಗೆ ಚರ್ಮದಿಂದ ಮುಚ್ಚಲ್ಪಟ್ಟಿರುವುವು. ಇವು ಕಫಪಿತ್ತಜವಾದುವು.

(೧೦) **ಶತಾರು** ಎಂಬುದು ಕೆಂಪಗೆ ಅಥವಾ ಶ್ಯಾವವರ್ಣಕ್ಕೆ ಇರುವುದು. ಉರಿ, ನೋವುಗಳಿರುವುವು. ಅನೇಕ ವ್ರಣಗಳು ಸೇರಿ ಒಂದೇ ಆಗಿರುವುದು ; ಕಫಪಿತ್ತಜವಾದುದು.

(೧೧) **ವಿಚರ್ಚಿಕಾ**ವಲ್ಲಿ ಅನೇಕ ಪಿಟಿಕೆಗಳು ಒತ್ತಾಗಿ ಕಪ್ಪಗೂ ಸ್ರಾವಯುಕ್ತವಾಗಿಯೂ ಇರುವುವು. ಇವು ವಾತಪಿತ್ತದೋಷಗಳಿಂದಾಗುವುದು.

ಕುಷ್ಠದಲ್ಲಿ ವಾತದೋಷದಿಂದ ಖರತ್ವ, ರೌಕ್ಷ್ಯ, ಶ್ಯಾವಾರುಣ ಬಣ್ಣಗಳೂ, ಪಿತ್ತದಿಂದ ಕೊಳೆತ, ಉರಿ, ಕೆಂಪುವರ್ಣ ಮತ್ತು ಸ್ರಾವಗಳೂ, ಕಫದಿಂದ ಕ್ಲೇದ, ಕಂಡೂ, ಶೈತ್ಯ, ಭಾರ, ಘನತ್ವ ಮತ್ತು ಸ್ನಿಗ್ಧತ್ವಗಳೂ ಇರುವುವು.

ತ್ವಗಾ(ರಸ)ಶ್ರಿತವಾದ ಕುಷ್ಠದಲ್ಲಿ ವಿವರ್ಣ, ರೂಕ್ಷತೆ, ಸ್ಪರ್ಶನಾಶ, ರೋಮಹರ್ಷ, ಅತಿಸ್ವೇದಗಳೂ, ರಕ್ತಾಶ್ರಿತದಲ್ಲಿ ನವೆ, ಹೆಚ್ಚಾಗಿ ಕೀವುಗಳೂ, ಮಾಂಸಸ್ಥದಲ್ಲಿ ದಪ್ಪಗೆ ಗುಂಡಗಿರುವ ಕಠಿಣವಾದ ಪಿಟಿಕೆಗಳೂ, ತೋದ, ಭದ್ರವಾಗಿರುವ ಸ್ಫೋಟಗಳೂ ಆಗುವುವು. ಮೇದಸ್ಥಾನಕ್ಕೆ ಪ್ರಸರಿಸಿರುವ ಕುಷ್ಠದಲ್ಲಿ ಕೈ ಮುಡಿಸಿಕೊಂಡಿರುವುದು, ಓಡಾಡಲಿಕ್ಕಾಗದಿರುವುದು, ಅಂಗಾಂಗಗಳಲ್ಲಿ ಒಡೆತ, ಕ್ರಿಮಿಗಳು ಓಡಾಡುವುದು ಮತ್ತು ಹಿಂದೆ ಹೇಳಿದ ಎಲ್ಲಾ ಲಕ್ಷಣಗಳೂ ಕಂಡುಬರುವುವು. ಅಸ್ಥಿಮಜ್ಜಗತವಾದ ಕುಷ್ಠದಲ್ಲಿ ನಾಸಾಭಂಗ, ಕಣ್ಣು ಕೆಂಪೇರಿರುವುದು, ಬಾಧಿತ ಪ್ರದೇಶದಲ್ಲಿ ಕ್ರಿಮಿಗಳಿರುವುವು. ಸ್ವರಭೇದವಾಗುವುದು. ದಂಪತಿಗಳ ಶುಕ್ರಶೋಣಿತಗಳು ಕುಷ್ಠದೋಷದಿಂದ ಕೂಡಿದ್ದರೆ ಅವುಗಳ ಸಂಯೋಗದಿಂದ ಪ್ರಜೆಯೂ ಕುಷ್ಠಿಯಾಗಿ ಹುಟ್ಟುತ್ತಾನೆ.

**ಸಾಧ್ಯಾಸಾಧ್ಯ**—ವಾತಶ್ಲೇಷ್ಮಾಧಿಕವಾದ ತ್ವಕ್, ರಕ್ತ ಮತ್ತು ಮಾಂಸಾಶ್ರಿತಕುಷ್ಠಗಳು ಸಾಧ್ಯ ಮೇದಸ್ಸನ್ನು ಆಶ್ರಯಿಸಿರುವ ದ್ವಂದ್ವಕುಷ್ಠಗಳು ಯಾಪ್ಯ. ಅಸ್ಥಿ ಮಜ್ಜ ಶುಕ್ರಗತವಾದುವು ಅಸಾಧ್ಯ. ಕೃಮಿ, ತೃಟ್, ದಾಹ (ಉರಿ), ಅಗ್ನಿಮಾಂದ್ಯಗಳಿಂದ ಕೂಡಿರುವ, ತ್ರಿದೋಷಗಳು ಹೆಚ್ಚಿರುವ ಕುಷ್ಠವೂ ಅಸಾಧ್ಯ. ಛಿದ್ರಛಿದ್ರವಾಗಿ ಒಡೆದಿರುವ, ಬಹುವಾಗಿ ಸ್ರಾವವಿರುವ,

ಕಣ್ಣು ಕೆಂಪೇರಿರುವ, ಸ್ವರಭೇದವಿರುವ ಮತ್ತು ಪಂಚಕರ್ಮಗಳಿಗೆ ಅನರ್ಹನಾದ ಅಥವಾ ಪಂಚಕರ್ಮಗಳಿಂದಲೂ ಗುಣವಾಗದಿರುವ ಕುಷ್ಠಿಯು ಸಾಯುತ್ತಾನೆ.

**ಸಾಂಕ್ರಾಮಿಕ ರೋಗಗಳು**—ಕುಷ್ಠ, ಜ್ವರ, ಶೋಷ (ಕ್ಷಯ), ನೇತ್ರಾಭಿಷ್ಯಂದ ಮತ್ತು ಔಪಸರ್ಗಿಕ ರೋಗಗಳು ಒಬ್ಬರಿಂದ ಮತ್ತೊಬ್ಬರಿಗೆ ಹರಡುವ ರೋಗಗಳು ಇವು ಮೈಥುನ, ಗಾತ್ರಸ್ಪರ್ಶನ, ನಿಃಶ್ವಾಸ, ಸಹಭೋಜನ (ಎಂಜಲು ಮುಂತಾದುವುಗಳಿಂದ), ಒಂದೇ ಹಾಸಿಗೆಯಲ್ಲಿ ಮಲಗುವುದು, ಒಂದೇ ಆಸನದಲ್ಲಿ ಕುಳಿತುಕೊಳ್ಳುವುದು, ವಸ್ತ್ರ, ಮಾಲೆ, ಗಂಧಾದಿ ಲೇಪನಾದಿಗಳಿಂದ ಒಂದು ರೋಗಿಯಿಂದ ಮತ್ತೊಬ್ಬನಿಗೆ ಹರಡುವುವು.

## ಕುಷ್ಠ ಚಿಕಿತ್ಸೆ

ಕುಷ್ಠದಲ್ಲಿ ಮೂರು ದೋಷಗಳ ಪೈಕಿ ಪ್ರಧಾನದೋಷವು ವಾತವಾಗಿದ್ದರೆ ಸ್ನೇಹಪಾನವನ್ನೂ, ಕಫವಾಗಿದ್ದರೆ ವಮನವನ್ನೂ, ಪಿತ್ತವು ಅಲ್ಪವಾಗಿದ್ದರೆ ಪ್ರಚ್ಛನ(ಶಸ್ತ್ರದಿಂದ ಕೆರೆದು ರಕ್ತವನ್ನು ಹೊರಡಿಸುವಿಕೆ)ವನ್ನೂ, ಅಧಿಕವಾಗಿದ್ದರೆ ರಕ್ತಮೋಕ್ಷಣವನ್ನೂ ಮಾಡಬೇಕು. ಹೀಗೆ ದೋಷ ಹೆಚ್ಚಾಗಿರುವಾಗ ಆಯಾದೋಷವನ್ನು ಮೇಲಿಂದಮೇಲೆ ಶುದ್ಧಿಮಾಡಿ ವಾತ ಮತ್ತು ದೌರ್ಬಲ್ಯಗಳನ್ನು ಹೋಗಲಾಡಿಸಲು ಆ ರೋಗಿಗೆ ಸ್ನೇಹಪಾನವನ್ನು ಮಾಡಿಸಬೇಕು. ಇದಕ್ಕೆ ತಿಕ್ತಘೃತವನ್ನಾಗಲೀ, ವಜ್ರಕಘೃತವನ್ನಾಗಲೀ[೧] ಉಪಯೋಗಿಸಬಹುದು. ಕುಷ್ಠವು ಎದೆಯ ಮೇಲ್ಭಾಗದಲ್ಲಿದ್ದು ಆ ರೋಗಿಗೆ ಕಫೋತ್ಕ್ಲೇಶ ಮತ್ತು ಹೃಲ್ಲಾಸಕಗಳು ಕಂಡುಬಂದರೆ ಕೊಡಸಿಗೆಬೀಜ, ಮದನ, ಮಧುಕ, ಪಟೋಲ ಮತ್ತು ನಿಂಬಗಳನ್ನು ಹಾಕಿದ ಶೀತಕಷಾಯ ಅಥವಾ ಶೃತಶೀತ ಕಷಾಯಕ್ಕೆ ಜೇನುತುಪ್ಪ ಸೇರಿಸಿ ಕುಡಿಸಿ ವಾಂತಿಮಾಡಿಸಬೇಕು. ಕುಷ್ಠಗಳಲ್ಲಿ ವಿರೇಚನ ಮಾಡಿಸಲು ದಂತೀ, ತ್ರಿವೃತ್ ಮತ್ತು ತ್ರಿಫಲೆಗಳು ಯೋಗ್ಯ

---

೧. ವಾಸಾಮೃತಾ ನಿಂಬ ವರಾ ಪಟೋಲ ವ್ಯಾಘ್ರೀಕರಂಜೋದಕಕಲ್ಕಪಕ್ವಮ್ ।
ಸರ್ಪಿರ್ವಿಸರ್ಪಜ್ವರಕಾಮಲಾಸ್ರ ಕುಷ್ಠಾಪಹಂ ವಜ್ರಕಮಾಮನಂತಿ ॥
ಅ.ಹೃ.ಚಿ. ೧೯.

ವಾದುವು. ಇವನ್ನು ಉಪಯೋಗಿಸಲು ಜೊತೆಗೆ ಸೌವೀರಕ, ತುಷೋದಕ, ಆಸವ, ಸೀಧುಗಳು ಹಿತವಾಗಿರುವುವು. ವಿರೇಕ್ತನಿಗೆ ಪೇಯಾದಿಗಳನ್ನು ಹೀನ, ಮಧ್ಯ ಅಥವಾ ಅಧಿಕಮಾತ್ರದಲ್ಲಿ ವಿರೇಚನಗಳಿಗನುಸಾರವಾಗಿ ಉಪಯೋಗಿಸಬೇಕು. ಈ ವ್ಯಾಧಿಯಲ್ಲಿ ಅನುವಾಸನ, ಆಸ್ಥಾಪನಗಳು ನಿಷಿದ್ಧವಾಗಿದ್ದರೂ ದೋಷಪ್ರಕೋಪವಿದ್ದಲ್ಲಿ ಮಾಡಿಸಬಹುದು. ವಿರೇಚನ ಮತ್ತು ಆಸ್ಥಾಪನಗಳನ್ನು ಮಾಡಿಸಿದಮೇಲೆ ಅವಶ್ಯಬಿದ್ದರೆ ಅನುವಾಸನವನ್ನು ಕೊಡಬೇಕು.

ಊರ್ಧ್ವಾಂಗದಲ್ಲಿ ಕುಷ್ಠ ಕೃಮಿಯಿಂದ ಕಫಪ್ರಕೋಪಪಾಗಿದ್ದರೆ ಮೇಲೆ ಹೇಳಿದಂತೆ ಶುದ್ಧಿಮಾಡಿ ವಿರೇಚನ ನಸ್ಯ ಮತ್ತು ಧೂಮಗಳನ್ನು ಕೊಡಬೇಕು. ಇದರಿಂದ ಕೃಮಿನಾಶವಾಗಿ ಕುಷ್ಠಕಿಲಾಸಗಳು ಶಮನಹೊಂದುವುವು.

ಸ್ಥಿರವಾಗಿಯೂ ಗಟ್ಟಿಯಾಗಿಯೂ ನಿಂತಿರುವ ಮಂಡಲಕುಷ್ಠವನ್ನು ಪ್ರಸ್ತರ, ನಾಡೀಗಳಿಂದ ಬೆವರಿಸಿ ಕೂರ್ಚ ಯಂತ್ರದಿಂದ ಚುಚ್ಚಿ ರಕ್ತವನ್ನು ಹೊರಡಿಸಿ ತೊಳೆಯಬೇಕು. ಆನೂಪಮಾಂಸದಿಂದ ಪೋಟಲಸ್ವೇದ ಮಾಡಿಸಿ ಉಬ್ಬಿರುವ ಪ್ರದೇಶವನ್ನು ತೀಕ್ಷ್ಣವಾದ ಶಸ್ತ್ರದಿಂದ ವೃದ್ಧಿಮಾಡಿ ರಕ್ತ ಚೆನ್ನಾಗಿ ಬರುವುದಕ್ಕಾಗಿ ಶೃಂಗ ಅಥವಾ ಅಲಾಬುವನ್ನುಪಯೋಗಿಸಬೇಕು. ಕೆರೆದು ರಕ್ತ ಕಂಡ ಕಡೆಯಲ್ಲಿ ಜಿಗಣೆಯಿಂದ ರಕ್ತವನ್ನು ತೆಗೆಯಬೇಕು. ದುಷ್ಟ ರಕ್ತಹರಣವಾದ ಮೇಲೆ ಕುಷ್ಠಹರ ಲೇಪಗಳನ್ನು ಹಾಕಬೇಕು. ಇದರಿಂದ ಆ ಪ್ರದೇಶವು ಶುದ್ಧವಾಗಿ ಸದ್ಯಃಫಲ ದೊರೆಯುವುದು. ಲಲಾಟ, ಹಸ್ತ ಮತ್ತು ಪಾದಗಳಲ್ಲಿ ಕುಷ್ಠವಿದ್ದರೆ ಸಿರೆಗಳಿಂದ ರಕ್ತಮೋಕ್ಷಣ ಮಾಡಬೇಕು.

ಶಸ್ತ್ರವನ್ನು ಉಪಯೋಗಿಸಲು ಸರಿಯಾಗಿಲ್ಲದಿರುವ ಮತ್ತು ಈ ವ್ಯಾಧಿಯಿಂದ ಸ್ಪರ್ಶಜ್ಞಾನವು ಹಾಳಾಗುತ್ತಿರುವ ಸ್ಥಳಗಳಲ್ಲಿ ಪ್ರಚ್ಛನಮಾಡಿ ದುಷ್ಟ ರಕ್ತವು ಹೋದನಂತರ ಕ್ಷಾರಗಳನ್ನು ಲೇಪಿಸಬೇಕು. ಕಲ್ಲಿನಂತೆ ಕಠಿಣವಾಗಿಯೂ, ಒರಟಾಗಿಯೂ, ಸುಪ್ತವಾಗಿಯೂ ಮತ್ತು ಹರಡದೆ ಸ್ಥಾನಿಕವಾಗಿಯೇ ಇರುವ ಹಳೆಯದಾದ ಕುಷ್ಠದಲ್ಲಿ ವಿಷಹರ ಔಷಧಗಳನ್ನು ಕುಡಿಸಿ, ಲೇಪಕ್ಕೆ ವಿಷನಾಶಕಗಳನ್ನು ಉಪಯೋಗಿಸಬೇಕು. ಸ್ತಬ್ಧವಾಗಿಯೂ, ಬೆವರು ಬಾರದೆಯೂ ಮತ್ತು ಸ್ಪರ್ಶಜ್ಞಾನವಿಲ್ಲದ ಅಥವಾ ನವೆಯಾಗುತ್ತಿರುವ ಕುಷ್ಠಗಳನ್ನು ಶಸ್ತ್ರ, ಕೂರ್ಚ, ಸಮುದ್ರದ ನೊರೆ ಇವುಗಳಲ್ಲಿ ಯಾವುದರಿಂದಲಾಗಲೀ ಕೆರೆದು ಅಥವಾ ಜಾಪಾಳ, ತಿಗಡೆ, ಕಣಿಗಲೆ, ಹೊಂಗೆ, ಕೊಡಸಿಗೆ,

ಜಾಜಿ, ಎಕ್ಕೆ ಅಥವಾ ಬೇವಿನ ಎಲೆಗಳಿಂದ ತಿಕ್ಕಿ ಕುಷ್ಠಹರ ಲೇಪಗಳನ್ನು ಹಾಕಬೇಕು.

ಪಿತ್ತಕುಷ್ಠದಲ್ಲಿ ವಾತಕಫಕುಷ್ಠಗಳಿಗೆ ಹೇಳಿರುವ ಚಿಕಿತ್ಸೆಯನ್ನು ಮಾಡಬೇಕು. ಕಫಪಿತ್ತದೋಷಹರಗಳಾದ ಮತ್ತು ರಕ್ತಶುದ್ಧಿಕರಗಳಾದ ತಿಕ್ತ ಮತ್ತು ಕಷಾಯದ್ರವ್ಯಗಳಿಂದ ಶಮನಮಾಡಬೇಕು. ಬಾಹ್ಯ ಮತ್ತು ಅಭ್ಯಂತರ ಪಿತ್ತಹರ ಮತ್ತು ರಕ್ತಪಿತ್ತಹರ ಚಿಕಿತ್ಸೆಗಳನ್ನು ಮಾಡಿ ಅನಂತರ ತಿಕ್ತಘೃತಗಳನ್ನು ಕುಡಿಸಬೇಕು.

## ಕುಷ್ಠಸಾಮಾನ್ಯ ಯೋಗಗಳು

ಮರದರಿಸಿನಕ್ವಾಥ ಅಥವಾ ಅದರ ರಸಕ್ರಿಯೆ(ರಸಾಂಜನ)ಗೆ ಗೋಮೂತ್ರವನ್ನು ಸೇರಿಸಿ ಒಂದು ತಿಂಗಳು ಸೇವಿಸಬೇಕು. ತ್ರಿಕಟು ಮತ್ತು ಅಳಲೆಕಾಯಿ ಚೂರ್ಣವನ್ನು ಗುಡ ಮತ್ತು ತೈಲ ಮಿಶ್ರಮಾಡಿ ಒಂದು ತಿಂಗಳುಕಾಲ ಸೇವಿಸಬೇಕು. (ತಿಲ ಮತ್ತು ಗುಡಗಳು ಕುಷ್ಠಕ್ಕೆ ನಿದಾನಗಳೆಂದು ಹೇಳಿದೆ. ವಿರುದ್ಧಾಹಾರಗಳಲ್ಲಿ ಇವು ಸೇರಿದಾಗ ರೋಗಕ್ಕೆ ಕಾರಣವಾಗುತ್ತವೆ. ಆದರೆ ಯುಕ್ತರೀತಿಯಲ್ಲಿ ಉಪಯೋಗಿಸುವುದರಿಂದ ರೋಗವನ್ನು ಹೋಗಲಾಡಿಸುತ್ತವೆ.) ಪಟೋಲಾದಿಕ್ವಾಥ[೧] ಚೂರ್ಣವನ್ನು ಒಂದು ಪಲ ನೀರಿನಲ್ಲಿ ಹಾಕಿ ಕ್ವಾಥಮಾಡಿ ಕುಡಿಸಿ ಅದು ಜೀರ್ಣಿಸಿದ ಮೇಲೆ ಎಂದರೆ ವಿರೇಚನವಾದ ಮೇಲೆ ಜಾಂಗಲಮಾಂಸ(ಮೃಗ ಅಥವಾ ಪಕ್ಷಿಗಳ ಮಾಂಸ)ವನ್ನಾಗಲೀ, ಹಳೆಯ ಶಾಲಿ ಯವೆಯನ್ನವನ್ನಾಗಲೀ ಊಟಮಾಡಿಸಬೇಕು. ಹೀಗೆ

---

೧. ಕಹಿಪಡವಲಬೇರು ೧ ಪಲ, ಹಾವುಮೆಕ್ಕೆಬೇರು ೧ ಪಲ, ಅಳಲೆಕಾಯಿ ಸಿಪ್ಪೆ ೧ ಪಲ, ತಾರೆಕಾಯಿ ಸಿಪ್ಪೆ ೧ ಪಲ, ನೆಲ್ಲೀಚಟ್ಟು ೧ ಪಲ, ಕಹಿದಸರಿ ೬ ಶಾಣ, ಕಟುಕರೋಹಿಣಿ ೬ ಶಾಣ, ಶುಂಠಿ ೪ ಶಾಣ; ಇವುಗಳೆಲ್ಲವನ್ನೂ ಚೂರ್ಣಿಸಿ ಒಂದು ಪಲ ಚೂರ್ಣವನ್ನು ಕ್ವಾಥಮಾಡಿ ಪ್ರಾತಃಕಾಲ ಕುಡಿಸಬೇಕು. ಭೇದಿಯಾದನಂತರ ರೋಗಿಗೆ ಜಾಂಗಲ ಮೃಗಪಕ್ಷಿ ಮಾಂಸವನ್ನೂ, ಹಳೆ ಶಾಲ್ಯನ್ನವನ್ನೂ ಭೋಜನಮಾಡಿಸಬೇಕು. ಹೀಗೆ ಆರು ದಿನಗಳು ನಡೆಸುವುದರಿಂದ ಕುಷ್ಠ, ಶೋಫ, ಗ್ರಹಣೀ, ಅರ್ಶಸ್ಸು, ಹಲೀಮಕ, ಹೃದ್ಬಸ್ತಿಶೂಲೆಗಳು ಮತ್ತು ವಿಷಮಜ್ವರಗಳು ನಾಶವಾಗುವುವು. ಚ.ಚಿ.ಅ. ೭.

ಆರು ದಿನಗಳು ಮಾಡುವುದರಿಂದ ಕುಷ್ಠ, ಶೋಫ ಮುಂತಾದ ರೋಗಗಳು ಗುಣವಾಗುವುವು. ಮಾಣಿಭದ್ರ[೧] ಲೇಹ್ಯವನ್ನಾದರೂ ಉಪಯೋಗಿಸಬಹುದು. ಸುಪ್ತಕುಷ್ಠವನ್ನು ಹೋಗಲಾಡಿಸಲು ಚರಕೋಕ್ತ ತ್ರಿಫಲಾದಿ ಚೂರ್ಣವನ್ನು ಪ್ರಯೋಗಿಸಬೇಕು.

ಶುದ್ಧ ಗಂಧಕವನ್ನು ಹೇಮಮಾಕ್ಷಿಕ ಭಸ್ಮ ಮತ್ತು ಆಮಲಕ ರಸಗಳೊಡನೆ ಸೇವಿಸುವುದರಿಂದ ಎಲ್ಲಾ ಕುಷ್ಠಗಳೂ ಹೋಗುವುವು. ಬದ್ಧಪಾರದ ಪ್ರಯೋಗವು ಇವೆಲ್ಲಕ್ಕಿಂತಲೂ ಶ್ರೇಷ್ಠವಾದುದು. ಇದನ್ನು ಪಾಂಡುರೋಗದಲ್ಲಿ ಹೇಳಿರುವ ಯೋಗರಾಜದೊಡನೆ ಸೇವಿಸಬೇಕು. ಮಧ್ವಾಸವ, ಕನಕಬಿಂದ್ವರಿಷ್ಟ, ಖದಿರಾರಿಷ್ಟ ಮುಂತಾದುವು ಸಿದ್ಧಕುಷ್ಠಹರ ಯೋಗಗಳು. ವಾಕುಚೀವಟಿಯನ್ನು ಉಪಯೋಗಿಸುವ ಅಭ್ಯಾಸದಿಂದ ಕುಷ್ಠಪರಿಹಾರವಾಗುವುದು.

ಕುಷ್ಠಹರವಾದ ವಿವಿಧ ಲೇಪಗಳನ್ನೂ, ತೈಲಗಳನ್ನೂ ಹಚ್ಚಿ ಸ್ನಾನ ಮಾಡಿಸಬೇಕು.

(i) ಏಲಕ್ಕಿ, ಚಂಗಲ್ಕೋಷ್ಠ, ಮರದರಿಸಿನ, ಸಬ್ಬಸಿಗೆಬೀಜ, ಚಿತ್ರಮೂಲ, ವಾಯುವಿಳಂಗ, ರಸಾಂಜನ ಮತ್ತು ಅಭಯಾಗಳನ್ನು ಅರೆದು ಕಲ್ಕಮಾಡಿ ಕುಷ್ಠದ ಮೇಲೆ ಲೇಪಿಸಬೇಕು.

(ii) ಚಿತ್ರಕ, ಎಲಕ್ಕಿ, ತೊಂಡೆಬೇರು, ಆಡುಸೋಗೆ ಸೊಪ್ಪು, ತಿಗಡೆ, ಶುಂಠಿ ಮತ್ತು ತಾಮ್ರಭಸ್ಮ (ಅಥವಾ ಮೈಲುತುತ್ಥ[೨]) ಇವನ್ನೆಲ್ಲಾ ಅರೆದು ಎಂಟು ದಿನ ಗೋಮೂತ್ರ ಮತ್ತು ಪಲಾಶಕ್ಷಾರೋದಕಗಳಲ್ಲಿ ಭಾವನೆ ಮಾಡಿ ಲೇಪಿಸುವುದರಿಂದ ಮಂಡಲಕುಷ್ಠ ನಾಶವಾಗುವುದು.

---

೧. ವಾಯುವಿಳಂಗ, ನೆಲ್ಲೀಚಟ್ಟು, ಅಳಲೆಕಾಯಿ ಸಿಪ್ಪೆ ಇವು ಪ್ರತ್ಯೇಕ ಒಂದು ಪಲ, ತಿಗಡೆಬೇರಿನ ಸಿಪ್ಪೆ ಮೂರು ಪಲ, ಬೆಲ್ಲ ಹನ್ನೆರಡು ಪಲಗಳನ್ನು ಹಾಕಿ ಲೇಹವನ್ನು ಮಾಡಿ ಉಪಯೋಗಿಸಬೇಕು. ಅ.ಹೃ.ಚಿ. ೧೯.

೨. ತಾಮ್ರಭಸ್ಮ ಮತ್ತು ಮೈಲುತುತ್ಥಗಳು ಕ್ಷಾರ ಗುಣ ಪಡೆದಿರುವುದರಿಂದ ಈ ಯೋಗವು ಕುಷ್ಠಭಾಗದಲ್ಲಿ ವ್ರಣವನ್ನುಂಟುಮಾಡವುದು. ದುಷ್ಟ ವ್ರಣದಂತೆ ಇದನ್ನು ಚಿಕಿತ್ಸಿಸಬೇಕು.

(iii) ಬಾಳೆಗೆಡ್ಡೆ, ಮುತ್ತುಗದ ಚೆಕ್ಕೆ, ಪಾದರಿ ಚೆಕ್ಕೆ ಮತ್ತು ನೀರು ಹಬ್ಬೆಗಳನ್ನು ಸುಟ್ಟು ಕ್ಷಾರ ಮಾಡಿ ಆ ಕ್ಷಾರೋದಕದ ತಿಳಿಭಾಗದಲ್ಲಿ ಮಾಂಸ ವನ್ನು ತೊಳೆದು ಅನಂತರ ಮಾಂಸವನ್ನು ಕಿಣ್ವ (ಮದ್ಯದ ತಳಭಾಗದ ಮಡ್ಡಿ) ಮತ್ತು ಗಟ್ಟಿ ಮದ್ಯಗಳಲ್ಲಿ ಅರೆದು ಕುಷ್ಠಕ್ಕೆ ಲೇಪಿಸಿ ಆ ಭಾಗವನ್ನು ಬಿಸಿಲಲ್ಲಿ ಕಾಸುವುದರಿಂದ ಕುಷ್ಠವು ಹೋಗುವುದು.

(iv) ಸಿದ್ಧಾರ್ಥಕ[೧] ಸ್ನಾನ—ಕೊನ್ನಾರಿ ಗೆಡ್ಡೆ, ಮಂಗ್ನಾರಿ ಬೀಜ, ತ್ರಿಫಲಾ, ಹೊಂಗೆ ಬೀಜ, ಕಕ್ಕೆ ಬೀಜ, ಕೊಡಸಿಗೆ ಬೀಜ, ಮರದರಿಸಿನ ಮತ್ತು ಸಪ್ತಪರ್ಣಗಳನ್ನು ಹಾಕಿ ಕಷಾಯ ಮಾಡಿ ಅದರಿಂದ ಸ್ನಾನ ಮಾಡುವುದು ಕುಷ್ಠಹರವಾದುದು. ಈ ಕಷಾಯದಿಂದ ವಮನ, ವಿರೇಚನ, ಉದ್ವರ್ತನಗಳನ್ನು ಮಾಡಿಸಿದರೆ ಚರ್ಮಕ್ಕೆ ಸ್ವಾಭಾವಿಕ ಬಣ್ಣ ಬರುತ್ತದೆ.

(v) ಶ್ವೇತಕರವೀರಾದಿ ತೈಲ—ಬಿಳಿ ಕಣಿಗಲೆಯ ಎಲೆ, ತ್ವಕ್ ಮತ್ತು ಮೂಲಗಳಿಂದ ಮಾಡಿದ ಕಷಾಯ, ಗೋಮೂತ್ರ, ಅಚ್ಚೆಳ್ಳೆಣ್ಣೆ, ಕಲ್ಕಕ್ಕೆ ವಾಯುವಿಳಂಗ ಮತ್ತು ಚಿತ್ರಮೂಲ ಇವುಗಳಿಂದ ತೈಲವನ್ನು ಮಾಡಿ ಲೇಪ ಮಾಡಬೇಕು.

(vi) ಸಿಧ್ಮಲೇಪ—ಚಂಗಲ್ಕೋಷ್ಠ, ತಪಸಿ ಎಲೆ, ಮೆಣಸು, ಮಣಿ ಶಿಲೆ ಮತ್ತು ಕಾಸೀಸ ಇವನ್ನು ಚೂರ್ಣಿಸಿ ಒಂದು ತಾಮ್ರದ ಪಾತ್ರೆಯಲ್ಲಿ ಅಚ್ಚೆಳ್ಳೆಣ್ಣೆಯೊಂದಿಗೆ ಕಲಸಿ ಏಳು ದಿನಗಳವರೆಗೂ ಬಿಟ್ಟಿದ್ದು ಅನಂತರ ಈ ಎಣ್ಣೆಯನ್ನು ಸಿಧ್ಮದ ಮೇಲೆ ಲೇಪಿಸಿ ಬಿಸಿಲನ್ನು ಕಾಸಲು ಸಿಧ್ಮವು ಹೋಗಿ ಚರ್ಮಕ್ಕೆ ಸರಿಯಾದ ವರ್ಣವುಂಟಾಗುವುದು ಹೊಸದಾಗಿ ಉಂಟಾಗಿರುವ ಕಿಲಾಸದಲ್ಲಿ ರೋಗಿಯನ್ನು ವಮನವಿರೇಚನಗಳಿಂದ ಶುದ್ಧಿಗೊಳಿಸಿ ಈ ತೈಲ ವನ್ನು ಲೇಪಿಸಿ ಬಿಸಿಲು ಕಾಸುತ್ತಿರಲು ಒಂದು ತಿಂಗಳು ಕಾಲದಲ್ಲಿ ಕಿಲಾಸವು ಗುಣವಾಗುವುದು. ರೋಗಿಯು ಈ ಕಾಲದಲ್ಲಿ ಸ್ನಾನ ಮಾಡಬಾರದು.

---

೧. ಮುಸ್ತಂ ಮದನಂ ತ್ರಿಫಲಾ ಕರಂಜ ಆರಗ್ವಧಕಲಿಂಗಯವಾಃ ।
ದಾರ್ವೀಸಸಪ್ತಪರ್ಣಾಸ್ನಾನಂ ಸಿದ್ಧಾರ್ಥಕಂ ನಾಮ ॥
ಏಷ ಕಷಾಯೋ ವಮನಂ ವಿರೇಚನಂ ವರ್ಣಕಸ್ತಥೋದ್ಘರ್ಷಃ ।
ತ್ವಗ್ದೋಷಕುಷ್ಠಶೋಫಪ್ರಬಾಧನಃ ಪಾಂಡುರೋಗಘ್ನಃ ॥ ಚ.ಚಿ.ಅ. ೭.

(vii) ಕಿಣ್ವ[೧], ಹಂದಿ ರಕ್ತ, ಜೀರಿಗೆ, ಸೈಂಧವ, ಕೊತ್ತಂಬರಿಸೊಪ್ಪು ಮತ್ತು ಚಂಗಲ್ಕೋಷ್ಠ ಇವುಗಳ ಕಲ್ಕವನ್ನು ಲೇಪಿಸುವುದರಿಂದ ಮಂಡಲ ಕುಷ್ಠ ನಾಶಹೊಂದುವುದು.

(viii) ಮಹಾತಿಕ್ತಘೃತವು ಕುಷ್ಠವೇ ಮುಂತಾದ ಅನೇಕ ರಕ್ತ ಮತ್ತು ಪಿತ್ತವ್ಯಾಧಿಗಳಲ್ಲಿ ಬಹು ಒಳ್ಳೆಯದು.

**ದೋಷೇ ಹೃತೇಽಪನೀತೇ ರಕ್ತೇ ಬಾಹ್ಯಾಂತರೇ ಕೃತೇ ವಮನೇ।**
**ಸ್ನೇಹೇ ಚ ಕಾಲಯುಕ್ತೇನ ಕುಷ್ಠಮನುವರ್ತತೇ ಸಾಧ್ಯಮ್ ।**

**ಚ.ಚಿ.ಅ. ೭.**

ಕುಷ್ಠರೋಗಿಯನ್ನು ವಮನವಿರೇಚನಗಳಿಂದ ಶುದ್ಧಿಗೊಳಿಸಿ ದುಷ್ಟ ರಕ್ತವನ್ನು ಹೊರಹೊರಡಿಸಿ, ಉಳಿದ ದೋಷವನ್ನು ಒಳಭಾಗ ಮತ್ತು ಹೊರ ಭಾಗಗಳೆರಡರಲ್ಲೂ ಶಮನಗೊಳಿಸಿ ಸಕಾಲದಲ್ಲಿ ಸ್ನೇಹಪಾನ ಮಾಡಿಸುವುದ ರಿಂದ ಆ ರೋಗದ ಅನುಬಂಧವಿರುವುದಿಲ್ಲ. ರೋಗವು ಸಾಧ್ಯವಾಗುವುದು.

ಜಂತುಜಗ್ಧವಾದ ದೇಹದಲ್ಲಿ ಕ್ರಿಮಿಭಕ್ಷಣದಿಂದ ಅಂಗಾಂಗಗಳು ಕಿತ್ತು ಬೀಳುತ್ತಿದ್ದರೆ ಮತ್ತು ಲಸೀಕಾದ್ರವವು ಸ್ರವಿಸುತ್ತಿದ್ದರೆ ಗೋಮೂತ್ರದೊಡನೆ ಬೇವಿನಸೊಪ್ಪು ಮತ್ತು ವಾಯುವಿಳಂಗಗಳ ಕ್ವಾಥವನ್ನು ಸೇರಿಸಿ ಸ್ನಾನ ಮತ್ತು ಪಾನಗಳಲ್ಲೂ, ಕಲ್ಕವನ್ನು ಲೇಪನಗಳಲ್ಲೂ ಉಪಯೋಗಿಸಬೇಕು.

**ಪಾನಾಹಾರಪ್ರಸೇಚನೇ ಧೂಪನೇ ಪ್ರದೇಹೇ ಚ ।**
**ಕೃಮಿನಾಶನಂ ವಿಡಂಗಂ ವಿಶಿಷ್ಯತೇ ಕುಷ್ಠಹಾಖದಿರಃ ॥**

**ಚ.ಚಿ.ಅ. ೭.**

ಕೃಮಿನಾಶಕ್ಕೆ ಪಾನ, ಆಹಾರ, ಸ್ನಾನ, ಧೂಪನ ಮತ್ತು ಲೇಪನಗಳಲ್ಲಿ ವಿಡಂಗವೂ, ಕುಷ್ಠವನ್ನೇ ನಾಶಮಾಡುವುದಕ್ಕೆ ಖದಿರವೂ ಬಹುಶ್ರೇಷ್ಠ ವೆನಿಸಿವೆ. ಕುಷ್ಠೋದ್ದಾಲನಕ್ಕೆ (ಕುಷ್ಠವನ್ನು ಕೆರೆದು ಹಾಕುವಿಕೆ) ಚಗತೆಯ

---

೧. ಕಿಣ್ವಂ ವರಾಹರುಧಿರಂ ಪೃಥ್ವೀಕಾಸೈಂಧವಂಚ ಲೇಪಃ ಸ್ಯಾತ್ ।
ಲೇಪೋ ಯೋಜ್ಯಃ ಕುಸ್ತುಂಬುರೂಣಿ ಕುಷ್ಠಂಚ ಮಂಡಲಘ್ನಃ ॥

**ಚ.ಚಿ.ಅ. ೭.**

ಬೀಜ, ವಿಡಂಗ, ಅರಿಸಿನ, ಮರದರಿಸಿನ, ಕಕ್ಕೆಬೇರು, ಹಿಪ್ಪಲಿ ಮತ್ತು ಚಂಗಲ್ಕೋಷ್ಠ ಇವು ಉತ್ತಮವಾದ ಸಾಧನಗಳು. ಹೀಗೆಯೇ ನಾಯಿ, ಹಸು, ಕುದುರೆ, ಹಂದಿ ಮತ್ತು ಒಂಟೆ ಇವುಗಳ ದಂತಗಳಿಂದಲೂ ಕುಷ್ಠವ್ರಣ ವನ್ನು ಕೆರೆದು ಹಾಕಬಹುದು.

**ಪಥ್ಯಾಪಥ್ಯಗಳು**—ಕುಷ್ಠರೋಗಿಗೆ ಲಘುವಾದ ಅನ್ನಪಾನಗಳು, ತಿಕ್ತರಸವುಳ್ಳ ತರಕಾರಿಗಳು, ಭಲ್ಲಾತಕ, ತ್ರಿಫಲಾ, ಬೇವುಗಳು ಸೇರಿರುವ ಆಹಾರಗಳು ಹಿತವಾದುವು. ಅನ್ನ, ಘೃತ, ಹಳೇ ಧಾನ್ಯಗಳು, ಜಾಂಗಲ ಮಾಂಸಗಳು, ಹೆಸರು, ಪಟೋಲ ಇವು ಪಥ್ಯವಾದುವು. ಗುರು, ಅಮ್ಲರಸ ದ್ರವ್ಯಗಳು, ಹಾಲು, ಮೊಸರು, ಆನೂಪಮತ್ಸ್ಯ, ಗುಡ, ಎಳ್ಳು ಅಪಥ್ಯ ವಾದುವು.

## ಶ್ವಿತ್ರಚಿಕಿತ್ಸಾ

ಕಿಲಾಸವು ದಾರುಣ, ಅರುಣ ಮತ್ತು ಶ್ವಿತ್ರ ಎಂದು ಮೂರು ವಿಧ. ಇದು ತ್ರಿದೋಷಜವಾದುದು. ಇದು ರಕ್ತಾಶ್ರಯವಾದ ದೋಷದಿಂದ ರಕ್ತ ವರ್ಣವಾಗಿಯೂ, ಮಾಂಸಾಶ್ರಯವಾದ ದೋಷದಿಂದ ತಾಮ್ರವರ್ಣ ವಾಗಿಯೂ ಮತ್ತು ಮೇದಸ್ಸನ್ನಾಶ್ರಯಿಸಿದ ದೋಷದಿಂದ ಬಿಳುಪಾಗಿಯೂ ಇರುವುದು. ಆಶ್ರಯಗಳಿಗನುಗುಣವಾಗಿ ದಾರುಣ, ಅರುಣ ಮತ್ತು ಶ್ವಿತ್ರ ಗಳೆಂಬ ಹೆಸರುಗಳು ಬರುತ್ತವೆ. ಸಾಮಾನ್ಯವಾಗಿ ಇವೆಲ್ಲವನ್ನೂ ಶ್ವಿತ್ರವೆಂದೇ ಹೇಳುವುದುಂಟು. ಇವು ಉತ್ತರೋತ್ತರ ಒಂದಕ್ಕಿಂತ ಮತ್ತೊಂದು ಚಿಕಿತ್ಸೆಗೆ ಗುರುತರವೆಂದು ತಿಳಿಯತಕ್ಕದ್ದು.

**ವಾತಾದ್ರೂಕ್ಷಾರುಣಂ ಪಿತ್ತಾತ್ತಾಮ್ರಂ ಕಮಲಪತ್ರವತ್ ।**
**ಸದಾಹಂ ರೋಮವಿಧ್ವಂಸಿ ಕಫಾಚ್ಛ್ವೇತಂ ಘನಂಗುರು ॥**
**ಸಕಂಡು ಚ ಕ್ರಮಾದ್ರಕ್ತಮಾಂಸಮೇದಸ್ಸು ಚಾದಿಶೇತ್ ।**

ಅ.ಹೃ.ನಿ. ೧೪.

ಶ್ವಿತ್ರವು ಮೂರು ದೋಷಗಳಿಂದ ಕೂಡಿದ್ದರೂ ವಾತ ಉಲ್ಬಣವಾಗಿದ್ದರೆ ರೂಕ್ಷ ಮತ್ತು ಅರುಣವಾಗಿಯೂ, ಪಿತ್ತವೇ ಹೆಚ್ಚಾಗಿದ್ದರೆ ತಾವರೆ ಹೂವಿನ

ಬಣ್ಣ(ತಾಮ್ರವನ್ನು ಹೋಲುವ ವರ್ಣ)ಕ್ಕೂ ಮತ್ತು ಕಫಪ್ರದಾನವಾಗಿದ್ದರೆ ಬೆಳ್ಳಗೆ ದಪ್ಪವಾಗಿಯೂ, ಗುರುವಾಗಿಯೂ ಮತ್ತು ನವೆಯಿಂದಲೂ ಕೂಡಿ ಕೊಂಡಿರುವುದು.

**ಅಶುಕ್ಲರೋಮಾऽಬಹುಲಮಸಂಸೃಷ್ಟಂಮಿಥೋನವಮ್ ।**
**ಅನಗ್ನಿದಗ್ಧಜಂ ಸಾಧ್ಯಂ ಶ್ವಿತ್ರಂ ವರ್ಜ್ಯಮತೋऽನ್ಯಥಾ ॥**
**ಗುಹ್ಯಪಾಣಿತಲೋಷ್ಠೇಷು ಜಾತಮಪ್ಯಚಿರಂತನಮ್ ।**

ಅ.ಹೃ.ನಿ. ೧೪.

ಶ್ವಿತ್ರದ ಮೇಲೆ ರೋಮವು ಬೆಳ್ಳಗಾಗದೆ, ಚರ್ಮವು ತೆಳುವಾಗಿಯೂ, ಶ್ವಿತ್ರದ ಮಚ್ಚೆಗಳು ಒಂದಕ್ಕೊಂದು ನೇರಿಕೊಳ್ಳದೆಯೂ, ಹೊಸದಾಗಿ ಉಂಟಾ ಗಿರುವ ಮತ್ತು ಅಗ್ನಿದಗ್ಧವಾಗಿಲ್ಲದಿರುವಂತಹ ಶ್ವಿತ್ರವು ಸಾಧ್ಯ. ಇವುಗಳಿಗೆ ವಿಪರೀತವಾಗಿಯೂ, ಗುಹ್ಯ, ಅಂಗೈ, ಅಂಗಾಲು, ತುಟಿಗಳಲ್ಲಿ ಉತ್ಪನ್ನವಾದ ಶ್ವಿತ್ರವು ಅಸಾಧ್ಯ.

**ವಚಾಂಸ್ಯತಥ್ಯಾನಿ ಕೃತಘ್ನಭಾವೋ ನಿಂದಾಸುರಾಣಾಂ ಗುರುಧರ್ಷಣಂಚ ।**
**ಪಾಪಕ್ರಿಯಾ ಪೂರ್ವಕೃತಂಚ ಕರ್ಮಹೇತುಃ ಕಿಲಾಸಸ್ಯ ವಿರೋಧಿಚಾನ್ನಮ್ ॥**

ಚ.ಚಿ. ೭.

ಸುಳ್ಳಾಡುವುದು, ಕೃತಘ್ನತೆಯ ಭಾವನೆ, ದೇವತೆಗಳನ್ನು ನಿಂದಿಸು ವುದು, ಗುರುಹಿರಿಯರನ್ನು ಧಿಕ್ಕರಿಸುವುದು, ಪಾಪಕರ್ಮಗಳನ್ನು ಮಾಡು ವುದು, ಪೂರ್ವಜನ್ಮದ ಕರ್ಮಸಂಚಯ ಮತ್ತು ವಿರುದ್ಧಾಹಾರ ಸೇವನೆ ಇವು ಕಿಲಾಸಕ್ಕೆ ಕಾರಣಗಳು.

ಶ್ವಿತ್ರವಿರುವ ರೋಗಿಗೆ ಮೊದಲು ವಮನ ಮತ್ತು ವಿರೇಚನಗಳನ್ನು ಮಾಡಿಸಿ ಅನಂತರ ವಿಶೇಷ ಚಿಕಿತ್ಸೆಯನ್ನು ನಡೆಸಬೇಕು. ಕಲ್ಲತ್ತಿ ರಸ ಮತ್ತು ಬೆಲ್ಲ ಮಿಶ್ರ ಮಾಡಿ ಕುಡಿಸಿ ಮಲಸ್ರಂಸನ ಮಾಡಿಸುವುದು ಒಳ್ಳೆಯದು. ಈ ಮಿಶ್ರಣವನ್ನು ಕುಡಿದಮೇಲೆ ರೋಗಿಯು ಮೈಗೆ ಎಣ್ಣೆಯನ್ನು ಹಚ್ಚಿಕೊಂಡು

ಮೇಲೆ ಸೂರ್ಯನ ಕಿರಣಗಳು ಬೀಳುವಂತೆ ತನಗೆ ತಡೆಯುವಷ್ಟು ಹೊತ್ತು ಬಿಸಿಲಲ್ಲಿರಬೇಕು. ಬಾಯಾರಿಕೆಗೆ ಪೇಯವನ್ನು ಕುಡಿಯಬೇಕು. ಹೀಗೆ ಮೂರು ದಿನಗಳು ಮಾಡಬೇಕು. ಶ್ವಿತ್ರದಲ್ಲಿ ಬೊಬ್ಬೆಗಳುಂಟಾದರೆ ಅವನ್ನು ಸೂಜಿಯಿಂದ ವೇಧನ ಮಾಡಿ ಲಸೀಕವನ್ನು ಹೊರಡಿಸಿ ಕುಷ್ಠಹರದ್ರವ್ಯಕ್ವಾಥಗಳಿಂದ ತೊಳೆದು, ಮೇಲೆ ಶ್ವಿತ್ರಹರ ಅಥವಾ ಕುಷ್ಠಹರಲೇಪಗಳನ್ನು ಹಾಕಬೇಕು. ಲೇಪಕ್ಕೆ ಮನಃಶಿಲಾ, ವಿಡಂಗ, ಕಾಸೀಸ, ಗೋರೋಚನ, ಸ್ವರ್ಣಕ್ಷೀರಿ ಮತ್ತು ಸೈಂಧವಲವಣಗಳನ್ನು ಅರೆದು ಕಲ್ಕ ಮಾಡಿ ಉಪಯೋಗಿಸಬೇಕು. ಕಲ್ಲತ್ತಿ ರಸ, ಪ್ರಿಯಂಗು ಮತ್ತು ಸಬ್ಬಸೀಗೆ ಬೀಜಗಳನ್ನು ಕ್ವಾಥ ಮಾಡಿ ಅದಕ್ಕೆ ಕಾಕಂಬಿಯನ್ನು ಸೇರಿಸಿ ಹದಿನೈದು ದಿನ ಪ್ರತಿ ಬೆಳಿಗ್ಗೆ ಕುಡಿಸಬೇಕು ; ಅಥವಾ ಪಲಾಶಕ್ಷಾರೋದಕವನ್ನು ಕಾಕಂಬಿಯೊಡನೆ ಕುಡಿಸಬೇಕು. ಖದಿರ ಕಷಾಯವನ್ನಾದರೂ ಕುಡಿಸಬಹುದು. ವಮನ ವಿರೇಚನಗಳಿಂದ ಶರೀರಶುದ್ಧಿಯನ್ನೂ, ರಕ್ತಮೋಕ್ಷಣವನ್ನೂ ಮಾಡಿಕೊಂಡು ರೂಕ್ಷಾನ್ನಪಾನ ಮತ್ತು ಸಕ್ತುವನ್ನು ಸೇವಿಸುವ ಹಾಗು ಪಾಪಕರ್ಮಕ್ಷಯವಾಗಿರುವ ಒಬ್ಬೊಬ್ಬನಿಗೆ ಶ್ವಿತ್ರನಿವಾರಣೆಯಾಗುತ್ತದೆ.


ಕುಷ್ಠ (ತ್ರಿದೋಷಜ)
ವಾತೋತ್ತರ
(i) ಸ್ನೇಹಕರ್ಮ ।
(ii) ವಿರಿಕ್ತಸ್ಯನಿರೂಹಮನುವಾಸನಂ ।
(iii) ತಿಕ್ತಘೃತಮ್ ।
ದೋಷಾಧಿಕ್ಯೇ—ಪುನಃಪುನಃ ಶೋಧನಂ ।
ಬಲ್ಯಂ ಸ್ನೇಹಪಾನಂ ।
ಸ್ಥಿರ, ಕಠಿಣ, ಮಂಡಲೇಷು—ಸ್ವೇದನಂ ।
ವಿಘಟ್ಟನಂ ಕೂರ್ಚೈಃ ।
ಪ್ರಚ್ಛಿತಂಜಲೌಕೋಭಿರವಸೇಚನಂ ।
ಲೇಪಾಃ ।
ಅಶಸ್ತ್ರಚಾರ್ಯೇ—ಕ್ಷಾರಃ ; ರಕ್ತದೋಷಹರಣಂಚ ।
ಸ್ತಬ್ಧಾನ್ಯಸ್ವೇದಲಾನಿ ಸುಪ್ತಾನಿ
(ಪತ್ರೈಃ ಶಸ್ತ್ರೈಃ ಸಮುದ್ರಫೇನೈಃ) ಘರ್ಷಣಂ ; ಪ್ರದೇಹನಂಚ ।
ಪಿತ್ತೋತ್ತರ
ವಿರೇಚನಮ್
(i) ಅಲ್ಪೇ—ಪ್ರಚ್ಛನಂ ।
(ii) ಅಧಿಕೇ—ರಕ್ತಮೋಕ್ಷಣಂ ।
(iii) ಸ್ನೇಹಪಾನಮ್ ।
ಕಫೋತ್ತರ
ವಮನಮ್
(i) ಹೃದಯೋತ್ಕ್ಲೇಶೇ—ವಮನಂ
(ii) ನಸ್ಯಂ
(iii) ವಿರೇಚನಧೂಮ ಲೇಪಾಃ ಕ್ರಿಮಿಘ್ನಾಃ ।

# ವಾತವ್ಯಾಧಿನಿದಾನ

ದುಷ್ಟವಾದ ವಾತದೋಷದಿಂದ ಹುಟ್ಟುವ ವ್ಯಾಧಿಗೆ **ವಾತವ್ಯಾಧಿ** ಎಂದು ಹೆಸರು.

ಪಿತ್ತ ಮತ್ತು ಕಫಗಳು ಪ್ರತ್ಯೇಕ ದೋಷಗಳಾದಾಗ್ಯೂ ಪಿತ್ತವ್ಯಾಧಿ ಅಥವಾ ಕಫವ್ಯಾಧಿ ಎಂದು ಸ್ವತಂತ್ರವಾಗಿ ನಿರ್ದೇಶಮಾಡಿಲ್ಲ. ಏಕೆಂದರೆ ವಾತವು ದೋಷಗಳಲ್ಲೆಲ್ಲಾ ಅತ್ಯಂತ ಬಲಿಷ್ಠವಾದುದು. ಪಿತ್ತ ಮತ್ತು ಕಫಗಳು ವಾತಸಹಾಯದಿಂದ ಮಾತ್ರ ಕಾರ್ಯಕಾರಿಯಾಗಬಲ್ಲವು.

**ಪಿತ್ತಂ ಪಂಗುಃ ಕಫಃ ಪಂಗುಃ ಪಂಗವೋಮಲಧಾತವಃ ||**
**ವಾಯುನಾ ಯತ್ರ ನೀಯಂತೇ ತತ್ರ ಗಚ್ಛಂತಿ ಮೇಘವತ್ ||**

ವಾತರೋಗಗಳು ಶೀಘ್ರಕಾರಿಗಳು, ಚಿಕಿತ್ಸೆಗೆ ಪಿತ್ತ ಅಥವಾ ಕಫರೋಗ ಗಳಿಗಿಂತಲೂ ಕಷ್ಟತರವಾದುವು, ಹೆಚ್ಚು ಬಾಧೆಕೊಡುವುವು ಮತ್ತು ಇವುಗಳಿಗೆ ಆತ್ಯಯಿಕ ಚಿಕಿತ್ಸೆಯನ್ನೇ ಮಾಡಬೇಕು. ಈ ಕಾರಣಗಳಿಂದ ವಾತವ್ಯಾಧಿ ಯನ್ನು ಪ್ರತ್ಯೇಕವಾಗಿ ಹೇಳಿದ್ದಾರೆ. ಸಮಾನ ಕಾರಣಗಳಿಂದ ಪ್ರಕೋಪ ಹೊಂದುವ ಪಿತ್ತ ಮತ್ತು ಕಫದೋಷಗಳು ವಾತದಿಂದ ಸ್ಥಾನಾಂತರ ಒಯ್ಯಲ್ಪ ಡುವುದರಿಂದ ಅವು ಧಾತುಗಳನ್ನು ದೂಷಿಸಿ ರೋಗಗಳನ್ನುಂಟು ಮಾಡುವುವು. ಆಗ ಆಯಾ ದೋಷಪ್ರಾಬಲ್ಯವಿರುವುದೆಂದು ಹೇಳುತ್ತೇವೆ. ರಕ್ತಪಿತ್ತವು ಪಿತ್ತಪ್ರಧಾನ ದೋಷವಾಗಿದೆ. ವಾತವು ಇದನ್ನು ಊರ್ಧ್ವ ಅಥವಾ ಅಧೋ ಮಾರ್ಗದಲ್ಲಿ ತೆಗೆದುಕೊಂಡು ಹೋಗುವುದರಿಂದ ಈ ಸ್ಥಿತಿಗೆ ಊರ್ಧ್ವಗರಕ್ತ ಪಿತ್ತ ಅಥವಾ ಅಧೋಗರಕ್ತಪಿತ್ತವೆಂದು ಹೆಸರು ಬರುವುದು. ಹೀಗೆಯೇ ಕಫ ಪ್ರಧಾನವಾಗಿರುವ ಅಗ್ನಿಮಾಂದ್ಯದಲ್ಲಿ ವಾತ ಕಡಿಮೆಯಿರುವುದರಿಂದ ಅಗ್ನಿ ಜಠರಾಗ್ನಿಯನ್ನು ಪ್ರಜ್ವಲಿಸುವುದಿಲ್ಲ. ಕಫದೋಷವನ್ನು ಊರ್ಧ್ವವಾಗಿ ಒಯ್ದರೆ ಆಗ ಪ್ರಸೇಕ, ಛರ್ದಿ ಮುಂತಾದುವು ಉಂಟಾಗುವುವು. ಆದರೆ ಆಕ್ಷೇಪಕಾದಿ ವಾತರೋಗಗಳಲ್ಲಿ ವಾತ ಸ್ವತಂತ್ರವಾಗಿಯೇ ವಿಕಾರಗಳನ್ನುಂಟು ಮಾಡಬಲ್ಲುದು. ಪಿತ್ತ ಮತ್ತು ಕಫಗಳ ಸಂಸರ್ಗವಾದರೂ ಆಗಬಹುದು.

**ವಾತವ್ಯಾಧಿಗೆ ಕಾರಣಗಳು**—ರೂಕ್ಷಾಹಾರ, ಅಲ್ಪಾಹಾರ, ಅತಿ ವ್ಯವಾಯ ಮತ್ತು ಅತಿಜಾಗರಣೆ, ಹೆಚ್ಚುಕಡಿಮೆಯಾದ ರೋಗೋಪಚಾರಗಳು ಅಥವಾ ಪಂಚಕರ್ಮಗಳಲ್ಲಿ ಅತಿಯಾಗಿ ಕರ್ಶನವಾಗುವುದು, ಅತಿಲಂಘನ, ಅತಿವ್ಯಾಯಾಮ, ಅತಿಯಾಗಿ ಈಜುವುದು, ಚಿಂತಾ, ಶೋಕ, ವಿಷಮ ಶಯ್ಯಾಸನ, ವೇಗಧಾರಣ ಮುಂತಾದುವುಗಳಿಂದ ಬಲಿಷ್ಠವಾದ ವಾತವು ಸ್ನೇಹಾದಿ ಗುಣವಿಹೀನವಾದ ಸ್ರೋತಸ್ಸುಗಳಲ್ಲಿ ಸೇರಿಕೊಂಡು ಸರ್ವಾಂಗ, ಅರ್ಧಾಂಗ ಅಥವಾ ಏಕಾಂಗ ರೋಗಗಳನ್ನುಂಟುಮಾಡುವುದು.

**ಪೂರ್ವರೂಪ**—ಅಸ್ಪಷ್ಟವಾದ ರೂಪಗಳಿರುತ್ತವೆ. ಇದ್ದಕ್ಕಿದ್ದಂತೆಯೇ ವೇಗಬಂದಾಗ ವಾತವು ನಿಜರೂಪಗಳನ್ನು ವ್ಯಕ್ತಪಡಿಸಿ ಸ್ತಂಭ, ಸಂಕೋಚಾದಿ ದೀರ್ಘಕಾಲಿಕ ವಿಕಾರಗಳನ್ನಾಗಲೀ ಆಕ್ಷೇಪ, ಸ್ಫುರಣ, ತೋದಾದಿ ತಾತ್ಕಾಲಿಕ ವಿಕಾರಗಳನ್ನಾಗಲೀ ಉಂಟುಮಾಡುವುದು.

**ಸ್ಥಾನವಿಶೇಷ ರೋಗಗಳು**—ಪ್ರಕುಪಿತ ವಾತವು ಕೋಷ್ಠದಲ್ಲಿದ್ದರೆ ಮಲಮೂತ್ರಗಳ ತಡೆ, ವಂಕ್ಷಣ ಸಂಧಿಗಳಲ್ಲಿ ಶೂಲೆ, ವೃದ್ಧಿಗಳನ್ನೂ, ಹೃದ್ರೋಗ, ಗುಲ್ಮ, ಅರ್ಶ, ಪಾರ್ಶ್ವಶೂಲೆಗಳನ್ನೂ ಮಾಡುವುದು. ಸರ್ವಾಂಗಕುಪಿತ ವಾತವು ಶರೀರದಲ್ಲೆಲ್ಲಾ ಸ್ಫುರಣ, ಭಂಜನ, ಸಂಧಿ ಸ್ಫುಟನಾದಿ ವೇದನೆಗಳನ್ನುಂಟುಮಾಡುವುದು. ಗುದಸ್ಥಾನದಲ್ಲಿ ಕುಪಿತವಾದ ವಾತವು ಮಲ, ಮೂತ್ರ ಮತ್ತು ವಾತಗಳನ್ನು ಅಡ್ಡಪಡಿಸುವುದು. ಶೂಲೆ, ಆಧ್ಮಾನ ಮತ್ತು ಶರ್ಕರಗಳನ್ನೂ ಜಂಘೆ (ಮುಂಗಾಲು), ಊರು (ತೊಡೆ), ಪೃಷ್ಠ(ಬೆನ್ನು)ಗಳಿಗೆ ಸಂಬಂಧಿಸಿದ ರೋಗಗಳನ್ನು ಮಾಡುವುದು; ಆಮಾಶಯದಲ್ಲಿದ್ದರೆ ಹೃದಯ, ನಾಭಿ, ಪಾರ್ಶ್ವ, ಉದರಗಳಲ್ಲಿ ನೋವು, ತೃಷ್ಣಾ, ಉದ್ಗಾರ, ವಿಷೂಚಿಕಾ, ಕಾಸ, ಕಂಠ ಮತ್ತು ಆಸ್ಯಶೋಷಗಳು ಸಂಭವಿಸುವುವು; ಪಕ್ವಾಶಯದಲ್ಲಿದ್ದರೆ ಅಂತ್ರಕೂಜನ, ಶೂಲ, ಆಟೋಪ, ಕಷ್ಟದಿಂದ ಮಲಮೂತ್ರಗಳ ವಿಸರ್ಜನೆ ಮತ್ತು ಆನಾಹಗಳಾಗುತ್ತವೆ. ಕಿವಿ, ಕಣ್ಣು ಮುಂತಾದ ಇಂದ್ರಿಯಗಳಲ್ಲಿರುವಾಗ ದುಷ್ಟವಾತವು ಆಯಾ ಇಂದ್ರಿಯಗಳನ್ನೇ ನಾಶಮಾಡುವುದು. ಚರ್ಮದಲ್ಲಿ ವಾತವು ಪ್ರಕೋಪಹೊಂದಿದರೆ ಚರ್ಮವು ಒರಟಾಗಿ ಬಿರಿಯುವುದು; ಸುಪ್ತಿ (ಜೋಮು) ಕಪ್ಪು ಅಥವಾ ಕೆಂಪು ಬಣ್ಣ

ಗಳಾಗುವುವು ; ಗಿಣ್ಣುಗಳು ನೋಯುವುವು. ರಕ್ತಗತವಾದ ವಾತವು ತೀವ್ರವಾದ ಉರಿ ಮತ್ತು ನೋವುಗಳನ್ನೂ, ವಿಕೃತ ಬಣ್ಣ, ಕಾರ್ಶ್ಯ, ಅರುಚಿ ಮೈಯಲ್ಲಿ ಸಣ್ಣ ಸಣ್ಣ ವ್ರಣ ಅಥವಾ ಅರೂಂಷಿ (ತಲೆಯಲ್ಲಿ ಅನೇಕ ತೂತುಗಳಿರುವ ವ್ರಣ) ಮತ್ತು ವಿಷ್ಟಂಭಗಳನ್ನುಂಟುಮಾಡುವುದು ; ಮಾಂಸ ಮೇದಸ್ಸು ಗಳಲ್ಲಿದ್ದರೆ ಮೈಭಾರ, ಹೊಡೆದಂತೆ ಬಹಳವಾದ ನೋವು ಇವುಗಳಾಗುವುವು. ಅಸ್ಥಿಮಜ್ಜಗಳಲ್ಲಿದ್ದರೆ ಸಂಧಿಗಳಲ್ಲಿ ಗೆಣ್ಣುಗಳಲ್ಲಿ ಭೇದಿಸಿದಂತೆ ನೋವು, ಮಾಂಸ ಕ್ಷೀಣತೆ ಮತ್ತು ದೌರ್ಬಲ್ಯಗಳು, ನಿದ್ರಾನಾಶಗಳಿರುವುವು. ಶುಕ್ರ(ಆರ್ತವ) ಗತವಾದ ಪ್ರಕುಪಿತವಾತವು ಶುಕ್ರವನ್ನು ಜಾಗ್ರತೆಯಾಗಿ ಸ್ರವಿಸುವುದು ಅಥವಾ ನಿಲ್ಲಿಸುವುದು, ಗರ್ಭವನ್ನು ಜಾರಿಸುವುದು ಅಥವಾ ಪ್ರಸವವಾಗದಂತೆ ತಡೆಯು ವುದು ಅಥವಾ ಶುಕ್ರಶೋಣಿತಗಳ ವಿಕಾರಗಳನ್ನುಂಟುಮಾಡುವುದು ಸ್ನಾಯು ಗತವಾದ ವಾತವು ಬಾಹ್ಯ ಅಥವಾ ಅಭ್ಯಂತರಾಯಾಮ, ಖಲ್ಲೀ (ಪಾದ, ಜಂಘೆ, ಊರು, ಕೈ ಮುಂತಾದುವನ್ನು ಮಡಿಸಿದಂತೆ ಮಾಡುವುದು) ; ಸಿರಾಗತವಾಗಿದ್ದರೆ ಮಂದವಾದ ನೋವು, ಶೋಥ, ಸ್ಪಂದನ, ಸಿರಾಶೋಷ ಮತ್ತು ಜೋಮುಗಳನ್ನು ಮಾಡುವುದು. ಸಂಧಿಗತವಾಗಿದ್ದರೆ ಗಾಳಿ ತುಂಬಿದ ಚೀಲದಂತೆ ಸ್ಪರ್ಶನ, ಆಕುಂಚನ ಮತ್ತು ಪ್ರಸಾರಣಗಳಲ್ಲಿ ಬಹಳವಾದ ನೋವು ಅಥವಾ ಚೇಷ್ಟಾಹಾನಿಗಳಿರುವುವು.

**ಅರ್ದಿತ**—ಗಟ್ಟಿಯಾಗಿ ಮಾತನಾಡುವುದು, ಕಠಿಣ ಪದಾರ್ಥಗಳನ್ನು ಅಗಿಯುವುದು, ಜೋರಾಗಿ ನಗುವುದು, ಆಕಳಿಸುವುದು, ತಲೆಯಮೇಲೆ ಭಾರ ಹೊರುವುದು, ಕುತ್ತಿಗೆಯನ್ನು ಹೆಚ್ಚುಕಡಿಮೆಯಾಗಿಟ್ಟುಕೊಂಡು ಮಲಗುವುದು ಈ ಕಾರಣಗಳಿಂದ ಪ್ರಕುಪಿತವಾತವು ಶಿರಸ್ಸು, ನಾಸಾ, ಓಷ್ಠ ಮುಂತಾದ ಸಂಧಿಗಳನ್ನು ಪೀಡಿಸಿ ಕಾರ್ಯಹೀನವಾಗಿ ಮಾಡುವುದು ಮುಖದ ಅರ್ಧ ಭಾಗವನ್ನು ವಕ್ರವಾಗಿಮಾಡುವುದು. ಬಾಯಿ, ಕುತ್ತಿಗೆಗಳು ಸೊಟ್ಟಗಾಗು ವುವು. ತಲೆಯಲ್ಲಾಡುತ್ತಿರುವುದು, ಮಾತನ್ನು ಆಡಲಿಕ್ಕಾಗದಿರುವುದು, ಕಣ್ಣು ಮುಂತಾದುವು ಹೆಚ್ಚು ಕಡಿಮೆಯಾಗುವುವು. ರೋಮಹರ್ಷ, ಕಂಪನ, ಕಣ್ಣಿನಲ್ಲಿ ಕೊಳೆ, ಮನ್ಯಾಹನುಗ್ರಹ ಇವುಗಳುಂಟಾಗುವುವು—ಹೀಗಿರು ವುದಕ್ಕೆ ಅರ್ದಿತವೆಂದು ಹೆಸರು.

**ಆಕ್ಷೇಪಕ**—ಎಲ್ಲಾ ಧಮನಿಗಳಲ್ಲೂ ವಾತವು ಕುಪಿತವಾದರೆ ಅದು ಶರೀರವನ್ನು ಬಾರಿಬಾರಿಗೆ ಆಡಿಸುತ್ತಲೂ ನಿಲ್ಲಿಸುತ್ತಲೂ ಇರುವುದರಿಂದ ಇದಕ್ಕೆ ಆಕ್ಷೇಪಕವೆಂದು ಹೆಸರು ಬಂದಿದೆ. ಇದು ನಾಲ್ಕು ವಿಧ—(೧) ಶುದ್ಧವಾತ, (೨) ಕಫವಾತ, (೩) ಪಿತ್ತವಾತ ಮತ್ತು ಅಭಿಘಾತಜನ್ಯವಾತ. ಗರ್ಭಪಾತ, ಅತಿಯಾಗಿ ರಕ್ತಸ್ರಾವ (ಕ್ಷತ, ರಕ್ತಸ್ರಾವ ಇತ್ಯಾದಿ) ಮತ್ತು ಇತರ ಅಭಿಘಾತ (ಘೃಷ್ಟ, ಭಗ್ನ, ಮರ್ಮಾಭಿಘಾತ)ಗಳಿಂದ ಉಂಟಾದ ಆಕ್ಷೇಪಕಗಳು ಅಸಾಧ್ಯ. ಉಳಿದ ಆಕ್ಷೇಪಕಗಳಲ್ಲಿ ವೇಗಹೋದನಂತರ ರೋಗಿಯು ಸರಿಯಾಗಿರುವನು.

**ಅಪತಾನಕ**—ಪ್ರಕುಪಿತವಾಯು ತನ್ನ ಸ್ಥಾನದಿಂದ ಮೇಲಕ್ಕೆ ಹೊರಟು ಹೃದಯವನ್ನೂ, ಶಿರಸ್ಸು, ಶಂಖಕಗಳನ್ನೂ ಪೀಡಿಸುವುದು. ಶರೀರವನ್ನು ಬಿಲ್ಲಿನಂತೆ ಬಗ್ಗಿಸುವುದು, ಆಕ್ಷೇಪಕವನ್ನೂ, ಮೋಹವನ್ನೂ ಮಾಡುವುದು. ರೋಗಿಯು ಕಷ್ಟದಿಂದ ಉಸಿರಾಡಿಸುವನು. ಮೊದಲು ಕಣ್ಣುಗುಡ್ಡೆಗಳು ಸ್ತಬ್ಧವಾಗಿರುವುವು ಅನಂತರ ರೆಪ್ಪೆಗಳು ಮುಚ್ಚಿಕೊಳ್ಳುವುವು. ಸಂಜ್ಞಾನಾಶವಾಗುವುದು. ಪಾರಿವಾಳದಂತೆ ಧ್ವನಿಮಾಡುವನು. ವೇಗವು ಹೃದಯವನ್ನು ಬಿಟ್ಟ ಕೂಡಲೇ ಸ್ವಸ್ಥನಾಗುವನು; ಪುನಃ ಬಂದರೆ ಹಿಂದಿನಂತೆಯೇ ಆಗುವನು. ಇದಕ್ಕೆ **ಅಪತಂತ್ರಕ**ವೆಂದೂ ಹೆಸರಿದೆ. ಕಫವೂ ಸೇರಿ ಹೆಚ್ಚು ಆಕ್ಷೇಪವಿಲ್ಲದೆ ಸ್ತಬ್ಧವಾಗಿ ಮಾಡಿದರೆ **ದಂಡಾಪತಾನಕ**ವೆನ್ನಲ್ಪಡುವುದು. ಧನುಸ್ಸಿನಂತೆ ಶರೀರವು ಬಗ್ಗಿರುವುದಕ್ಕೆ **ಧನುಸ್ತಂಭ**ವೆಂದು ಹೆಸರು.

**ಆಯಾಮಗಳು**—ವಾತವು ಪಾದಾಂಗುಳಿ, ಗುಲ್ಫ, ಜಠರ, ಹೃದಯ, ಎದೆ ಮತ್ತು ಕುತ್ತಿಗೆಗಳಲ್ಲಿರುವ ಸ್ನಾಯುಗಳಲ್ಲಿ ಸೇರಿದರೆ ವೇಗವಾಗಿ ಆಕ್ಷೇಪವನ್ನು ಮಾಡುವುದು. ಗುಡ್ಡೆಗಳು ಸಿಕ್ಕಿಕೊಂಡು, ದವಡೆಯು ಸ್ತಬ್ಧವಾಗಿ, ಪಕ್ಕೆಯಾಡಿಸದಂತೆ ಮೈಯನ್ನು ಒಳಮುಖಕ್ಕೆ ಬಗ್ಗಿಸುವುದು ಇದಕ್ಕೆ **ಅಭ್ಯಂತರಾಯಾಮ**ವೆಂದೂ, ಬಾಹ್ಯಸ್ನಾಯುಗಳಲ್ಲಿ ಸೇರಿ ಹೀಗೆಯೇ ಮಾಡಿದರೆ **ಬಾಹ್ಯಾಯಾಮ**ವೆಂದೂ ಹೆಸರು.

**ಪಕ್ಷವಧ**—ವಾತವು ಶರೀರದ ಅರ್ಧಭಾಗ ಸ್ನಾಯುಗಳನ್ನು ಶೋಷಣೆ ಮಾಡಿ ಆ ಪಕ್ಕದಲ್ಲಿರುವ ಸಂಧಿಬಂಧಗಳನ್ನು ಸಡಿಲಿಸಿ ನಿಶ್ಚೇತನವಾಗಿ ಮಾಡುವುದು. ಇದಕ್ಕೆ **ಪಕ್ಷವಧ**ವೆಂದು ಹೆಸರು. ಒಂದೇ ಅಂಗ ನಿಶ್ಚೇತನವಾದರೆ

**ಏಕಾಂಗವಾತ**ವೆಂದೂ ಶರೀರದ ಎರಡು ಪಕ್ಕಗಳೂ ಆದರೆ **ಸರ್ವಾಂಗವಾತ**ವೆಂದೂ ಹೇಳಲ್ಪಡುವುದು.

**ಹನುಗ್ರಹ**—ನಾಲಿಗೆಯನ್ನು ಮುಂದಕ್ಕೆ ಮಾಡಿ ಶುದ್ಧಮಾಡುತ್ತಿರುವಾಗ ಅಥವಾ ಒಣಗಿದ ಗಟ್ಟಿಪದಾರ್ಥಗಳನ್ನು ತಿನ್ನುವಾಗ ಅಭಿಘಾತವಾಗಿ ಹನುಮೂಲದಲ್ಲಿ ವಾತಪ್ರಕೋಪವಾದರೆ ಬಾಯನ್ನು ಮುಚ್ಚುವುದಕ್ಕಾಗಲೀ ಅಥವಾ ತೆರೆಯುವುದಕ್ಕಾಗಲೀ ಆಗದೆ **ಹನುಗ್ರಹ**ವುಂಟಾಗುವುದು. ಇದರಿಂದ ತಿನ್ನುವುದು ಮತ್ತು ಮಾತನಾಡುವುದು ಕಷ್ಟವಾಗುವುದು.

**ಮನ್ಯಾಸ್ತಂಭ**—ಹಗಲು ನಿದ್ದೆ, ಹೆಚ್ಚುಕಡಿಮೆಯಾಗಿರುವ ಸ್ಥಳದಲ್ಲಿ ತಲೆಯಿಟ್ಟು ಮಲಗುವುದು, ತಲೆಯೆತ್ತಿಕೊಂಡು ಒಂದೇ ಕಡೆ ನೋಡುತ್ತಿರುವುದು ಇವುಗಳಿಂದ ಶ್ಲೇಷ್ಮದಿಂದ ಆವೃತವಾದ ವಾತವು ಹೆಕ್ಕತ್ತನ್ನು ಹಿಡಿದು ಬಾಧಿಸುವುದು. ಹೀಗೆಯೇ ವಾಗ್ವಾಹಿನೀ ಸಿರೆಗಳಲ್ಲಿ ವಾತಪ್ರಕೋಪವಾದರೆ **ಜಿಹ್ವಾಸ್ತಂಭ**ವನ್ನುಂಟುಮಾಡುವುದು ಇದರಿಂದ ಅನ್ನಪಾನ ಮತ್ತು ಭಾಷಣಗಳನ್ನು ಮಾಡುವುದಕ್ಕಾಗುವುದಿಲ್ಲ.

**ಗೃಧ್ರಸೀ**—ಪ್ರಕುಪಿತವಾತವು ಮೊದಲು ಸ್ಫಿಚ(ಪಿರ್ರೆ)ಗಳಲ್ಲಿ ಪ್ರಾರಂಭವಾಗಿ ಅಲ್ಲಿಂದ ಕ್ರಮವಾಗಿ ಸೊಂಟ, ಬೆನ್ನು, ತೊಡೆ, ಮಂಡಿ, ಮುಂಗಾಲು ಮತ್ತು ಪಾದಗಳಲ್ಲಿ ಸ್ತಬ್ಧತೆ, ನೋವು, ತೋದ ಮತ್ತು ಸ್ಪಂದನಗಳನ್ನುಂಟುಮಾಡುವುದು. ಶುದ್ಧವಾತವಾಗಿದ್ದರೆ ತೋದ, ಶರೀರ ಬಗ್ಗಿರುವುದು, ಜಾನು, ಕಟೀ, ಊರುಸಂಧಿಗಳಲ್ಲಿ ಹೆಚ್ಚಾಗಿ ಸ್ಫುರಣ ಮತ್ತು ಸ್ತಬ್ಧತೆಗಳಿರುವುವು. ಕಫಸಂಸರ್ಗವಿದ್ದರೆ ಅಗ್ನಿಮಾಂದ್ಯ, ತಂದ್ರಾ, ಪ್ರಸೇಕ ಮತ್ತು ಆಹಾರದ ಮೇಲೆ ಅಪೇಕ್ಷೆಯಿಲ್ಲದಿರುವಿಕೆ ಇವುಗಳಿರುವುವು.

**ವಿಶ್ವಾಚೀ**—ಬಾಹುವಿನ ಹಿಂಬದಿಯ ಕಂಡರಗಳು ವಾತಪೀಡಿತವಾದರೆ ಅಂಗೈ, ಬೆರಳುಗಳು ಕರ್ಮಹೀನವಾಗುವುವು.

**ಅವಬಾಹು**—ಬಾಹುವಿನ ಸಿರೆಗಳಲ್ಲಿ ಆಕುಂಚನವಾದರೆ ಅವಬಾಹುವೆಂದೆನಿಸುವುದು.

**ಆಮವಾತ**—ಪ್ರಕುಪಿತವಾತವು ಆಮದೋಷದೊಂದಿಗೆ ಸೇರಿ ಶರೀರವನ್ನು ಸ್ತಬ್ಧಮಾಡುವುದಕ್ಕೆ ಆಮವಾತವೆಂದು ಹೆಸರು. ಮಂದಾಗ್ನಿಯುಳ್ಳವನು ವಿರುದ್ಧಾಹಾರಗಳನ್ನೂ ವಿರುದ್ಧ ನಡೆ ಮುಂತಾದುವನ್ನು ಮಾಡುವುದ

ರಿಂದಲೂ, ಸ್ನಿಗ್ಧವಾದ ಭೋಜನವನ್ನು ಮಾಡಿ ಕೂಡಲೇ ಶ್ರಮವಾಗುವ ಕೆಲಸ(ವ್ಯಾಯಾಮ)ಗಳನ್ನು ಮಾಡುವುದರಿಂದ ಆಮದೋಷಯುಕ್ತವಾದ ವಾತವು ಶ್ಲೇಷ್ಮಸ್ಥಾನವನ್ನು ಸೇರುವುದು. ಅಲ್ಲಿ ಆಮರಸವು ವಿದಗ್ಧಪಾಕವನ್ನು ಹೊಂದಿ ಧಮನಿಗಳನ್ನು ಸೇರಿ ಮೂರು ದೋಷಗಳಿಂದಲೂ ದೂಷಿಸಲ್ಪಡುವುದು. ಇದು ಸ್ರೋತಸ್ಸುಗಳನ್ನು ಸೇರಿದಾಗ ಅಭಿಷ್ಯಂದಿಯನ್ನು ಮಾಡುವುದು. ಇದರಿಂದ ಚರ್ಮದ ಪೈಚ್ಛಿಲ್ಯ ಮತ್ತು ವೈವರ್ಣ್ಯಗಳಾಗುವುವು. ಆಮವು ವ್ಯಾಧಿಗಳಿಗೂ ಆಶ್ರಯವಾಗುವುದು. ಮೂರು ದೋಷಗಳೂ ಒಂದೇ ಸಲ ಪ್ರಕೋಪಹೊಂದಿ ಸಂಧಿಗಳನ್ನು ಸೇರಿ ಸ್ತಬ್ಧತೆ, ದೌರ್ಬಲ್ಯ ಮುಂತಾದುವನ್ನು ಮಾಡುವುವು.

**ಅಂಗಮರ್ದೋಽರುಚಿಸ್ತೃಷ್ಣಾ ಹ್ಯಾಲಸ್ಯಂ ಗೌರವಂ ಜ್ವರಃ ।**
**ಅಪಾಕಃ ಶೂನತಾಂಗಾನಾಮಾಮವಾತಸ್ಯ ಲಕ್ಷಣಮ್ ॥**
ಮಾ.ನಿ. ೨೫.

ಮೈಕೈ ಒಡೆತ, ಅರುಚಿ, ಬಾಯಾರಿಕೆ, ಆಲಸ್ಯ, ಮೈಭಾರ, ಜ್ವರ, ಅಜೀರ್ಣ ಮತ್ತು ಶೋಥ ಇವು ಆಮವಾತದ ಲಕ್ಷಣಗಳು. ಆಮವಾತವು ಪ್ರಕೋಪಗೊಂಡರೆ ರೋಗಿಗೆ ಬಹು ಕಷ್ಟವಾಗುವುದು. ಹಸ್ತ, ಪಾದ, ಶಿರಸ್ಸು, ಗುಲ್ಫ, ತ್ರಿಕಸಂಧಿ, ಮಂಡಿ ಮತ್ತು ಊರುಸಂಧಿಗಳಲ್ಲಿ ದೋಷವಿದ್ದು ನೋವು ಶೋಥಗಳುಂಟಾಗುವುವು. ಚೇಳು ಕುಟುಕಿದಂತಾಗುವುದು ; ಅಗ್ನಿದೌರ್ಬಲ್ಯ, ಪ್ರಸೇಕಾ, ದಾಹ, ಅತಿಮೂತ್ರತೆ, ಕುಕ್ಷಿಯು ಗಟ್ಟಿಯಾಗಿ, ಶೂಲೆ, ನಿದ್ರಾನಾಶ, ಬಾಯಾರಿಕೆ, ಹೃದ್ಗ್ರಹ, ಮಲಬಂಧ ಮುಂತಾದ ಕಷ್ಟತರ ಉಪದ್ರವಗಳಿರುತ್ತವೆ. ಪಿತ್ತದುಷ್ಟಿಯಿಂದ ದಾಹ, ರಾಗಗಳು, ವಾತದಿಂದ ಶೂಲೆ ಮತ್ತು ಕಫದಿಂದ ಸ್ತೈಮಿತ್ಯ, ಗುರುತ್ವ ಮತ್ತು ನವೆಗಳಿರುತ್ತವೆ.

**ಸಾಧ್ಯಾಸಾಧ್ಯ**—ವಿಸರ್ಪ, ದಾಹ, ನೋವು, ವಾತಮೂತ್ರಪುರೀಷಗಳ ತಡೆ, ಮೂರ್ಛೆ, ಅಗ್ನಿಮಾಂದ್ಯ, ಬಲಮಾಂಸಗಳ ಕ್ಷೀಣತೆಗಳಿರುವ ಪಕ್ಷವಧ ಮುಂತಾದ ವ್ಯಾಧಿಗಳು ರೋಗಿಯನ್ನು ಕೊಲ್ಲುತ್ತವೆ. ಶೋಥ, ಸುಪ್ತಿ, ಭಗ್ನ, ಕಂಪ, ಆಧ್ಮಾನಗಳಿಂದ ಕೂಡಿದ ವಾತವ್ಯಾಧಿಯು ಗುಣವಾಗುವುದಿಲ್ಲ. ಒಂದು ದೋಷದಿಂದ ಕೂಡಿದ ಆಮವಾತವು ಸಾಧ್ಯ, ದ್ವಿದೋಷಜವು ಯಾಪ್ಯ, ಮೂರು ದೋಷಗಳೂ ಕುಪಿತವಾಗಿರುವ ಅಥವಾ ಒಂದು ಕಡೆಯಿಂದ

ಮತ್ತೊಂದು ಕಡೆಗೆ ಸಂಚರಿಸುವ ಶೋಥವಿರುವ ಆಮವಾತವು ಕೃಚ್ಛ್ರಸಾಧ್ಯ ವಾದುದು.

## ವಾತವ್ಯಾಧಿಚಿಕಿತ್ಸಾ

### (ಸಾಮಾನ್ಯ ಚಿಕಿತ್ಸೆ[೧])

ಆವರಣವಿಲ್ಲದಿರುವ ಶುದ್ಧ ವಾತದೋಷದಿಂದುಂಟಾದ ವಾತವ್ಯಾಧಿರೋಗ ಗಳಲ್ಲಿ ರೋಗಿಗೆ ಸ್ನೇಹಸ್ವೇದಗಳನ್ನು ಮಾಡಿಸಬೇಕು. ಸ್ನೇಹಪಾನಕ್ಕೆ ಸರ್ಪಿ, ಮಜ್ಜಾ, ವಸಾ ಮತ್ತು ತೈಲಗಳನ್ನು ಉಪಯೋಗಿಸಬೇಕು. ಸ್ನೇಹಪಾನ ದಿಂದ ಜಿಗುಪ್ಸೆಯನ್ನು ಹೊಂದಿದವನಿಗೆ ಸ್ವಲ್ಪ ವಿರಾಮವನ್ನು ಕೊಟ್ಟು ಅನಂತರ ಹಾಲನ್ನು ಕುಡಿಸುವುದರ ಮೂಲಕ ಸ್ನಿಗ್ಧನನ್ನಾಗಿ ಮಾಡಬೇಕು. ಯೂಷ, ಆನೂಪ ಅಥವಾ ನೀರಿನಪ್ರಾಣಿಮಾಂಸ, ಹಾಲು, ಸ್ನೇಹಗಳು, ಅಮ್ಲ ಮತ್ತು ಲವಣಗಳ ಆಹಾರ, ಅನುವಾಸನ, ನಸ್ಯ ಮುಂತಾದುವುಗಳಿಂದ ಆ ರೋಗಿ ಯನ್ನು ಉಪಚರಿಸಬೇಕು. ಇದಾದಮೇಲೆ ಸ್ನೇಹಾಭ್ಯಂಗ ಮಾಡಿಸಿ ನಾಡೀ, ಪ್ರಸ್ತರ ಅಥವಾ ಸಂಕರಸ್ವೇದಗಳನ್ನು ಮಾಡಿಸಬೇಕು. ಅಥವಾ ಅನಾಗ್ನೇಯ ಸ್ವೇದನವನ್ನಾದರೂ ಮಾಡಿಸಬಹುದು—(ಸೆಕೆಯಾಗಿರುವ ಕೊಠಡಿ, ಬೆಚ್ಚಗೆ ಇರುವ ಹೊದ್ದಿಕೆ ಮುಂತಾದುವು ಅನಾಗ್ನೇಯಸ್ವೇದಯೋಗ್ಯವಾದುವು.) ಆಕುಂಚನ ಅಥವಾ ಆಯಾಮದಿಂದ ವಕ್ರವಾದ ಅಂಗವನ್ನು ಸ್ನೇಹಸ್ವೇದ ಗಳಿಂದ ಮೃದುವಾಗಿ ಮಾಡಿ ಸಮುಸ್ಥಿತಿಗೆ ತಂದು ಪಟ್ಟಿಗಳನ್ನೂ ಬಟ್ಟೆಗಳನ್ನೂ ಕಟ್ಟಬೇಕು. ಹರ್ಷ (ಜೋಮು), ತೋದ (ನೋವು), ಆಯಾಮ, ಶೋಥ, ಸ್ತಂಭ ಮುಂತಾದುವು ಸ್ನೇಹಸ್ವೇದಗಳಿಂದ ಹೋಗುವುವು. ಆಯಾ ಭಾಗವು

---

೧. ವಾತಸ್ಯೋಪಕ್ರಮಃ ಸ್ನೇಹಃ ಸ್ವೇದಃ ಸಂಶೋಧನಂ ಮೃದು।
ಸ್ವಾದ್ವಮ್ಲಲವಣೋಷ್ಣಾನಿ ಭೋಜ್ಯಾನ್ಯಭ್ಯಂಗಮರ್ದನಮ್ ॥
ವೇಷ್ಟನಂ ತ್ರಾಸನಂ ಸೇಕೋಮದ್ಯಂ ಪೈಷ್ಟಿಕಗೌಡಿಕಮ್ ।
ಸ್ನಿಗ್ಧೋಷ್ಣಾಬಸ್ತಯೋ ಬಸ್ತಿನಿಯಮಃ ಸುಖಶೀಲತಾ ॥
ದೀಪನೈಃ ಪಾಚನೈಃ ಸಿದ್ಧಾಃ ಸ್ನೇಹಾಶ್ಚಾನೇಕಯೋನಯಃ ।
ವಿಶೇಷಾನ್ಮೇದ್ಯಪಿಶಿತ ರಸತೈಲಾನುವಾಸನಮ್ ॥ ಅ.ಹೃ.ಸೂ. ೧೩

ಮೃದುವಾಗುವುದು. ಸ್ನೇಹವು ಶುಷ್ಕವಾದ ಧಾತುಗಳನ್ನು ಪುಷ್ಟಿಗೊಳಿಸುವುದು; ಅಗ್ನಿಬಲ, ದೇಹಬಲ ಮತ್ತು ಚೈತನ್ಯಗಳನ್ನು ವೃದ್ಧಿಪಡಿಸುವುದು. ಆದುದರಿಂದ ಪುನಃ ಪುನಃ ಸ್ನೇಹಸ್ವೇದಗಳನ್ನು ಮಾಡಿಸುವುದರಿಂದ ಶರೀರದಲ್ಲಿ ವಾತರೋಗಗಳು ನಿಲ್ಲುವುದಿಲ್ಲ.

ಇವುಗಳಿಂದ ಗುಣವಾಗದಿದ್ದರೆ ಆ ರೋಗಿಗೆ ಮೃದುವಾದ ಸ್ನೇಹವಿರೇಚಕಗಳಿಂದ ಶೋಧನ ಮಾಡಬೇಕು. ತಿಲ್ವಕಘೃತ, ಸಾತಲಾಘೃತ, ಹಾಲು ಮತ್ತು ಏರಂಡತೈಲ ಮುಂತಾದುವು ಒಳ್ಳೆಯ ರೇಚಕಗಳು. ಸ್ನಿಗ್ಧ, ಅಮ್ಲ, ಲವಣ ಮತ್ತು ಉಷ್ಣ ಆಹಾರಗಳಿಂದ ಸ್ರೋತಸ್ಸುಗಳಲ್ಲಿ ಮಲಸಂಚಯವಾಗಿರುತ್ತದೆ. ಇದನ್ನು ಹೋಗಲಾಡಿಸುವುದಕ್ಕಾಗಿ ಅನುಲೋಮನಮಾಡುವ ಮೃದುಸ್ನೇಹಗಳು ಹಿತವಾದುವು. ಎಂದರೆ ಮಲ ಸೇರದಿರುವಾಗ ಸ್ನೇಹಸ್ವೇದಗಳನ್ನೂ ಸೇರಿದಮೇಲೆ ವಿರೇಚನಗಳನ್ನೂ ಮಾಡಿಸಬೇಕು. ವಿರೇಚನಕ್ಕೆ ಅನರ್ಹನಾದವನಿಗೆ ನಿರೂಹಗಳನ್ನೂ ಪಾಚನ ಮತ್ತು ದೀಪನಗಳನ್ನೂ ಕೊಡಬೇಕು. ಹೀಗೆ ಶುದ್ಧನಾದನಂತರ ಅವನಿಗೆ ಅಗ್ನಿವೃದ್ಧಿಯಾದುದನ್ನು ತಿಳಿದು ಪುನಃ ಸ್ನೇಹಸ್ವೇದಗಳನ್ನು ಮಾಡಿಸಬೇಕು. ಸ್ವಾದು, ಅಮ್ಲ, ಲವಣ ಮತ್ತು ಸ್ನಿಗ್ಧ ಭೋಜನಗಳನ್ನೇ ಕೊಡುತ್ತಿರಬೇಕು. ನಾವನ ಮತ್ತು ಧೂಮಪಾನಗಳನ್ನು ಉಪಯೋಗಿಸಬೇಕು.

## ವಿಶೇಷಚಿಕಿತ್ಸೆ

ಕೋಷ್ಠಗತವಾದ ವಾತರೋಗದಲ್ಲಿ ಯವಕ್ಷಾರೋದಕವನ್ನು ಕುಡಿಸಬೇಕು. ದೀಪನ ಮತ್ತು ಪಾಚನ ದ್ರವ್ಯಗಳನ್ನು ಸ್ವಲ್ಪ ಅಮ್ಲರಸದೊಂದಿಗೆ ಸೇರಿಸಿ ಕೊಡುವುದರಿಂದ ಮಲಗಳು ಪಚನವಾಗುವುವು. ಆಮಾಶಯದಲ್ಲಿ ದೋಷವು ಸೇರಿದ್ದರೆ ವಮನ ಮಾಡಿಸಬೇಕು. ಅನಂತರ ಏಳು ದಿನ ಷಡ್ಧರಣ[೧] ಯೋಗವನ್ನು ಬಿಸಿನೀರಿನೊಡನೆ ಕುಡಿಸಬೇಕು. ಅಥವಾ ವಚಾದಿ

---

೧. ಚಿತ್ರಕೇಂದ್ರಿಯವೇಪಾಠಾ ಕಟುಕಾತಿವಿಷಾಭಯಾ ।
ವಾತವ್ಯಾಧಿಪ್ರಶಮನೋ ಯೋಗಃ ಷಡ್ಧರಣಃ ಸ್ಮೃತಃ ॥ ಸು. ಚಿ. ೪

ಗಣವನ್ನಾದರೂ ಕುಡಿಸಬೇಕು. ಅಗ್ನಿವೃದ್ಧಿಯಾದಮೇಲೆ ಕೇವಲ ವಾತಹರ ಚಿಕಿತ್ಸೆಯನ್ನು ಮಾಡಬೇಕು. ನಾಭಿಪ್ರದೇಶದಲ್ಲಿ ವಾತದಿಂದ ಶೂಲಾದಿಗಳುಂಟಾಗಿದ್ದರೆ ಬಿಲ್ವದ ತಿರಳು ಮತ್ತು ಮತ್ಸ್ಯಗಳನ್ನು ಪಕ್ವಮಾಡಿ ತಿನ್ನಿಸಬೇಕು. ನಾಭಿಯ ಕೆಳಗೆ ಎಂದರೆ ಗುದ ಪಕ್ವಾಶಯಗಳಲ್ಲಿದ್ದರೆ ಉದಾವರ್ತಹರ ಸ್ನೇಹವಿರೇಚನ, ಬಸ್ತಿಕರ್ಮ ಮತ್ತು ಅವಪೀಡಕಗಳನ್ನೂ ಲವಣಗಳನ್ನೂ (ಲವಣಯುಕ್ತಭೋಜನ, ಕಲ್ಯಾಣಲವಣ ಮುಂತಾದುವು) ಉಪಯೋಗಿಸಬೇಕು. ಬಸ್ತಿಗತವಾದುದನ್ನು ಮೂತ್ರಾಘಾತ ಮತ್ತು ಅಶ್ಮರೀ ಚಿಕಿತ್ಸೆಗಳಲ್ಲಿ ಮಾಡುವ ಬಸ್ತಿಶೋಧನಗಳಿಂದ ಹೋಗಲಾಡಿಸಬೇಕು. ಹೃದಯಸ್ಥಾನದಲ್ಲಿ ಇರುವ ವಾತವನ್ನು ಹೋಗಲಾಡಿಸುವುದಕ್ಕೆ ಮೂರೆಲೆಹೊನ್ನೆಯಿಂದ ಮಾಡಿದ ಕ್ಷೀರಪಾಕವನ್ನು ಕುಡಿಸಬೇಕು. ಶಿರೋಗತವಾದುದನ್ನು ಶಿರೋವಸ್ತಿ, ತೈಲ ಪಿಚು, ಸ್ನೇಹಧೂಮ, ಸುಖೋಷ್ಣಗಂಡೂಷ ಮತ್ತು ಬೃಂಹಣನಸ್ಯಗಳಿಂದ ಚಿಕಿತ್ಸಿಸಬೇಕು. ಸರ್ವಾಂಗ ಕುಪಿತವಾದುದನ್ನು ಅಭ್ಯಂಗ, ಅನುವಾಸನ ಮತ್ತು ನಿರೂಹಗಳಿಂದ ಜಯಿಸಬೇಕು. ಸರ್ವಾಂಗ ಮತ್ತು ಏಕಾಂಗ ಕುಪಿತ ವಾತವನ್ನು ವಸ್ತಿಯೊಂದೇ ಹೋಗಲಾಡಿಸುವುದು. ಕಿವಿ, ಕಣ್ಣು, ಮೂಗು, ನಾಲಿಗೆ ಮತ್ತು ಚರ್ಮಗಳಾದ ಪಂಚಜ್ಞಾನೇಂದ್ರಿಯಗಳಲ್ಲಿ ವಾತಪ್ರಕೋಪವಾಗಿದ್ದರೆ ಸ್ನಿಗ್ಧವಾದ ನಾವನ, ಧೂಮ ಮತ್ತು ತರ್ಪಣೌಷಧಗಳನ್ನು ಉಪಯೋಗಿಸಬೇಕು.

ತ್ವಗಾಶ್ರಿತವಾದ ಪ್ರಕುಪಿತವಾದ ವಾತವನ್ನು ಸ್ವೇದ, ಅಭ್ಯಂಗ ಮತ್ತು ಹೃದ್ಯವಾದ ಆಹಾರಗಳಿಂದಲೂ, ರಕ್ತಾಶ್ರಿತವಾದುದನ್ನು ಶೀತಲಲೇಪ, ವಿರೇಚನ ಮತ್ತು ರಕ್ತಮೋಕ್ಷಣಗಳಿಂದಲೂ ಗುಣಮಾಡಬೇಕು. ವಾತವು ಮಾಂಸ ಮತ್ತು ಮೇದಸ್ಸುಗಳನ್ನು ಸೇರಿದ್ದರೆ ನಿರೂಹವಸ್ತಿಗಳನ್ನೂ ಶಮನ ಕ್ರಿಯೆಗಳನ್ನೂ ಮಾಡಬೇಕು. ಅಸ್ಥಿ ಮತ್ತು ಮಜ್ಜಗತವಾಗಿದ್ದರೆ ಅಭ್ಯಂಗ, ಸ್ವೇದ, ಸ್ನೇಹಪಾನ ಮುಂತಾದುವುಗಳನ್ನು ಮಾಡಿಸಬೇಕು. ಶುಕ್ರಸ್ಥವಾದ ವಾತವನ್ನು ಹೋಗಲಾಡಿಸಲು ರೋಗಿಯ ಮನಸ್ಸಿಗೆ ಸಂತೋಷವನ್ನುಂಟುಮಾಡುವ ಬಲ್ಯ ಮತ್ತು ಶುಕ್ರಲ ಅನ್ನಪಾನಗಳನ್ನು ಕೊಡಬೇಕು. ಶುಕ್ರಮಾರ್ಗವು ತಡೆಯಲ್ಪಟ್ಟದ್ದರೆ ರೋಗಿಗೆ ವಿರೇಚನಮಾಡಿಸಿ, ವಿರಿಕ್ತನಿಗೆ ಹೇಳಿರುವಂತೆ ಪೇಯಾದಿಗಳನ್ನು ಕೊಟ್ಟು, ಬ್ರಹ್ಮಚರ್ಯೆ ಮುಂತಾದ ಪಥ್ಯವಿಧಿಯಲ್ಲಿ

ರಿಸಿ ಮೇಲೆ ಹೇಳಿದಂತೆ ಬಲ್ಯಶುಕ್ರಲಗಳನ್ನು ಕೊಡಬೇಕು. ಗರ್ಭಾಶಯು ವನ್ನು ಆಶ್ರಯಿಸಿದ ವಾತವು ಗರ್ಭವನ್ನು ಮತ್ತು ಹುಟ್ಟುವ ಮಕ್ಕಳನ್ನೂ ಶೋಷಣೆಮಾಡುವುದು. ಈ ವಾತವನ್ನು ಹೋಗಲಾಡಿಸಿ ಗರ್ಭವನ್ನು ಪುಷ್ಟಿಗೊಳಿಸಲು ನೆಲಗುಂಬಳಗೆಡ್ಡೆ ಮತ್ತು ಅತಿಮಧುರಗಳನ್ನು ಕಷಾಯಮಾಡಿ ಸ್ವಲ್ಪ ಸಕ್ಕರೆ ಸೇರಿಸಿ ಕುಡಿಸಬೇಕು.

ಸ್ನಾಯು, ಸಂಧಿ ಮತ್ತು ಸಿರೆಗಳನ್ನು ಸೇರಿದ ವಾತವನ್ನು ಸ್ನೇಹ, ದಾಹ ಮತ್ತು ಉಪನಾಹಗಳಿಂದ ಶಮನಮಾಡಬೇಕು. ಅಂಗಸಂಕೋಚವಾಗಿದ್ದರೆ ಉದ್ದಿನ ಕ್ವಾಥಕ್ಕೆ ಸೈಂಧವಲವಣ ಮತ್ತು ಎಣ್ಣೆಗಳನ್ನು ಹಾಕಿ ಸಿದ್ಧಪಡಿಸಿದ ತೈಲವನ್ನು ಹಚ್ಚಿ ಸ್ನಾನ ಮಾಡಿಸಬೇಕು. ಸುಪ್ತವಾತದಲ್ಲಿ ರಕ್ತಸ್ರಾವವನ್ನು ಮಾಡಿಸಿ ಇಲ್ಲಣ, ಸೈಂಧವಲವಣ ಮತ್ತು ತಿಲತೈಲಗಳನ್ನು ಲೇಪಿಸಬೇಕು ಮೈಯೆಲ್ಲವೂ ಬಿಗಿದುಕೊಂಡಿದ್ದರೆ ವಾತಹರದ್ರವ್ಯಗಳ ಉಪನಾಹವನ್ನು ಕಟ್ಟಬೇಕು.

**ಅಪತಾನಕ**—(೧) ಶುದ್ಧಾಪತಾನಕ, (೨) ವಾತಪಿತ್ತ, (೩) ವಾತಕಫ ಮತ್ತು (೪) ಅಭಿಘಾತ.

ಕಣ್ಣುಗುಡ್ಡೆ ಜಾರಿರುವುದು, ಕಂಪನ (ಮೈನಡುಕ), ಮೇಢ್ರಸ್ತಬ್ಧತೆ, ಬಾಹ್ಯಾಯಾಮ ಮತ್ತು ಮಂಚ ಮುಂತಾದುವುಗಳಿಂದ ಬೀಳುವುದು; ಈ ಯಾವ ಲಕ್ಷಣಗಳೂ ಇಲ್ಲದಿರುವ ಅಪತಾನಕರೋಗಿಯನ್ನು ಜಾಗ್ರತೆಯಾಗಿ ಚಿಕಿತ್ಸಿಸಬೇಕು. ಮೊದಲು ರೋಗಿಗೆ ಚೆನ್ನಾಗಿ ಸ್ನೇಹ, ಸ್ವೇದನ ಮತ್ತು ನಾವನಗಳನ್ನು ಮಾಡಿಸಿ ಸ್ರೋತೋಮಾರ್ಗಗಳು ಪರಿಶುದ್ಧವಾದನಂತರ ಘೃತದ ಅಚ್ಛಪಾನವನ್ನು ಮಾಡಿಸಬೇಕು; ಅಥವಾ ವಿದಾರ್ಯಾದಿಗಣ ಕ್ವಾಥ, ದಧಿ, ಕ್ಷೀರ ಮತ್ತು ಮಾಂಸರಸಗಳಿಂದ ಸಿದ್ಧವಾದ ಘೃತವನ್ನು ಕುಡಿಸಬೇಕು. ಇದರಿಂದ ವಾಯುವು ಬಹಳವಾಗಿ ಹಠಾತ್ತನೆ ವ್ಯಾಪಿಸುವುದಿಲ್ಲ. ಭದ್ರದಾರ್ವಾದಿಗಣ,೧ ಹುರಳಿ, ಯವೆ, ಬದರೀ ಹಣ್ಣುಗಳ ಕ್ವಾಥಕ್ಕೆ ಆನೂಪಮಾಂಸ, ಅಮ್ಲ, ಹಾಲು, ತುಪ್ಪ, ಮಜ್ಜಾ, ವಸಾ ಮತ್ತು ತೈಲಗಳನ್ನೂ ಜೀವನೀಯ ಪ್ರತೀವಾಪವನ್ನೂ ಹಾಕಿ ವಿಧಿವತ್ತಾಗಿ ಮಾಡಿದ ಮಹಾಸ್ನೇಹವನ್ನೂ ಪಾನ, ಅನುವಾಸನ, ಅಭ್ಯಂಗ ಮತ್ತು ನಾವನಗಳಲ್ಲಿ ಉಪಯೋಗಿಸುತ್ತಾ ಸ್ವೇದಾವಗಾಹಗಳನ್ನು ಮಾಡಿಸುವುದರಿಂದ ವಾತರೋಗವು

ನಾಶಹೊಂದುವುದು. ಅಪತಾನಕ ವೇಗವು ಹೋದನಂತರ ಅನೇಕ ಸಲ ಶಿರೋವಿರೇಚನವನ್ನು ಮಾಡಿಸಬೇಕು. ಇದಕ್ಕೆ ಶ್ಲೇಷ್ಮಹರಗಳಾದ ತೀಕ್ಷ್ಣ ಅವಪೀಡ, ಪ್ರಧಮನಗಳನ್ನು ಉಪಯೋಗಿಸಬೇಕು. ವೇಗಗಳ ನಡುವೆ ಹೀಗೆ ಮಾಡುವುದರಿಂದ ವಾತದಿಂದ ವಿಮುಕ್ತನಾಗಿ ಎಚ್ಚರಗೊಳ್ಳುತ್ತಾನೆ. ಅಧಿಕವಾಗಿ ವಾತದೋಷವನ್ನು ಹೋಗಲಾಡಿಸಲು ಸೌವರ್ಚಲಲವಣ, ಅಳಲೆ ಕಾಯಿ, ತ್ರಿಕಟುಗಳಿಂದ ಸಿದ್ಧವಾದ ಘೃತದ ನಸ್ಯವು ಒಳ್ಳೆಯದು. ತಿಲ್ವಕ ಘೃತ ಸೇವನೆಯಿಂದ ದುಷ್ಟವಾದ ಏಕಾಂಗವಾತ, ಸರ್ವಾಂಗವಾತ, ಯೋನಿ ರೋಗ, ಗುಲ್ಮ ಮತ್ತು ಉದರಗಳು ನಾಶವಾಗುವುವು. ಸಂಸರ್ಗದೋಷಗಳನ್ನು ಮಿಶ್ರಚಿಕಿತ್ಸೆಯಿಂದ ಹೋಗಲಾಡಿಸಬೇಕು.

ಕಫಯುಕ್ತವಾದ ಅಪತಾನಕದಲ್ಲಿ ಗೌಳನಬೀಜ, ಅಳಲೆಕಾಯಿ, ಹಿಂಗು, ಪುಷ್ಕರಮೂಲ, ಸೈಂಧವ, ಸೌವರ್ಚಲ ಮತ್ತು ಬಿಡಲವಣಗಳಿಂದ ಮಾಡಿದ ಚೂರ್ಣವನ್ನು ಯವೆಕ್ವಾಥದೊಡನೆ ಕುಡಿಸಬೇಕು. ಹಿಂಗು, ಸೌವರ್ಚಲ, ಶುಂಠಿ, ದಾಳಿಂಬೆ ರಸ ಮತ್ತು ಪೋಟೆಹುಳಿ ರಸಗಳನ್ನು ಸೇರಿಸಿ ಕುಡಿಸಬಹುದು. ಅಥವಾ ವಾತಕಫಹೃದ್ರೋಗ ಔಷಧವನ್ನು ಕೊಡಬಹುದು.

ಅಭಿಘಾತದಿಂದ ಸಂಭವಿಸಿದ ಅಪತಾನಕವು ಅಪಾಯಕಾರಿಯಾದುದ ರಿಂದ ಅದಕ್ಕೆ ಆತ್ಯಯಿಕ ಚಿಕಿತ್ಸೆಯನ್ನು ಮಾಡಬೇಕು.

**ಬಾಹು** ಮತ್ತು ಶಿರೋಗತವಾತಗಳಲ್ಲಿ ಸ್ನೇಹ, ನಸ್ಯ ಮತ್ತು ಸ್ನೇಹ ಪಾನಗಳನ್ನು ಮಾಡಿಸಬೇಕು.

**ಅರ್ದಿತ**—ಬಲಿಷ್ಠನಾದವನಿಗೆ ನಸ್ಯ, ಶಿರೋವಸ್ತಿ, ತಲೆಗೆ ತೈಲಾ ಭ್ಯಂಗ, ಅಕ್ಷಿತರ್ಪಣಗಳನ್ನೂ, ನಾಡೀಸ್ವೇದ ಮತ್ತು ಆನೂಪಮಾಂಸದ ಉಪನಾಹಸ್ವೇದಗಳನ್ನೂ ಮಾಡಿಸಬೇಕು.[1] ಕ್ಷೀರತೈಲವನ್ನು[2] ಅಥವಾ ಕ್ಷೀರ

---

೧. ಕುಲತ್ಥಯವಕೋಲಾನಿ ಭದ್ರದಾರ್ವಾದಿಕಂ ಗಣಮ್ ।
ನಿಃಕ್ವಾಥ್ಯಾನೂಪಮಾಂಸಂಚ ತೇನಾಮ್ಲೈಃ ಪಯಸಾಪಿಚ ॥
ಸ್ವಾದುಸ್ಕಂಧಪ್ರತೀವಾಪಂ ಮಹಾಸ್ನೇಹಂ ವಿಪಾಚಯೇತ್ ।
ಸೇಕಾಭ್ಯಂಗಾವಗಾಹಾನ್ನಪಾನನಸ್ಯಾನುವಾಸನೈಃ ॥
**ಸಂಹಂತಿ ವಾತಂ ತೇ ತೇ ಚ ಸ್ನೇಹಸ್ವೇದಾಃ ಸುಯೋಜಿತಾಃ ॥ ಅ. ಹೃ. ಚಿ. ೨೧.**

೨. **ಕ್ಷೀರತೈಲ ಸು. ಚಿ. ಅ. ೫.**

ಘೃತವನ್ನು ಪಾನಾಭ್ಯಂಗಾದಿಗಳಲ್ಲಿ ಉಪಯೋಗಿಸಬೇಕು. ಶೋಫವಿದ್ದರೆ ವಮನವನ್ನೂ, ದಾಹರಾಗಗಳಿದ್ದರೆ ಸಿರಾವ್ಯಧನವನ್ನೂ ಮಾಡಬೇಕು. **ಆಯಾಮ**ಗಳಲ್ಲೂ ಇದೇ ಚಿಕಿತ್ಸೆಯನ್ನು ಅನುಸರಿಸಬೇಕು. ರೋಗಿಯನ್ನು ತೈಲದ್ರೋಣಿಯಲ್ಲಿ ಮಲಗಿಸಿ ಅನಂತರ ಸ್ವೇದನ ಮತ್ತು ಸ್ನಾನಗಳನ್ನು ಮಾಡಿಸಬೇಕು. **ಅಂತರಾಯಾಮವು** ದುಸ್ಸಾಧ್ಯವಾದುದು.

**ಧನುಸ್ತಂಭ**—ಹಲ್ಲು ಮತ್ತು ಬಾಯಿಗಳು ವಿವೃತವಾಗಿ, ಅಂಗಗಳು ಸ್ವಾಧೀನದಲ್ಲಿಲ್ಲದೆ ಅಥವಾ ಚೇಷ್ಟಾರಹಿತವಾಗಿಯೂ, ಮೈ ಬಹಳವಾಗಿ ಬೆವರುತ್ತಿರುವ, ವೇಗಗಳು ಮೇಲಿಂದಮೇಲೆ ಬರುತ್ತಿರುವ ರೋಗಿಯು ಹತ್ತು ದಿನಗಳಾದನಂತರ ಬದುಕುವುದಿಲ್ಲ. ಇವಕ್ಕೆ ವಿಪರೀತ ಲಕ್ಷಣಗಳಿದ್ದರೆ ಬದುಕುವನು.

**ಹನುಸ್ರಂಸ** ಮತ್ತು **ಹನುಗ್ರಹ**—ಸಂಧಿಚ್ಯುತವಾಗಿ ಅಥವಾ ಸ್ವಾಧೀನ ತಪ್ಪಿ ತೆರೆದುಕೊಂಡಿರುವ ದವಡೆಯನ್ನು ತೈಲದಿಂದ ತಿಕ್ಕಿ ಸ್ವೇದನ ಮಾಡಿ ಸ್ವಸ್ಥಾನದಲ್ಲಿರಿಸಬೇಕು. ದವಡೆಯು ಕಚ್ಚಿಕೊಂಡಿದ್ದರೆ ಇದೇ ರೀತಿಯಲ್ಲಿ ಸ್ನೇಹಸ್ವೇದಗಳನ್ನು ಮಾಡಿ ಬುದ್ಧಿವಂತಿಕೆಯಿಂದ ಬಿಡಿಸಬೇಕು. ಅನಂತರ ಆಯಾಮದಲ್ಲಿ ಹೇಳಿದಂತೆ ನಸ್ಯ, ತೈಲಾಭ್ಯಂಗಾದಿ ಕ್ರಿಯೆಗಳನ್ನು ನಡೆಸಬೇಕು.

**ಜಿಹ್ವಾಸ್ತಂಭ**ವನ್ನು ಆಯಾ ಅವಸ್ಥೆಗೆ ತಕ್ಕಂತೆ ವಾತೋಪಕ್ರಮದಿಂದ ಚಿಕಿತ್ಸಿಸಬೇಕು.

**ಪಕ್ಷಾಘಾತ**—ಅಂಗ ಬತ್ತಿಹೋಗದೆ ಇರುವ, ನೋವಿರುವ ಮತ್ತು ತಿಳುವಳಿಕೆಯುಳ್ಳ ಮತ್ತು ಚಿಕಿತ್ಸೆಗೆ ಅನುಕೂಲಗಳುಳ್ಳ ಪಕ್ಷಾಘಾತ ರೋಗಿಗೆ ಮೊದಲು ಸ್ನೇಹಸ್ವೇದಗಳನ್ನು ಮಾಡಿ ಮೃದುಶೋಧನೌಷಧಗಳಿಂದ ಶೋಧನ ಮಾಡಿಸಿ (ವಮನ ಮತ್ತು ವಿರೇಚನ) ಅನುವಾಸನ ಮತ್ತು ಆಸ್ಥಾಪನವಸ್ತಿಗಳನ್ನು ಆಯಾಕಾಲಗಳಲ್ಲಿ ಕೊಟ್ಟು ಆಕ್ಷೇಪಕದಂತೆ ಚಿಕಿತ್ಸಿಸಬೇಕು. ವಿಶೇಷವಾಗಿ ಮಸ್ತಿಷ್ಕಕ್ಕೆ (ನೆತ್ತಿಯ ಮೇಲೆ ಸ್ನೇಹಪಿಚುವನ್ನು ಹಾಕಿರುವುದು)

ಶಿರೋವಸ್ತಿ, ಅಣುತೈಲದಿಂದ ಅಭ್ಯಂಗ, ಸಾಲ್ವಣದಿಂದ[೧] **ಉಪನಾಹ, ಬಲಾ** ತೈಲದಿಂದ ಅನುವಾಸನಗಳನ್ನು ಮಾಡಿಸಬೇಕು. ಹೀಗೆ ಮೂರು ಅಥವಾ ನಾಲ್ಕು ತಿಂಗಳು ಕಾಲ ಬಿಡದೆ ಚಿಕಿತ್ಸಿಸಬೇಕು.

**ಅವಬಾಹುವಿನಲ್ಲಿ** ಬೃಂಹಣ ನಸ್ಯ ಮತ್ತು ಆಹಾರದನಂತರ ಸ್ನೇಹ ಪಾನಗಳನ್ನು ಮಾಡಿಸಬೇಕು.

**ಊರುಸ್ತಂಭದಲ್ಲಿ** ಸ್ನೇಹವನ್ನಾಗಲೀ ಶೋಧನವನ್ನಾಗಲೀ ಮಾಡ ಬಾರದು. ಶ್ಲೇಷ್ಮ, ಆಮಯುಕ್ತವಾದ ಮೇದಸ್ಸುಗಳೇ ಹೆಚ್ಚಾಗಿರುವುದರಿಂದ ಅವು ಕಡಿಮೆಯಾಗುವಂತೆ ಯುಕ್ತಿಯಿಂದ ರೂಕ್ಷೋಪಚಾರವನ್ನು ಮಾಡ ಬೇಕು. ಯವೆ, ಸಾವೆ, ಕೋದ್ರವ (ಹಾರಕ), ಉಪ್ಪಿಲ್ಲದಂತೆ ಸ್ವಲ್ಪವೇ ಎಣ್ಣೆ ಹಾಕಿ ನೀರಿನಲ್ಲಿ ಬೇಯಿಸಿದ ತರಕಾರಿಗಳಿಂದ ಮಾಡಿದ ಪಲ್ಯ ಮತ್ತು ತುಪ್ಪ ಹಾಕದೆ ಮಾಡಿರುವ ಮಾಂಸರಸಗಳನ್ನು ತಿನ್ನಿಸಬೇಕು. ಕುಡಿಯುವು ದಕ್ಕೆ ಮಧೂದಕ ಮತ್ತು ಮಧ್ವರಿಷ್ಟಗಳು ಹಿತವಾದುವು. ಬಿಸಿನೀರಿನೊಡನೆ ಷಡ್‌ಧರಣ ಚೂರ್ಣವನ್ನು ಕುಡಿಸಬೇಕು. ಅಥವಾ ಪಿಪ್ಪಲ್ಯಾದಿಗಣದಿಂದ ಮಾಡಿದ ಚೂರ್ಣವನ್ನಾದರೂ ಬಿಸಿನೀರಿನೊಂದಿಗೆ ಕುಡಿಸಬಹುದು. ತ್ರಿಫಲಾ ಶುಂಠಿ ಚೂರ್ಣವನ್ನು ಜೇನುತುಪ್ಪದೊಡನೆಯಾಗಲೀ, ಗುಗ್ಗುಳು ಅಥವಾ ಗೋಮೂತ್ರ ಶಿಲಾಜತುವನ್ನು ಗೋಮೂತ್ರದೊಂದಿಗಾಗಲೀ ಸೇವಿಸಲು ಕೊಡಬೇಕು. ಇದರಿಂದ ಕಫ ಮತ್ತು ಮೇದಸ್ಸುಗಳು ಸೇರಿರುವ ವಾತವು ಹೋಗುವುದು. ಹೀಗೆಯೇ ಈ ಚಿಕಿತ್ಸೆಯಿಂದ ಹೃದ್ರೋಗ, ಅರುಚಿ, ಗುಲ್ಮ ಮತ್ತು ಅಂತರ್ವಿದ್ರಧಿಗಳು ಗುಣವಾಗುವುವು. ರೂಕ್ಷಸ್ವೇದ ಮತ್ತು ಉತ್ಸಾದನಕ್ಕೆ ಕ್ಷಾರ ಮತ್ತು ಮೂತ್ರಗಳನ್ನೂ, ಹಚ್ಚುವುದಕ್ಕೆ ಗೋಮೂತ್ರ ಮತ್ತು ಹೊಂಗೆಬೀಜದ ಕಲ್ಕವನ್ನೂ ಉಪಯೋಗಿಸಬೇಕು.

**ಆಮವಾತ**—(i) ವತ್ಸಕಾದಿ ಅಥವಾ ಹರಿದ್ರಾದಿ ವಚಾದಿಗಣದ

---

೧. ಕಾಕೋಲ್ಯಾದಿಃ ಸವಾತಘ್ನಃ ಸರ್ವಾಮ್ಲದ್ರವ್ಯಸಂಯುತಃ ।
ಸಾನೂಪೌದಕಮಾಂಸಸ್ತು ಸರ್ವಸ್ನೇಹಸಮನ್ವಿತಃ ॥
ಸುಖೋಷ್ಣಃ ಸ್ಪಷ್ಟಲವಣಃ ಸಾಲ್ವಣಃ ಪರಿಕೀರ್ತಿತಃ ।
ತೇನೋಪನಾಹಂ ಕುರ್ವೀತ ಸರ್ವದಾ ವಾತರೋಗಿಣಾಮ್ ॥ ಸು. ಚಿ. ೪.

ಚೂರ್ಣಕ್ಕೆ ಸ್ವಲ್ಪ ಸೈಂಧವಲವಣವನ್ನು ಸೇರಿಸಿ ಬಿಸಿನೀರಿನೊಡನೆ ಕುಡಿಸ ಬೇಕು. ಷಡ್‌ಧರಣಕ್ವಾಥವನ್ನಾದರೂ ಕುಡಿಸಬಹುದು. (ii) ತ್ರಿಫಲಾ, ಚವ್ಯ, ಕಟುಕರೋಹಿಣಿ, ಹಿಪ್ಪಲಿ ಮತ್ತು ಕೊನ್ನಾರಿಗೆಡ್ಡೆಗಳ ಚೂರ್ಣವನ್ನು ಜೇನುತುಪ್ಪದಲ್ಲಿ ಕಲಸಿ ನೆಕ್ಕಿಸಬೇಕು (iii) ಚವ್ಯ, ಅಳಲೆಕಾಯಿ, ಚಿತ್ರ ಮೂಲ ಮತ್ತು ದೇವದಾರುಗಳನ್ನು ಕಲ್ಕಮಾಡಿ ಜೇನುತುಪ್ಪದಲ್ಲಿ ನೆಕ್ಕಿಸ ಬೇಕು. (iv) ಗೋಮೂತ್ರದೊಡನೆ ಅಳಲೆಕಾಯಿ, ಮಹಿಷಾಕ್ಷಿಗುಗ್ಗುಳು ಅಥವಾ ಗೋಮೂತ್ರ ಶಿಲಾಜತುಗಳನ್ನು ಕುಡಿಸಬೇಕು. (v) ತ್ರಿಕಟು, ಚಿತ್ರಮೂಲ, ಮುಸ್ತಾ, ತ್ರಿಫಲಾ, ವಿಡಂಗ, ಗುಗ್ಗುಳು ಇವುಗಳ ಸಮಭಾಗ ಚೂರ್ಣವನ್ನು ಸೇವಿಸಬೇಕು. ಇವುಗಳಿಂದ ಮೇದಸ್ಸು, ಶ್ಲೇಷ್ಮ ಮತ್ತು ಆಮ ವಾತಗಳಿಂದಾದ ರೋಗಗಳು ನಾಶವಾಗುವುವು.

ಕ್ಷಾರಮೂತ್ರಗಳಿಂದ ಸ್ವೇದ, ಸ್ನಾನ ಮತ್ತು ಉದ್ವರ್ತನಗಳು ಕಫ ಮತ್ತು ಮೇದಸ್ಸುಗಳಿಂದ ಸೇರಿದ ವಾತವನ್ನು ಹೋಗಲಾಡಿಸುವುವು. ಹೊಂಗೆ ಬೀಜ ಮತ್ತು ಸಾಸುವೆಗಳನ್ನು ಹೆಚ್ಚು ಗೋಮೂತ್ರದಲ್ಲಿ ಅರೆದು ಲೇಪಿಸ ಬಹುದು. ಅಥವಾ ಎಕ್ಕೆ. ಸಿಹಿಹಾಲೆ, ಬೇವು ಮತ್ತು ದೇವದಾರುಗಳ ಬೇರುಗಳ ಚೂರ್ಣಕ್ಕೆ ಸಾಸಿವೆ, ಹಸಿಮಣ್ಣಿನ ಹೆಂಟೆ (ಜೇಡಿಮಣ್ಣು) ಮತ್ತು ಹುತ್ತದ ಮಣ್ಣುಗಳನ್ನು ಪುಡಿಮಾಡಿ ಸೇರಿಸಿ ಜೇನುತುಪ್ಪದಲ್ಲಿ ಕಲಸಿ ಹಚ್ಚ ಬಹುದು. ಕಫವನ್ನು ಕಡಿಮೆ ಮಾಡುವುದಕ್ಕೆ ರೋಗಿಗೆ ತಡೆಯುವಷ್ಟು ವ್ಯಾಯಾಮವನ್ನು ಮಾಡಿಸಬೇಕು; ನೆಗೆಯುವುದು, ಈಜುವುದು ಇವೆಲ್ಲಾ ಹಿತವಾದುವು. ಶ್ಲೇಷ್ಮ ಮತ್ತು ಮೇದಸ್ಸುಗಳು ಕ್ಷೀಣವಾಗಿದ್ದರೆ ಸ್ನಿಗ್ಧಪದಾರ್ಥ ಗಳನ್ನು ಕೊಡಬೇಕು.

ಗೃಧ್ರಸೀವ್ಯಾಧಿಯಲ್ಲಿ ಗುಲ್ಫ ಮತ್ತು ಕಂಡರಗಳ ಮಧ್ಯದಲ್ಲಿ ಸಿರಾವ್ಯಧ ವನ್ನು ಮಾಡಬೇಕು. ವಸ್ತಿ ಮತ್ತು ಅಗ್ನಿಕರ್ಮಗಳನ್ನು ನಡೆಸಬೇಕು.

ಖಲ್ಲೀರೋಗದಲ್ಲಿ ಸ್ನಿಗ್ಧೋಷ್ಣವಾದ ಕ್ಷೀರ (ಪಾಯಸ), ಮಾಂಸ, ತೈಲ ಮತ್ತು ಘೃತಗಳಿಂದ ಕೂಡಿದ ಉಪನಾಹವನ್ನು ಮಾಡಬೇಕು.

**ತೂನಿ ಮತ್ತು ಪ್ರತಿತೂನಿ**—ಬಿಸಿನೀರಿಗೆ ತುಪ್ಪ ಮತ್ತು ಸೈಂಧವ ಲವಣಗಳನ್ನಾಗಲೀ, ಹಿಪ್ಪಲೀ ಚೂರ್ಣವನ್ನಾಗಲೀ ಹಾಕಿ ಕುಡಿಸಬೇಕು.

ಅಥವಾ ಹೆಚ್ಚು ಹಿಂಗು ಮತ್ತು ಯವಕ್ಷಾರಗಳನ್ನು ಹಾಕಿರುವ ತುಪ್ಪವನ್ನು ಕುಡಿಸಬೇಕು. ಬಸ್ತಿಗಳನ್ನು ಪಯೋಗಿಸಬೇಕು.

**ಆಧ್ಮಾನ**—ಅಪತರ್ಪಣ, ಪಾಣಿತಾಪ (ಬಿಸಿಕೈಯಿಂದ ಶಾಖ ಕೊಡುವುದು) ಮತ್ತು ಫಲವರ್ತಿಗಳು ಹಿತವಾದುವು. ಪಾಚನೀಯ, ದೀಪನೀಯ ಔಷಧಗಳನ್ನು ಕೊಟ್ಟು ಬಸ್ತಿಗಳನ್ನು ಪಯೋಗಿಸಬೇಕು. ಲಂಘನ ಮಾಡಿಸಿದ ನಂತರ ಆಹಾರಕಾಲದಲ್ಲಿ ಧಾನ್ಯಕ, ಜೀರಿಗೆ ಮುಂತಾದ ದೀಪನದ್ರವ್ಯಸಿದ್ಧವಾದ ಆಹಾರಗಳನ್ನು ಕೊಡಬೇಕು.

**ಪ್ರತ್ಯಾಧ್ಮಾನ**ದಲ್ಲಿ ವಮನ ಮತ್ತು ಲಂಘನಗಳನ್ನು ಮಾಡಿಸಿ ದೀಪನ ದ್ರವ್ಯಗಳನ್ನು ಪಯೋಗಿಸಬೇಕು.

ಉಳಿದ ವಾತರೋಗಗಳನ್ನು ಆಯಾ ಸ್ಥಾನ, ದೂಷ್ಯ ಮುಂತಾದುವನ್ನು ತಿಳಿದು ಅವುಗಳಿಗೆ ಸರಿಯಾಗಿ ವಾತದ ಸಾಮಾನ್ಯ ಮತ್ತು ವಿಶೇಷ ಚಿಕಿತ್ಸೆಗಳನ್ನು ಮಾಡಬೇಕು.

# ವಾತವ್ಯಾಧಿ ಚಿಕಿತ್ಸಾ

| ಶುದ್ಧವಾತ | ವಾತಪಿತ್ತ | ವಾತಕಫ |
|---|---|---|
| ಸ್ನೇಹಃ, ಸ್ವೇದಃ, ಮೃದುಶೋಧನಂ,<br>ಕ್ಲಾಂತೇ ಆಶ್ವಾಸನಂ, ಕ್ಷೀರವರ್ತನಂ, ವಸ್ತಯಃ ।<br>ಸ್ವಾದ್ವಮ್ಲಲವಣ, ಸ್ನಿಗ್ಧೋಷ್ಣಭೋಜನಾನಿ,<br>ಜಾಂಗಲಮಾಂಸಂ ಸ್ಥಾನವಿಶೇಷಾತ್—<br>ವಸ್ತಿ, ನಸ್ಯಧೂಮಾದಯಃ<br>ಆಯಾಮಾಕುಂಚನಯೋಃ ಸ್ನೇಹಸ್ವೇದೌ ವೇಷ್ಟನಂ ಚ ।<br>ಸರ್ವಾಂಗೈಕಾಂಗಗೇವಸ್ತಯಃ ।<br>ಸಂಧ್ಯಸ್ಥಿಕಂಡರಾಸು ದಾಹಃ । | ಸ್ನಿಗ್ಧಶೀತಲೇಪಾಭ್ಯಂಗಾಃ ।<br>ರಕ್ತಮೋಕ್ಷಣಮ್ ।<br>ಶುದ್ಧವಾತಹರಚಿಕಿತ್ಸಾ । | ಆಮೇ, ಕಫಾವೃತೇ<br>ಮೇದೇಚ ಲಂಘನಂ,<br>ಪಾಚನಂ, ದೀಪನಂ,<br>ಶೋಧನಂ ।<br>ಶ್ಲೇಷ್ಮಕ್ಷಯಾರ್ಥಂ<br>ವ್ಯಾಯಾಮಃ ।<br>ಕ್ಷೀಣಕಫೇಘೃತಮ್ ।<br>ಶುದ್ಧವಾತಹರಚಿಕಿತ್ಸಾ । |

ಕೋಷ್ಠಗೇ ಯವಕ್ಷಾರೋಪಕಮ್ । ಸಾಮ್ಲಂ ದೀಪನಪಾಚನಂ ಮಲಪಾಚನಾಯ ॥
ಆಮಾಶಯಗೇ ವಮನಂ, ಆಸಪ್ತರಾತ್ರಾತ್ ಷಡ್ಧರಣಂ, ವಚಾದಿರ್ವಾ । ನಾಭಿಜೇ ಬಿಲ್ವಮತ್ಸ್ಯಾನಿ ।
ಗುದಪಕ್ವಾಶಯಗೇ ಉದಾವರ್ತಹರಣಾನಿ । ಬಸ್ತಿಜೇಮೂತ್ರಾಘಾತಾಶ್ಮರೀ ಹರಣಂಚ ।
ಹೃದಿ ತ್ರಿಪರ್ಣೀ ಕ್ಷೀರಪಾನಂ । ಶಿರಸಿ ಶಿರೋವಸ್ತಿಃ, ಪಿಚುಧೂಮಾದಯಃ ।
ಸರ್ವಾಂಗಜೇ ಅಭ್ಯಂಗಾನುವಾಸನನಿರೂಹಾಃ । ಶ್ರೋತ್ರಾದಿಷು ನಾವನತರ್ಪಣಾನಿ ।
ಸ್ನಾಯುಸಂಧ್ಯಸ್ಥಿಷು ಸ್ನೇಹದಾಹೋಪನಾಹಾಃ । ಸಂಕುಚಿತೇಂಗೇ ಮಾಷತೈಲಂ । ಸುಪ್ತೇಂಗೇ ರಕ್ತಮೋಕ್ಷಣಲೇಪಾದಯಃ ।
ಶುದ್ಧಾಪತಾನಕೇ ಸ್ನೇಹಸ್ವೇದೋನಾವನಂಚ । ಶುದ್ಧಿರಚ್ಛಪಾನಂ । ವಿದಾರ್ಯಾದಿಘೃತಂವಾ ।
ಮಹಾಸ್ನೇಹಪಾನಂ । ಅನುವಾಸನಾಭ್ಯಂಗಾಃ । ವೇಗಾಂತರೇ ಕಫಹರಂ ಶಿರೋರೇಚನಂ (ಅವಪೀಡಪ್ರಧಮನಾಃ), ಸೌವರ್ಚಲಾಭಯಾವ್ಯೋಷಘೃತಂ ನಸ್ಯಮ್ ।

# ವಾತರಕ್ತನಿದಾನ

ಪ್ರಕುಪಿತವಾತ ಮತ್ತು ವಿದಗ್ಧರಕ್ತ ಇವು ಪರಸ್ಪರ ವಿರೋಧಭಾವವನ್ನು ಹೊಂದಿರುವುದಕ್ಕೆ **ವಾತರಕ್ತ**ವೆಂದು ಹೆಸರು.

**ಕಾರಣ** ಮತ್ತು **ಸಂಪ್ರಾಪ್ತಿ**—ವಿದಾಹಿ ಮತ್ತು ವಿರುದ್ಧ ಅನ್ನಗಳು ರಕ್ತವನ್ನು ಕೆಡಿಸುತ್ತವೆ; ವಿಧಿತಪ್ಪಿ ನಿದ್ದೆ, ಜಾಗರಣೆ ಮತ್ತು ಮೈಥುನಗಳನ್ನು ಮಾಡುವುದರಿಂದಲೂ ವಾತಕೋಪನ ಮಾಡುವ ಇತರ ಕಾರಣಗಳಿಂದಲೂ ಶೀತಲ ಸೇವನೆಯಿಂದಲೂ ವಾತ ಮತ್ತು ರಕ್ತಗಳು ವಿರೋಧಭಾವನೆಯನ್ನು ಹೊಂದುವುವು. ಇದು ವಿಶೇಷವಾಗಿ ಸುಕುಮಾರ ದೇಹವುಳ್ಳವರಲ್ಲೂ ಓಡಾಟವಿಲ್ಲದೆ ಸೋಮಾರಿಯಾಗಿರುವವರಲ್ಲೂ ಸಂಭವಿಸುವುದು. ಕಟು, ಅಮ್ಲ, ಲವಣ, ಕ್ಷಾರ, ಸ್ನಿಗ್ಧ, ಉಷ್ಣಭೋಜನಗಳೂ, ಕೊಳೆತ ಅಥವಾ ಒಣಗಿದ ಪ್ರಾಣಿಮಾಂಸ, ಆನೂಪಮಾಂಸ, ಹುರಳಿ, ಉದ್ದು, ಅವರೆ, ವಿರುದ್ಧ ತರಕಾರಿ, ಮೊಸರು, ಆರನಾಳ, ಹುಳಿಮಜ್ಜಿಗೆ, ಆಸವಾದಿಗಳು ರಕ್ತದೂಷಣೆಗೆ ಕಾರಣವಾಗುತ್ತವೆ. ಆಗ ಅಭಿಘಾತದಿಂದಲೂ ಮತ್ತು ಶರೀರಶುದ್ಧಿಯನ್ನು ಮಾಡಿಕೊಳ್ಳದೆ ಇರುವುದರಿಂದಲೂ ಮತ್ತಷ್ಟು ದುಷ್ಟವಾಗುತ್ತದೆ. ಕಷಾಯ, ಕಟು, ತಿಕ್ತ, ರೂಕ್ಷ, ಅಲ್ಪ ಆಹಾರಗಳು, ಆಯಾಸವನ್ನು ಮಾಡುವ ವಾಹನ ಸಂಚಾರಗಳು, ಈಜುವುದು, ನೆಗೆಯುವುದು, ಬಹಳವಾಗಿ ದೂರ ನಡೆಯುವುದು, ವ್ಯವಾಯ ಮತ್ತು ವಾತಮೂತ್ರಾದಿ ವೇಗನಿಗ್ರಹ ಇವುಗಳಿಂದ ವೃದ್ಧಿಹೊಂದಿದ ವಾತವು, ದುಷ್ಟರಕ್ತದೊಡನೆ ಸೇರಿ ಸ್ರೋತಸ್ಸುಗಳಲ್ಲಿ ಸಂಚರಿಸುತ್ತ ಅವುಗಳಲ್ಲಿ ಈ ರಕ್ತವನ್ನು ತುಂಬಿ ಮಾರ್ಗಗಳನ್ನು ಪ್ರತಿಬಂಧಿಸುವುವು. ಈ ವ್ಯಾಧಿಗೆ ವಾತರಕ್ತ, ಆಢ್ಯವಾತ, ಖುಡ(ಸಂಧಿ)ವಾತ ಮತ್ತು ಬಲಾಸಗಳೆಂಬ ಹೆಸರುಗಳಿವೆ.

**ಪೂರ್ವರೂಪ**—ಕುಷ್ಠದ ಪೂರ್ವರೂಪವಿರುವಂತೆಯೇ ಈ ವ್ಯಾಧಿಯ ಪೂರ್ವದಲ್ಲೂ ಅತಿಸ್ವೇದ ಅಥವಾ ಸ್ವೇದವಿಲ್ಲದಿರುವುದು, ಸ್ಪರ್ಶನಾಶ, ಪೆಟ್ಟುತಾಗಿದರೆ ಬಹಳ ನೋವು ಮುಂತಾದುವುಗಳಿರುವುವು. ಜಾನು, ಜಂಘ, ಊರು, ಕಟೀ, ಅಂಸ, ಹಸ್ತ ಮತ್ತು ಪಾದಸಂಧಿಗಳಲ್ಲಿ ನವೆ, ಸ್ಫುರಣ,

(ಅದುರುವಿಕೆ), ತೋದ, ಭೇದ, ಗುರುತ್ವ, ಸುಪ್ತಿಗಳು ಕಂಡುಬರುವುವು, ಇದ್ದಕ್ಕಿದ್ದಂತೆಯೇ ನಿಂತುಹೋಗುವುವು ಮತ್ತೆ ತಲೆದೋರುವುವು. ವರ್ಣ ಬದಲಾವಣೆಯಾಗಿ ಅಲ್ಲಲ್ಲಿ ಗುಂಡಗೆ ಮಚ್ಚೆಗಳಾಗುವುವು.

**ರೂಪ—**

**ಪಾದಯೋರ್ಮೂಲಮಾಸ್ಥಾಯ ಕದಾಚಿದ್ಧಸ್ತಯೋರಪಿ ।**
**ಆಖೋರಿವ ವಿಷಂ ಕ್ರುದ್ಧಂ ಕೃತ್ಸ್ನಂ ದೇಹಂ ವಿಧಾವತಿ ॥**

ಅ. ಹೃ. ನಿ. ೧೬.

ಪಾದಗಳಲ್ಲಿಯೂ ಕೆಲವು ವೇಳೆ ಕೈಗಳಲ್ಲಿಯೂ ಪ್ರಾರಂಭವಾಗಿ ಇಲಿ ವಿಷ ಹರಡಿದಂತೆ ಪ್ರಕುಪಿತ ವಾತರಕ್ತವು ಶರೀರದಲ್ಲಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಓಡಾಡುವುದು.

ವಾತರಕ್ತವು **ಉತ್ತಾನ** ಮತ್ತು **ಗಂಭೀರ**ಗಳೆಂದು ಎರಡು ವಿಧ. ತ್ವಕ್ ಮತ್ತು ಮಾಂಸಗಳನ್ನಾಶ್ರಯಿಸಿರುವುದು ಉತ್ತಾನವೆಂದೂ, ಅಭ್ಯಂತರವಾಗಿ ಆಶ್ರಯುಪಡೆದಿರುವುದು ಗಂಭೀರವೆಂದೂ ಹೇಳಲ್ಪಡುತ್ತದೆ. ಮೊದಲು ಉತ್ತಾನ ವಾಗಿದ್ದು ಕಾಲಾಂತರದಲ್ಲಿ ಎಲ್ಲಾ ಧಾತುಗಳನ್ನೂ ಸೇರಿಸಿ ಗಂಭೀರವಾಗು ವುದು. ಉತ್ತಾನದಲ್ಲಿ ನವೆ, ಉರಿ, ನೋವು, ಆಯಾಸ, ಸ್ಫುರಣ ಮತ್ತು ಅಂಗಸಂಕೋಚಗಳೂ, ಚರ್ಮವು ಶ್ಯಾವರಕ್ತವಾಗಿಯಾಗಲೀ ತಾಮ್ರವರ್ಣ ವಾಗಿಯಾಗಲೀ ಇರುವುದು. ಗಂಭೀರದಲ್ಲಿ ಸ್ತಬ್ಧವಾದ ಮತ್ತು ಕಠಿಣವಾದ ಶೋಥವಿರುವುದು. ಒಳಗೆ ಅತ್ಯಂತ ಬಾಧೆ, ದಾಹಾದಿಗಳಿರುವುವು ಚರ್ಮವು ಶ್ಯಾವ ಅಥವಾ ತಾಮ್ರವಾಗಿರುವುದು. ಆಗಾಗ್ಗೆ ವಾತವು ಸಂಧಿ, ಅಸ್ಥಿ ಮತ್ತು ಮಜ್ಜಗಳನ್ನು ಸೇರಿ ಛೇದಿಸುವಂತೆ ಓಡಾಡುತ್ತಿರುವುದು. ಖಂಜತ್ವ, ಪಂಗುತ್ವ ಗಳನ್ನು ಮಾಡುವುದು. ಉಭಯಾಶ್ರಯಾವಾಗಿದ್ದರೆ ಎಲ್ಲಾ ಲಕ್ಷಣಗಳೂ ಇರುವುವು.

ವಾತ ಹೆಚ್ಚಾಗಿದ್ದರೆ ಶೂಲೆ, ಸ್ಫುರಣ ಮತ್ತು ತೋದಗಳಿರುವುವು. ಶೋಥವು ರೂಕ್ಷ, ಕಪ್ಪು ಅಥವಾ ಶ್ಯಾವವಾಗಿದ್ದು ಆಗಾಗ್ಗೆ ವೃದ್ಧಿ, ಕ್ಷೀಣತೆ ಗಳನ್ನು ಹೊಂದುವುದು. ಧಮನೀ, ಅಂಗುಲೀ ಮತ್ತು ಸಂಧಿಗಳು ಸಂಕೋಚ ವಾಗುವುವು ಅಥವಾ ಸ್ತಬ್ಧವಾಗುವುವು. ಶೀತಲಪದಾರ್ಥಗಳು ಅನುಪಶಯ ಗಳು. ರಕ್ತವು ಅಧಿಕವಾದರೆ ತಾಮ್ರವರ್ಣದ ಶೋಥವೂ, ಚಿಮಿಚಿಮಿಗುಟ್ಟು

ವುದೂ ಇರುವುವು. ಸ್ನಿಗ್ಧ ಮತ್ತು ರೂಕ್ಷಗುಣಗಳಿಂದ ಶಮನಹೊಂದುವುದಿಲ್ಲ. ನವೆ ಮತ್ತು ಕ್ಲೇದಗಳಿರುತ್ತವೆ. ಪಿತ್ತದಿಂದ ವಿದಾಹ, ಸಂಮೋಹ, ಸ್ವೇದ, ಬಾಯಾರಿಕೆ ಮತ್ತು ಮೂರ್ಛೆಗಳುಂಟಾಗುವುವು. ಸ್ಪರ್ಶಾಸಹನ, ಕೆಂಪು ವರ್ಣ, ನೋವುಗಳು, ಶೋಥದ ಪಾಕ, ಊಷ್ಮಗಳಿರುವುವು. ಕಫ ಹೆಚ್ಚಾಗಿದ್ದರೆ ಸ್ತೈಮಿತ್ಯ, ಗುರುತ್ವ, ಸುಪ್ತಿ, ಸ್ವಲ್ಪವೇ ನೋವು, ಸ್ನಿಗ್ಧತ್ವ ಮತ್ತು ಶೈತ್ಯಗಳಿರುವುವು.

**ಸಾಧ್ಯಾಸಾಧ್ಯ**—ಒಂದು ದೋಷದಿಂದಾದುದು, ಹೊಸದಾಗಿರುವುದು ಸಾಧ್ಯ; ದ್ವಿದೋಷಜವಾದುದು ಯಾಪ್ಯ, ತ್ರಿದೋಷಜವು ಮತ್ತು ಉಪದ್ರವಗಳಿಂದ ಕೂಡಿದ್ದು ಅಸಾಧ್ಯ. ಹಿಕ್ಕಾ, ಪಂಗುತ್ವ (ಎರಡು ಕಾಲು ಕುಂಟಾಗುವುದು), ಬೆರಳುಗಳು ವಕ್ರವಾಗುವುದು, ಮರ್ಮಬಾಧೆ, ಸ್ರಾವ ಮತ್ತು ಇಂದ್ರಿಯಗಳ ತಾಪವಿರುವ ವಾತರಕ್ತವು ಸಾಧ್ಯವಾಗುವುದಿಲ್ಲ.

**ಉಪದ್ರವಗಳು**—ನಿದ್ರಾನಾಶ, ಅರೋಚಕ, ಶ್ವಾಸ, ಮಾಂಸಕೋಥ, ಶಿರೋಗ್ರಹ, ಮದ, ಮೂರ್ಛಾ, ತೃಷಾ, ಜ್ವರ ಮತ್ತು ಮೋಹಗಳು ವಾತರಕ್ತದ ಉಪದ್ರವಗಳು.

## ವಾತರಕ್ತಚಿಕಿತ್ಸಾ

ರಕ್ತಸಂಚಾರ ಮತ್ತು ವಾತಗಮನ ಇವು ಪರಸ್ಪರ ಪ್ರತಿಬಂಧಿಸಲ್ಪಡುವುದರಿಂದ ಬಹುವಾಗಿ ವೇದನೆಯುಂಟಾಗಿ ಪ್ರಾಣವೇ ಹೋಗಬಹುದು. ಆದುದರಿಂದ ರೋಗಿಗೆ ಸ್ನೇಹವನ್ನು ಮಾಡಿಸಿ ಶೃಂಗ, ಜಲೌಕ, ಸೂಚೀ, ಅಲಾಬು, ಪ್ರಚ್ಛನಗಳಲ್ಲಿ ಯಾವುದಾದರೊಂದು ಕ್ರಮದಿಂದ ದೋಷ ಬಲಾಬಲಗಳಿಗೆ ತಕ್ಕಂತೆ ರಕ್ತಮೋಕ್ಷಣ ಮಾಡಿಸಬೇಕು.

**ರುಗ್ದಾಹ ಶೂಲತೋದಾರ್ತಾದಸೃಕ್ ಸ್ರಾವ್ಯಂ ಜಲೌಕಸಾ ।**
**ಶೃಂಗೈಸ್ತುಂಬೈರ್ಹರೇತ್ಸುಪ್ತಿ ಕಂಡೂಚಿಮಿಚಿಮಾಯನಾತ್ ॥**
**ದೇಶಾದ್ದೇಶಂ ವ್ರಜತ್ ಸ್ರಾವ್ಯಂ ಸಿರಾಭಿಃ ಪ್ರಚ್ಛನೇನವಾ ।**

**ಚ.ಚಿ.ಅ. ೨೯.**

ರುಕ್, ದಾಹ, ಶೂಲೆ ಮತ್ತು ತೋದಗಳಲ್ಲಿ ಜಲೌಕಗಳಿಂದಲೂ, ಸುಪ್ತಿ, ಕಂಡೂ ಮತ್ತು ಚಿಮಿಚಿಮಿಗುಟ್ಟುತ್ತಿರುವುಗಳಲ್ಲಿ ಶೃಂಗ, ಅಲಾಬು ಗಳಿಂದಲೂ, ರುಕ್, ಶೋಥಾದಿಗಳು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಚಲಿಸುತ್ತಿದ್ದರೆ, ಸಿರಾಮೋಕ್ಷಣ ಅಥವಾ ಪ್ರಚ್ಛಾನದಿಂದಲೂ ವಾತರಕ್ತವಿರುವ ಪ್ರದೇಶದಲ್ಲಿ ಆಗಾಗ್ಗೆ ಸ್ವಲ್ಪ ಸ್ವಲ್ಪವಾಗಿ ರಕ್ತಸ್ರಾವವನ್ನು ಮಾಡಿಸಬೇಕು.

ಅಂಗಶೋಷವಾಗಿದ್ದರೆ ಅಥವಾ ರೂಕ್ಷತೆ ಮತ್ತು ವಾತಪ್ರಧಾನವಾಗಿದ್ದರೆ ಅಂತಹ ರೋಗಿಗೆ ರಕ್ತಸ್ರಾವವನ್ನು ಮಾಡಿಸಕೂಡದು. ಒಂದು ವೇಳೆ ರಕ್ತ ಮೋಕ್ಷಣ ಮಾಡಿಸಿದರೆ ಶೋಥ, ಸ್ತಂಭ, ಕಂಪ, ಸಿರಾಸ್ನಾಯುವ್ಯಾಧಿಗಳು, ಗ್ಲಾನಿ, ಖಂಜವೇ ಮುಂತಾದ ವಾತವ್ಯಾಧಿಗಳು ಸಂಭವಿಸುತ್ತವೆ.

## ಆಭ್ಯಂತರಿಕವಾತರಕ್ತ

ಸ್ನಿಗ್ಧನಾದವನಿಗೆ ಮೊದಲು ಸ್ನೇಹಯುಕ್ತವಿರೇಚನವನ್ನೂ ಅಥವಾ ರೂಕ್ಷೌಷಧದಿಂದಾದರೆ ಮೃದುವಾಗಿ ವಿರೇಚನವನ್ನೂ ಅನಂತರ ಬಸ್ತಿಕರ್ಮ ವನ್ನೂ ಆಗಿಂದಾಗ್ಗೆ ಮಾಡಿಸುತ್ತಿರಬೇಕು.

**ವಾತಪ್ರಧಾನವಾಗಿದ್ದರೆ** ವಿದಾಹವಿಲ್ಲದವನಿಗೆ ಸ್ವೇದ, ಅಭ್ಯಂಗ ಮತ್ತು ಲೇಪಗಳನ್ನೂ ಸ್ನಿಗ್ಧಾನ್ನ ಭೋಜನ ಮತ್ತು ಘೃತಗಳನ್ನೂ ಉಪ ಯೋಗಿಸಬೇಕು. ದ್ರಾಕ್ಷೆ, ಹಿಪ್ಪೆಹೂಗಳ ಕ್ವಾಥಕ್ಕೆ ಹಾಲು, ಗುಡೂಚೀಸ್ವರಸ, ದ್ರವದ ಚತುರ್ಥಾಂಶ ತುಪ್ಪ, ತುಪ್ಪದ ಚತುರ್ಥಾಂಶ ಕಲ್ಲುಸಕ್ಕರೆ ಇವುಗಳನ್ನು ಸೇರಿಸಿ ಘೃತಾವಶೇಷ ಕಾಯಿಸಿ ಶೋಧಿಸಿದ ಘೃತವು ವಾತರಕ್ತಹರವಾದುದು. ಗೋಮೂತ್ರ ಮತ್ತು ಧಾರೋಷ್ಣಕ್ಷೀರಗಳನ್ನು ಸೇರಿಸಿ ಕುಡಿಸುವುದರಿಂದ ವಾತಾನುಲೋಮನವಾಗುವುದು.

**ಪಿತ್ತೋತ್ತರವಾಗಿದ್ದರೆ** ಶತಾವರೀ, ಕಟುಕರೋಹಿಣೀ, ಪಟೋಲ, ತ್ರಿಫಲಾ ಮತ್ತು ಅಮೃತಾಗಳಿಂದ ಮಾಡಿದ ಘೃತವನ್ನಾಗಲೀ, ಕ್ಷೀರಪಾಕ (ಸ್ವಾದು ಮತ್ತು ತಿಕ್ತ ದ್ರವ್ಯಗಳ)ವನ್ನಾಗಲೀ ಕುಡಿಸಬೇಕು. ದೋಷ ಹೆಚ್ಚಾಗಿದ್ದರೆ ವಿರೇಚನಾರ್ಥವಾಗಿ ಗೋಕ್ಷೀರ ಮತ್ತು ಏರಂಡ ತೈಲಗಳನ್ನು ಸೇರಿಸಿಯಾದರೂ ಕುಡಿಸಬಹುದು. ಭೇದಿಗಳಾದನಂತರ ಹಾಲು ಅನ್ನ

ಭೋಜನ ಮಾಡಿಸಬೇಕು. ತುಪ್ಪಯುಕ್ತ ಅಭಯಾಕ್ವಾಥವನ್ನಾಗಲೀ, ತ್ರಿವೃತ್ ಚೂರ್ಣವನ್ನು ಹಾಲು ಅಥವಾ ದ್ರಾಕ್ಷೆಪಾನಕದಲ್ಲಾಗಲೀ ಕುಡಿಸ ಬೇಕು. ಮಲಾಶಯದಿಂದ ಮಲವನ್ನು ಘೃತಯುತ ಕ್ಷೀರ ಬಸ್ತಿಗಳಿಂದ ಶೋಧಿಸಬೇಕು. ವಾತರಕ್ತ ಚಿಕಿತ್ಸೆಗೆ ಬಸ್ತಿಗೆ ಸಮಾನವಾದ ಬೇರೊಂದು ಚಿಕಿತ್ಸೆ ಇಲ್ಲ. ವಿಶೇಷವಾಗಿ ಪಾಯು, ಪಾರ್ಶ್ವ, ತೊಡೆ, ಪರ್ವ (ಗಿಣ್ಣುಗಳು), ಅಸ್ಥಿ ಮತ್ತು ಜಠರ ಪ್ರದೇಶಗಳಲ್ಲಿರುವ ವಾತಶೋಣಿತದಲ್ಲಿ ವಸ್ತಿಯು ಬಹಳ ಉಪಯೋಗವಾಗಿರುವುದು.

**ನಹಿ ಬಸ್ತಿ ಸಮಂ ಕಿಂಚಿದ್ವಾತರಕ್ತ ಚಿಕಿತ್ಸಿತಮ್ ।**
**ವಿಶೇಷಾತ್ಪಾಯುಪಾರ್ಶ್ವೋರುಪರ್ವಾಸಸ್ಥಿ ಜಠರಾರ್ತಿಷು ॥**

**ಕಫಪ್ರಾಯಿಕ**ವಾದ ವಾತರಕ್ತದಲ್ಲಿ ಮುಸ್ತಾ, ದ್ರಾಕ್ಷೆ ಮತ್ತು ಅರಿಸಿನ ಗಳನ್ನು ಕ್ವಾಥಮಾಡಿ ಅಥವಾ ತ್ರಿಫಲಾ ಅಥವಾ ಗುಡೂಚೀಕ್ವಾಥಮಾಡಿ ಚಿಟ್ಟಿಜೇನುತುಪ್ಪವನ್ನು ಸೇರಿಸಿ ಕುಡಿಸಬೇಕು. ಅವನಿಗೆ ಅರ್ಹತೆಯಿರುವಷ್ಟು ಸ್ನೇಹಪಾನ ಮಾಡಿಸಿ ಅನಂತರ ವಮನ ಮತ್ತು ಮೃದು ರೂಕ್ಷಣಗಳನ್ನು ಮಾಡಿಸಬೇಕು. ಎಲ್ಲಾ ಬಗೆಯ ವಾತರಕ್ತಗಳಲ್ಲೂ ಕೊಳವಳಿಕೆ ಕ್ವಾಥ ಮತ್ತು ಶಾಕಾಹಾರಗಳು ಶ್ರೇಷ್ಠವಾದುವು. ರೋಗಿಯು ಬ್ರಹ್ಮಚರ್ಯೆಯಲ್ಲಿ ಇದ್ದುಕೊಂಡು ಪಂಚಮೂಲ ಮತ್ತು ಧಾತ್ರೀಕ್ವಾಥವನ್ನು ಸೇವಿಸಿದರೆ ಶರೀರ ದೊಳಗೆ ರೂಢಮೂಲವಾಗಿರುವ ವಾತರಕ್ತವು ನಾಶವಾಗುವುದು.

## ಉತ್ತಾನವಾತರಕ್ತ

ಬಾಹ್ಯವಾದ ವಾತರಕ್ತದಲ್ಲಿ ಸರ್ಜರಸ[೧] ತೈಲವನ್ನಾಗಲೀ, ಪಿಂಡತೈಲ ವನ್ನಾಗಲೀ ಸವರುವುದರಿಂದ ಜ್ವರ, ಉರಿ, ನೋವು ಮುಂತಾದುವೆಲ್ಲಾ ನಿಲ್ಲು ವುವು ವಾತ ಹೆಚ್ಚಾಗಿರುವ ಅವಸ್ಥೆಯಲ್ಲಿ ದಶಮೂಲ ಕ್ಷೀರವನ್ನು ಮೇಲೆ

---

೧. ಸರ್ಜರಸತೈಲ—

**ಆರನಾಲಾಢಕೇ ತೈಲಂ ಪಾದಸರ್ಜರಸಂ ಶೃತಮ್ ।**
**ಪ್ರಭೂತೇ ಖಜಿತಂ ತೋಯೇ ಜ್ವರದಾಹಾರ್ತಿನುತ್ತರಮ್ ॥ ಅ.ಹೃ.ಚಿ. ೨೨.**

ಪರಿಷೇಕ ಮಾಡುವುದರಿಂದ ಆ ಕೂಡಲೇ ನೋವು ನಿಲ್ಲುವುದು. ಹೀಗೆಯೇ ಸುಖೋಷ್ಣವಾದ ಕೇವಲ ತುಪ್ಪವನ್ನಾಗಲೀ. ಸರ್ಪಿರ್ಮಜ್ಜಾವಸಾ ತೈಲಗಳೆಲ್ಲವನ್ನಾಗಲೀ ಸೇಚನ ಮಾಡಬಹುದು. ಸ್ತಂಭ, ಆಕ್ಷೇಪಕ, ಶೂಲೆಗಳಿದ್ದರೆ ಸುಖೋಷ್ಣವಾಗಿಯೂ, ಉರಿಯಿದ್ದರೆ ತಣ್ಣಗೂ ಪರಿಷೇಕಗಳನ್ನು ಉಪಯೋಗಿಸಬೇಕು.

**ಪರಿಷೇಕದ್ರವ್ಯಗಳು**—ಹಸುವಿನ ಹಾಲು, ಕುರಿಯ ಹಾಲು ಅಥವಾ ಆಡಿನಹಾಲು ಯಾವುದಾದರೊಂದನ್ನು ತೈಲದೊಡನೆ ಮಿಶ್ರಮಾಡಿ(ಕಾಂದವ)ದ ದ್ರವ, ಜೀವನೀಯ ಕ್ವಾಥ, ಲಘುಪಂಚಮೂಲ ಕ್ವಾಥ, ದ್ರಾಕ್ಷೆರಸ, ಕಬ್ಬಿನ ಹಾಲು, ಮದ್ಯ, ಮೊಸರು, ಮಸ್ತು, ಅಮ್ಲಕಾಂಜಿಕ, ಕಲ್ಗಚ್ಚು, ಜೇನುತುಪ್ಪ ಮತ್ತು ಸಕ್ಕರೆಗಳನ್ನು ಹಾಕಿರುವ ನೀರು ಮುಂತಾದುವು.

**ಪಿತ್ತೋತ್ತರ** ಮತ್ತು **ರಕ್ತೋತ್ತರ**ಗಳಲ್ಲಿ ರೋಗಿಗೆ ಉರಿ, ನೋವು ಮತ್ತು ಸುಸ್ತುಗಳಿಂದ ಕೂಡಿದ್ದರೆ ಸುಗಂಧಲಿಪ್ತ ಹಸ್ತ ಸ್ತನಗಳುಳ್ಳ, ಪ್ರೀತಿಯಿಂದ ಉಪಚರಿಸುವ ಮತ್ತು ಸಂತೋಷಪಡಿಸುವಂತೆ ಮಾತುಗಳನ್ನಾಡುವ ಸ್ತ್ರೀ, ಶೀತಸ್ಪರ್ಶಗಳಾದ ಆಸನ, ಗೃಹ ಮುಂತಾದುವು ಹಿತಕರಗಳಾದುವು.

ತ್ವಚೆಯು ರುಗ್ರಾಗದಾಹಗಳಿಂದಿದ್ದರೆ ರಕ್ತಮೋಕ್ಷಣಮಾಡಿ ಪ್ರಪೌಂಡರೀಕ, ಮಂಜಿಷ್ಠೆ, ಮರದರಿಸಿನ, ಅತಿಮಧುರ, ಶ್ರೀಗಂಧ, ಕಲ್ಲುಸಕ್ಕರೆ, ನೊಸೆಹುಲ್ಲು, ಕಬ್ಬು, ಸಾರಂಗಿಬೇಳೆ, ಸಕ್ತುಗಳಿಂದ ಲೇಪಮಾಡಬೇಕು. ಇದು ವಿಸರ್ಪವನ್ನೂ, ಶೋಥವನ್ನೂ ಹೋಗಲಾಡಿಸುವುದು.

**ವಾತೋತ್ತರ**ದಲ್ಲಿ ವಾತಹರ ಮತ್ತು ಸ್ನಿಗ್ಧದ್ರವ್ಯಗಳನ್ನು ಹಾಕಿ ಸಿದ್ಧಪಡಿಸಿದ ಕೃಶರ, ಹಾಲಿನಲ್ಲಿ ಬೇಯಿಸಿರುವ ಹೆಸರು ಮತ್ತು ಎಳ್ಳು, ಸಾಸಿವೆ ಇವನ್ನೆಲ್ಲಾ ಸೇರಿಸಿ ಉಪನಾಹಸ್ವೇದ ಮಾಡಿಸಿದರೆ ಶೂಲನಿವಾರಣೆಯಾಗುವುದು. ಹರಳುಬೀಜವನ್ನು ಹಾಲಿನಲ್ಲಿ ಅರೆದು ರೇಷ್ಮೆ ಬಟ್ಟೆಗೆ ಸವರಿ ಲೇಪಿಸಬಹುದು. ಸಬ್ಬಸಿಗೆ ಬೀಜವನ್ನಾದರೂ ಹೀಗೆಯೇ ಲೇಪಿಸಬಹುದು. ಗೋಮೂತ್ರ, ಯುವಕ್ಷಾರ, ಮದ್ಯ ಮತ್ತು ತುಪ್ಪಗಳಿಂದ ಮಾಡಿದ ಘೃತವನ್ನು

ಸವರಬಹುದು. ಮಧುಶುಕ್ತವನ್ನು[೧] ಸ್ನಾನಾಭ್ಯಂಗಗಳಿಗೆ ಉಪಯೋಗಿಸಬಹುದು.

**ಕಫ ಹೆಚ್ಚಾಗಿದ್ದರೆ** ಇಲ್ಲಣ, ಬಜೆ, ಚಂಗಲ್ಕೋಷ್ಠ, ಸಬ್ಬಸೀಗೆ, ಅರಿಸಿನ ಮತ್ತು ಮರದರಿಸಿನಗಳನ್ನು ಒಟ್ಟಿಗೆ ಕಲ್ಕಮಾಡಿ ಹಚ್ಚಿದರೆ ನೋವು ನಿಲ್ಲುವುದು.

**ವಾತಕಫಸಂಸರ್ಗದಲ್ಲಿ** ನುಗ್ಗೆಬೀಜ, ಜೇನುತುಪ್ಪ ಮತ್ತು ಧಾನ್ಯಾಮ್ಲಗಳನ್ನು ಅರೆದು ಕಲ್ಕಮಾಡಿ ಒಂದು ಮುಹೂರ್ತಕಾಲ ಲೇಪಿಸಿದ್ದು ಅನಂತರ ಅದನ್ನು ತೆಗೆದು ಹಾಕಿ ಅಮ್ಲಕ್ವಾಥದಿಂದಲೇ ತೊಳೆಯಬೇಕು.

**ಉತ್ತಾನಂ ಲೇಪನಾಭ್ಯಂಗ ಪರಿಷೇಕಾವಗಾಹನೈಃ ।**
**ವಿರೇಚನಾಸ್ಥಾಪನೈಃ ಸ್ನೇಹಪಾನೈರ್ಗಂಭೀರಮಾಚರೇತ್ ॥**
**ವಾತಶ್ಲೇಷ್ಮೋತ್ತರೇಕೋಷ್ಣಾ ಲೇಪಾದ್ಯಾಸ್ತತ್ರ ಶೀತಲೈಃ ।**
**ವಿದಾಹಶೋಫರುಕ್ಕಂಡೂ ವಿವೃದ್ಧಿಃ ಸ್ತಂಭನಾದ್ಭವೇತ್ ॥**
**ಪಿತ್ತರಕ್ತೋತ್ತರೇ ವಾತರಕ್ತೇ ಲೇಪಾದಯೋ ಹಿಮಾಃ ।**

ಅ.ಹೃ.ಚಿ. ೨೨.

ಹೀಗೆ ಬಾಹ್ಯಸ್ಥಿತವಾದ ವಾತರಕ್ತದಲ್ಲಿ ಲೇಪ, ಅಭ್ಯಂಗ, ಪರಿಷೇಕ ಮತ್ತು ಅವಗಾಹಸ್ನಾನಗಳನ್ನೂ, ಆಭ್ಯಂತರಿಕ ವಾತರಕ್ತದಲ್ಲಿ ವಿರೇಚನ, ಆಸ್ಥಾಪನ, ಸ್ನೇಹಪಾನಗಳನ್ನೂ ಮಾಡಿಸಬೇಕು. ವಾತಶ್ಲೇಷ್ಮಾಧಿಕ್ಯವಿದ್ದಲ್ಲಿ ಸುಖೋಷ್ಣಲೇಪಾಭ್ಯಂಗ ಮುಂತಾದುವುಗಳಿಂದಲೂ, ವಿದಾಹ, ಶೋಫಾದಿ ಪಿತ್ತರಕ್ತದೋಷಗಳಲ್ಲಿ ಶೀತಲ ಲೇಪಾದಿಗಳಿಂದಲೂ ಚಿಕಿತ್ಸಿಸಬೇಕು.

---

೧. ಮಧುಶುಕ್ತ ಅಥವಾ ಸೂಕ್ತ—

ಜಂಬೀರಸ್ಯ ಫಲರಸಂ ಪಿಪ್ಪಲೀಮೂಲ ಸಂಯುತಮ್ ।
ಮಧುಭಾಂಡೇ ವಿನಿಕ್ಷಿಪ್ಯ ಧಾನ್ಯರಾಶೌ ನಿಧಾಪಯೇತ್ ॥
ಮಾಸೇನ ತಜ್ಜಾತರಸಂ ಮಧುಶುಕ್ತಮುದಾಹೃತಮ್ ॥

ನಿಂಬೆ ಹಣ್ಣಿನ ರಸ ೩೨ ಪಲ, ಮೋಡಿಯ ಚೂರ್ಣ ೪ ಪಲ ಮತ್ತು ಜೇನುತುಪ್ಪ ೮ ಪಲ ಇವನ್ನು ಒಂದು ಜಾಡಿಯಲ್ಲಿ ಹಾಕಿ ಕಲಸಿ ಒಂದು ತಿಂಗಳು ಕಾಲ ಧಾನ್ಯರಾಶಿಯಲ್ಲಿ ಮುಚ್ಚಿಟ್ಟಿದ್ದು ಅನಂತರ ತೆಗೆದು ಶೋಧಿಸಿಡಬೇಕು.

ಬಿಸಿ ಹಬೆ, ಬಿಸಿಲುಗಳಿಂದ ರಾಗ, ಶೋಫ ಮುಂತಾದುವುಗಳಲ್ಲಿ ಮಧು ಯಷ್ಟ್ಯಾದಿ ತೈಲ ಲೇಪನಮಾಡಬೇಕು. ಕ್ಷೀರಬಲಾತೈಲವನ್ನು ನೂರು ಸಲ ಅಥವಾ ಸಾವಿರ ಸಲ (ಅಥವಾ ಸಾಧ್ಯವಾದಷ್ಟು) ಆವರ್ತನೆಮಾಡಿ ಪಾನಾಭ್ಯಂಗಗಳಿಗಾಗಿ ಉಪಯೋಗಿಸುವುದರಿಂದ ವಾತರಕ್ತ ನಾಶವಾಗುವುದು. ಇದು ರಸಾಯನ, ಇಂದ್ರಿಯಪ್ರಸಾದನ, ಬೃಂಹಣ ಮತ್ತು ಸ್ವರ್ಯಗುಣಗಳನ್ನು ಹೊಂದಿದೆ. ಶುಕ್ರ ಮತ್ತು ರಕ್ತಾಶ್ರಿತ ದೋಷಹರವಾದುದು.

**ಪಥ್ಯಾಪಥ್ಯಗಳು**[೧]—ತಿನ್ನುವುದಕ್ಕೆ ಬೇಯಿಸಿದ ಹಳೇ ಧಾನ್ಯಗಳು, ವಿಷ್ಕಿರ ಮತ್ತು ಪ್ರತುದಾಪ್ರಾಣಿಮಾಂಸಗಳು ಒಳ್ಳೆಯವು. ಯೂಷಕ್ಕೆ ತೊಗರಿ, ಕಡಲೆ, ಹೆಸರು, ಸಾರಂಗಿಬೇಳೆಗಳನ್ನು ಉಪಯೋಗಿಸಿ ಹೆಚ್ಚಾಗಿ ತುಪ್ಪ ಹಾಕಿ ಸೇವಿಸಬೇಕು. ತರಕಾರಿಗಳಲ್ಲಿ ಅಣ್ಣೆಸೊಪ್ಪು, ಬಿದಿರುಕಳಲೆ, ಗಣಿಕೆ, ಶತಾವರೀ, ಚಕ್ಕೋತಸೊಪ್ಪು, ಬಸಳೆ ಇವನ್ನು ಸೌವರ್ಚಲ ಲವಣ ದೊಂದಿಗೆ ಉಪಯೋಗಿಸಬೇಕು. ಹಸುವಿನ ಹಾಲು ಮತ್ತು ಎಮ್ಮೆ ಹಾಲು ಗಳು ಹಿತವಾದವು.

ಹಗಲು ನಿದ್ದೆ, ಶಾರೀರಕ (ಬಿಸಿಲು, ಬೆಂಕಿ ಕಾಯಿಸುವುದು) ಮತ್ತು ಮಾನಸಿಕ (ಕಾಮ, ಕ್ರೋಧಾದಿ) ಸಂತಾಪ, ವ್ಯಾಯಾಮ, ಮೈಥುನ, ಗುರು, ಅಭಿಷ್ಯಂದಿ ಮತ್ತು ಕಟ್ವಮ್ಲರಸಗಳು ಅಪಥ್ಯಗಳು.

---

೧. ಉಪನಾಹಪರೀಷೇಕ ಪ್ರದೇಹಾಭ್ಯಂಜನಾನಿಚ ।
ಶರಣಾನ್ಯಪ್ರವಾತಾನಿ ಮನೋಜ್ಞಾನಿ ಮಹಾನ್ತಿಚ ॥
ಮೃದುಗಂಡೋಪಧಾನಾನಿ ಶಯನಾನಿ ಸುಖಾನಿಚ ।
ವಾತರಕ್ತೇ ಪ್ರಶಸ್ಯಂತೇ ಮೃದುಸಂವಾಹನಾನಿಚ ॥
ವ್ಯಾಯಾಮಂ ಮೈಥುನಂ ಕೋಪಮುಷ್ಣಾಮ್ಲಲವಣಾಶನಮ್ ।
ದಿವಾಸ್ವಪ್ನಮಭಿಷ್ಯಂದಿ ಗುರುಚಾನ್ನಂ ವಿವರ್ಜಯೇತ್ ॥ ಸು.ಚಿ.ಅ. ೫.

वातरक्त

**ಬಾಹ್ಯ** (ಉತ್ತಾನ) ——> ಸ್ನಿಗ್ಧಸ್ಯಾಲ್ಪಾಲ್ಪಂ ರಕ್ತಮೋಕ್ಷಣಂ ಶೃಂಗಾಲಾಬುಜಲೌಕೋಭಿಃ । ವಿಸರ್ಪಣೇ ಪ್ರಚ್ಛನೇನ । <—— **ಆಭ್ಯಂತರಿಕ** (ಗಂಭೀರ)

**ಬಾಹ್ಯ (ಉತ್ತಾನ)**

ಶೀತಾಃ ಲೇಪಾಭ್ಯಂಗಪರಿಷೇಕಾವಗಾಹಾಃ ।
ಪಿಂಡತೈಲಲೇಪಃ, ದಶಮೂಲಕ್ಷೀರಂ ।
ವಾತಶ್ಲೇಷ್ಮೋತ್ತರೇಕೋಷ್ಣಾಲೇಪಾದ್ಯಾಃ ।
ರಕ್ತಪಿತ್ತೋತ್ತರೇ ಶೀತಾಃ ಲೇಪಾದಯಃ
ಬಲಾತೈಲಮ್ ।

**ಆಭ್ಯಂತರಿಕ (ಗಂಭೀರ)**

ವಿರೇಕಾಸ್ಥಾಪನ ಸ್ನೇಹನಾನಿ
ವಾತೋತ್ತರೇ ಪುರಾಣಘೃತಪಾನಂ
ಶ್ರಾವಣೀ ಕ್ಷೀರಕಾಕೋಳೀಕ್ಷೀರಘೃತಂ ಸಕ್ಷೀರಂ।
ಶ್ಯಾಮೈರಂಡ ಸ್ಥಿರಾಶೃತಂ ಕ್ಷೀರಂ।
ಪಿತ್ತರಕ್ತೋತ್ತರೇ ವರೀತಿಕ್ತಾದಯಃ ಕ್ಷೀರಂ
ಘೃತಂ।
ಮೃದುವಿರೇಚನಮ್, ಘೃತ ಕ್ಷೀರವಸ್ತಿಃ ।
ಕಫೋತ್ತರೇ ಸಮಾಕ್ಷಿಕಾತ್ರಿಫಲಾಗುಡೂಚೀ,
ಸ್ನೇಹಪಾನಂ।
ವಮನಂ ರೂಕ್ಷಣಂ। ಕೋಕಿಲಾಕ್ಷಃ ಕ್ವಾಥಃ ।

# ಆವರಣವಾತನಿದಾನ

ಧಾತುಕ್ಷಯ, ಭಯ, ಕ್ರೋಧ ಮುಂತಾದುವುಗಳಿಂದ ಪ್ರಕೋಪವಾದ ವಾತವು ಸ್ರೋತಸ್ಸುಗಳಲ್ಲಿ ಸಂಚರಿಸುವಾಗ ಪಿತ್ತ ಮತ್ತು ಕಫಗಳನ್ನು ಕೆರಳಿಸುತ್ತದೆ. ಇದರಿಂದ ಕುಪಿತ ವಾತಪಿತ್ತಕಫಗಳು ವಾತವನ್ನು ಆವರಿಸಿ ಅದರ ಗಮನವನ್ನು ಅಡ್ಡಿಪಡಿಸುತ್ತವೆ. ಹೀಗೆಯೇ ವಾತವು ತನ್ನ ಸೂಕ್ಷ್ಮಗುಣದಿಂದ ಧಾತು ಮತ್ತು ಮಲಗಳಲ್ಲಿ ನುಗ್ಗಿಹೋಗುವಾಗ ಅವೂ ಸಹ ಅದರ ಗತಿಯನ್ನು ತಡೆಯುತ್ತವೆ. ಹೀಗೆ ಸುತ್ತುವರಿಯಲ್ಪಟ್ಟ ವಾತಕ್ಕೆ **ಆವರಣವಾತ**ವೆಂದು ಹೆಸರು.

**ವಾಯೋರಾವರಣಂ ಚಾತೋ ಬಹುಭೇದಂ ಪ್ರಚಕ್ಷತೇ ।**

ಅ.ಹೃ.ನಿ. ೧೬.

ಆವರಣಮಾಡುವ ದೋಷ ಅಥವಾ ಧಾತುಭೇದದಿಂದ ವಿವಿಧ ಲಕ್ಷಣಗಳು ಕಂಡುಬರುತ್ತವೆ.

ವಾತವು ಪಿತ್ತದಿಂದ ಆವರಿಸಲ್ಪಟ್ಟಿದ್ದರೆ ದಾಹ, ತೃಷ್ಣಾ, ಶೂಲ, ಭ್ರಮ ಮತ್ತು ತಮ(ಕಣ್ಣುಕತ್ತಲೆ)ಗಳಾಗುವುವು. ಕಟ್ವಮ್ಲಲವಣಗಳಿಂದ ವಿದಾಹವುಂಟಾಗುವುದು. ರೋಗಿಯು ಶೀತಲದ್ರವ್ಯಗಳನ್ನು ಅಪೇಕ್ಷಿಸುವನು. ಕಫದಿಂದ ಶೈತ್ಯ, ಗೌರವ, ಶೂಲಗಳಿರುವುವು. ರೋಗಿಯು ಲಂಘನ, ಆಯಾಸ (ವ್ಯಾಯಾಮ), ರೂಕ್ಷ ಮತ್ತು ಉಷ್ಣಗಳನ್ನು ಅಪೇಕ್ಷಿಸುವನು.

ರಕ್ತಾವೃತದಲ್ಲಿ ದಾಹ, ತ್ವಕ್ ಮತ್ತು ಮಾಂಸಗಳ ನಡುವೆ ನೋವು ಮತ್ತು ಕೆಂಪುವರ್ಣದ ಮಂಡಲಗಳುಂಟಾಗುವುವು. ಮಾಂಸಾವೃತದಲ್ಲಿ ವಿವರ್ಣವಾದ ಕಠಿಣ ಪಿಟಿಕೆಗಳು, ಶೋಥಗಳು, ರೋಮಹರ್ಷ ಮತ್ತು ಇರುವೆಗಳು ಸಂಚರಿಸುವಂತೆ ಬಾಧೆಗಳು ಆಗುವುವು. ಮೇದಸ್ಸಿನಿಂದ ಶೋಥವು ಮೃದುವಾಗಿಯೂ, ಸ್ನಿಗ್ಧವಾಗಿಯೂ, ತಣ್ಣಗೆ ಆಡುತ್ತಲೂ ಇರುವುದು. ಅರೋಚಕವಿರುವುದು. ಇದಕ್ಕೆ ಆಢ್ಯವಾತವೆಂದು ಹೆಸರು. ಕೃಚ್ಛ್ರಸಾಧ್ಯವಾದುದು. ಅಸ್ಥಿಯಲ್ಲಿರುವಾಗ ಸೂಜಿಗಳಿಂದ ಚುಚ್ಚಿದಂತೆಯೂ, ಬಡಿದಂತೆಯೂ ಬಹಳ ನೋವಿರುವುದು. ಆ ಭಾಗವು ಬಿಸಿಯಾಗಿರುವುದು; ಮೇಲೆ ಬಿಗಿಯುವುದ

ರಿಂದ ರೋಗಿಗೆ ಹಿತವೆನಿಸುವುದು. ಮಜ್ಜಾವೃತದಲ್ಲಿ ಆ ಭಾಗವು ಬಗ್ಗಿರುವುದು, ಬಿಗಿಯುವುದು; ಕೈಯಿಂದ ಪೀಡನೆಮಾಡಿದರೆ ಹಿತವಾಗಿರುವುದು. ಶುಕ್ರಾವೃತದಿಂದ ಶುಕ್ರವು ಶೀಘ್ರವಾಗಿ ಪ್ರವರ್ತಿಸುವುದು ಅಥವಾ ಬೀಜರಹಿತವಾಗಿರುವುದು. ಹೀಗೆಯೇ ಮಲಗಳಿಂದಾವೃತವಾದರೆ ಆಯಾ ಮಲಗಳಿಗನುಸಾರವಾದ ಲಕ್ಷಣಗಳನ್ನು ತಿಳಿಯಬೇಕು.

## ಆವರಣವಾತ

ಮೇದಸ್ಸು ಅಥವಾ ಕಫದಿಂದ ತಡೆಯಲ್ಪಟ್ಟ ವಾತವನ್ನು ಶಮನ ಮಾಡಲು ಮೊದಲು ಸ್ನೇಹನ ಅಥವಾ ಬೃಂಹಣವನ್ನು ಮಾಡಿಸಬಾರದು, ಆದರೆ ವಾತಪ್ರಬಲವಾಗಿರುವ ವಾತರಕ್ತಕ್ಕೆ ಹೇಳಿರುವ ಚಿಕಿತ್ಸೆಯನ್ನು ಮಾಡಿ ಅನಂತರ ರಕ್ತಪ್ರಸಾದನಮಾಡುವ ಸ್ನೇಹಗಳನ್ನು ಉಪಯೋಗಿಸಬೇಕು. ಕಫ ಮತ್ತು ಮೇದಸ್ಸುಗಳನ್ನು ಕಡಿಮೆ ಮಾಡುವುದಕ್ಕೋಸ್ಕರ ವ್ಯಾಯಾಮ, ವಮನ, ವಿರೇಚನ, ಮೂತ್ರ, ಅರಿಷ್ಟ, ಜೇನುತುಪ್ಪ, ತಕ್ರಗಳನ್ನೂ ಸೇವಿಸಿ ಅನಂತರ ಅಭಯಾಚೂರ್ಣವನ್ನು ಪ್ರಯೋಗಿಸಬೇಕು. ಬೋಧಿವೃಕ್ಷ (ಅರಳಿ ಚಕ್ಕೆ) ಕಷಾಯಕ್ಕೆ ಜೇನುತುಪ್ಪವನ್ನು ಬೆರಸಿ ಕುಡಿಸುವುದರಿಂದ ಕಷ್ಟತರವಾದ ವಾತರಕ್ತವೂ ಗುಣವಾಗುವುದು. ಹಳೇ ಯವೆ, ಗೋಧಿ, ಸೀಧು, ಅರಿಷ್ಟ, ಸುರಾ, ಗೋಮೂತ್ರ ಶಿಲಾಜತು, ಗುಗ್ಗುಳು ಮತ್ತು ಹೇಮಮಾಕ್ಷಿಕಭಸ್ಮಗಳ ಪ್ರಯೋಗಗಳು ಕಫ ಮತ್ತು ಮೇದಸ್ಸುಗಳನ್ನು ಹೋಗಲಾಡಿಸುತ್ತವೆ.

ಪ್ರಾಣವಾಯುವೇ ಮೊದಲಾದುವು ಒಂದೇ ಕಾಲದಲ್ಲಿ ಪ್ರಕೋಪವನ್ನು ಹೊಂದಿದರೆ ಪ್ರಕುಪಿತದೋಷಗಳ ಬಲಾಬಲಗಳನ್ನನುಸರಿಸಿ ತಕ್ಕ ಚಿಕಿತ್ಸೆಯನ್ನು ಮಾಡಬೇಕು. ಆಮದೋಷಯುಕ್ತವಾಗಿದ್ದರೆ ಸ್ವೇದನ, ಲಂಘನ, ರೂಕ್ಷಣ ಮತ್ತು ಪಾಚನಗಳಿಂದ ಆಮವನ್ನು ಹೋಗಲಾಡಿಸಿ ನಿರಾಮ ಉಂಟಾದಮೇಲೆ ಕೇವಲ ವಾತಹರವಾದಂಥ ಔಷಧಗಳನ್ನು ಕೊಡಬೇಕು. ಬಾಹ್ಯಕ್ಕೆ ಲೇಪ, ಸ್ನಾನ ಮುಂತಾದುವುಗಳಿಂದಲೂ, ಆಂತರಿಕವಾಗಿ ಸ್ನಿಗ್ಧೋಷ್ಣಾದಿ ಪ್ರಯೋಗಗಳಿಂದಲೂ ವಾತವನ್ನು ಹೋಗಲಾಡಿಸಬೇಕು. ವಾತವು ಅಭ್ಯಂತರ ಸ್ರೋತಸ್ಸುಗಳಲ್ಲಿ ಆವರಿಸಲ್ಪಟ್ಟರೆ ಆಯಾ ಸ್ಥಾನಕ್ಕೆ

ತಕ್ಕಂತೆ ಶೋಷ, ಆಕ್ಷೇಪ ಮುಂತಾದ ಬಲಿಷ್ಠ ಉಪದ್ರವಗಳು ಸಂಭವಿಸು ವುವು. ಆದುದರಿಂದ ಇವನ್ನು ಆರಂಭದಲ್ಲೇ ಜಾಗ್ರತೆಯಾಗಿ ಜಯಿಸಬೇಕು.

ವಾತರಕ್ತದಲ್ಲಿ ರಕ್ತಪಿತ್ತಗಳ ಪ್ರಾಬಲ್ಯದಿಂದ ತ್ವಙ್ಮಾಂಸಾದಿಗಳು ಜಾಗ್ರತೆಯಾಗಿ ಪಾಕವನ್ನು ಹೊಂದಿ ವಿದ್ರಧಿಯಾಗಿ ಒಡೆದು ವಿದಗ್ಧರಕ್ತ ವಾಗಲೀ, ಕೀವಾಗಲೀ ಸ್ರಾವವಾಗುವುದು ಒಡೆಯದೆ ಇದ್ದಲ್ಲಿ ಪಕ್ವವಾದ ವಿದ್ರಧಿಯನ್ನು ಭೇದನಮಾಡಿ, ಶೋಧನ (ಸ್ವತಃ ಒಡೆದಿದ್ದರೂ) ಮತ್ತು ರೋಪಣಚಿಕಿತ್ಸೆಯನ್ನು ನಡೆಸಬೇಕು.

ವಾತವು ಪಿತ್ತದಿಂದ ಆವರಿಸಲ್ಪಟ್ಟಾಗ ಶೀತ ಮತ್ತು ಉಷ್ಣಗಳ ಪರ್ಯಾಯ ಕ್ರಿಯೆಗಳನ್ನು ಮಾಡಬೇಕು. ಜೀವನೀಯಘೃತವನ್ನು ಕುಡಿಸ ಬೇಕು. ಧನ್ವಮಾಂಸ, ಯವೆ, ಶಾಲಿ ಅನ್ನಗಳ ಭೋಜನವೂ, ಮೃದುಕ್ಷೀರ ವಿರೇಚನ, ಪಂಚಮೂಲ ಬಲಾಕ್ಷೀರಗಳಿಂದ ನಿರೂಹವಸ್ತಿಯೂ, ಮಧು ಯಷ್ಟೀತೈಲದ ಅನುವಾಸನಗಳೂ ಮತ್ತು ಮಧುಯಷ್ಟೀತೈಲ, ಬಲಾತೈಲ, ಘೃತ, ಕ್ಷೀರ ಮತ್ತು ಪಂಚಮೂಲ ಕಷಾಯಗಳ ಸೇಚನಗಳೂ ಹಿತವಾದುವು.

ಕಫಪಿತ್ತಸಂಸರ್ಗದಿಂದ ಆವರಿಸಿದ್ದರೆ ಮೊದಲು ಪಿತ್ತವನ್ನು ಹೋಗ ಲಾಡಿಸಬೇಕು.

ಗಂಭೀರ ವಾತರಕ್ತದಲ್ಲಿ ವಾತಪ್ರಧಾನವಿದ್ದರೆ ವಾತವ್ಯಾಧಿಹರ ಚಿಕಿತ್ಸೆ ಯನ್ನು ಮಾಡಿ ರಕ್ತಪ್ರಸಾದನ ಔಷಧಿಗಳನ್ನು ಕೊಡಬೇಕು.

ಮಾಂಸಾವೃತವಾದರೆ ಮಾಂಸರಸ ಮತ್ತು ಕ್ಷೀರಗಳಿಂದ ಸ್ವೇದನ ಮತ್ತು ಸ್ನೇಹನಗಳನ್ನು ಮಾಡಬೇಕು. ವಾತರಕ್ತದಲ್ಲಿ ಮೇದಸ್ಸು ವಾತವನ್ನು (ತಡೆದರೆ) ಪ್ರಮೇಹ ಮತ್ತು ವಾತಹರ ಚಿಕಿತ್ಸೆಗಳನ್ನನುಸರಿಸಬೇಕು. ಅಸ್ಥಿ ಮತ್ತು ಮಜ್ಜಗಳಿಂದ ಆವೃತವಾದ ವಾತದಲ್ಲಿ ಮಹಾಸ್ನೇಹವನ್ನೂ, ರೇತಸ್ಸು ಆವರಿಸಿದರೆ ಉತ್ತರವಸ್ತಿ ಮತ್ತು ಶುಕ್ರಲದ್ರವ್ಯಗಳನ್ನೂ ಉಪಯೋಗಿಸಬೇಕು. ಅನ್ನಾವೃತವಾದರೆ ಪಾಚನ, ವಮನಗಳೂ ದೀಪನವಾದ ಮತ್ತು ಲಘುವಾದ ಆಹಾರಗಳೂ ಒಳ್ಳೆಯವು. ಮೂತ್ರಾವೃತ ವಾತರೋಗದಲ್ಲಿ ಮೂತ್ರಲ, ಸ್ವೇದಲದ್ರವ್ಯಗಳನ್ನು ಮತ್ತು ಉತ್ತರಬಸ್ತಿಗಳನ್ನು ಕೊಡಬೇಕು. ಪುರೀಷಾ ವೃತವಾಗಿದ್ದರೆ ಏರಂಡತೈಲ ಸೇವನವೂ, ಸ್ನೇಹಬಸ್ತಿಗಳೂ, ಭೇದನಗಳ ಪ್ರಯೋಗವೂ ಹಿತಕರಗಳು. ವಾತವು ಎಲ್ಲವುಗಳಿಂದಲೂ ತಡೆಯಲ್ಪಟ್ಟಿದ್ದರೆ

ಕಫಪಿತ್ತಗಳಿಗೆ ವಿರುದ್ಧಗಳಲ್ಲದ ಮತ್ತು ವಾತಾನುಲೋಮನಮಾಡುವ ಎಲ್ಲಾ ಕರ್ಮಗಳನ್ನೂ ಮಾಡಬೇಕು. ಎಂದರೆ ಅಭಿಷ್ಯಂದಿಗಳಲ್ಲದ ಸ್ನಿಗ್ಧೌಷಧಗಳು ಮತ್ತು ಆಹಾರಗಳ ಸೇವನವೂ, ಸ್ರೋತಸ್ಸುಗಳನ್ನು ಶುದ್ಧಿಪಡಿಸುವ ಕ್ರಮಗಳೂ, ಯಾಪನವಸ್ತಿಯೂ, ಮಧುಯಷ್ಟೀತೈಲವೇ ಮುಂತಾದ ಮಧುರದ್ರವ್ಯಗಳಿಂದ ಸಿದ್ಧವಾದ ಯಾವುದಾದರೊಂದರ ಅನುವಾಸನವಸ್ತಿಯೂ, ಮೃದು ವಿರೇಚನವೂ ಇವು ವಿಹಿತವಾದುವು. ಇವನ್ನು ರೋಗಿಯ ಬಲಕ್ಕೆ ತಕ್ಕಂತೆ ಉಪಯೋಗಿಸಬೇಕು. ಈ ಎಲ್ಲಾ ವಿಧಿಗಳಿಂದಲೂ ದೋಷಗಳು ಸಮಸ್ಥಿತಿಗೆ ಬಂದನಂತರ ರೋಗನಿವೃತ್ತನಿಗೆ ಬಲಪುಷ್ಟೀಕರಗಳಾದ ತಕ್ಕ ರಸಾಯನಗಳನ್ನು ವಿಧಿಪೂರ್ವಕವಾಗಿ ಸೇವಿಸಬೇಕು. ಅಪಾನಾವೃತವಾದರೆ ಎಲ್ಲಾ ದೀಪನ ಮತ್ತು ಗ್ರಾಹಿ ಔಷಧಗಳಿಂದ ಜಯಿಸಬೇಕು. ಬಸ್ತ್ಯಾವೃತವಾಗಿದ್ದರೆ ವಾತಾನುಲೋಮನ ಮತ್ತು ಮೂತ್ರಾಶಯಶುದ್ಧಿ ಮಾಡುವ ಸಾಧನಗಳನ್ನನುಸರಿಸಬೇಕು.

ಪ್ರಾಣಾದಿಪಂಚವಿಧ ವಾತಗಳು ಪ್ರತ್ಯೇಕವಾಗಿ ಆವರಿಸಲ್ಪಟ್ಟಾಗ ಆಯಾ ಪರಿಸ್ಥಿತಿಗೆ ತಕ್ಕಂತೆ ಬುದ್ಧಿವಂತಿಕೆಯಿಂದ ಚಿಕಿತ್ಸಿಸಬೇಕು.

**ಉದಾನಂ ಯೋಜಯೇದೂರ್ಧ್ವಮಪಾನಂಚಾನುಲೋಮಯೇತ್ ।**
**ಸಮಾನಂ ಶಮಯೇದ್ವಿದ್ವಾಂಸ್ತ್ರಿಧಾವ್ಯಾನಂಚ ಯೋಜಯೇತ್ ॥**
**ಪ್ರಾಣೋ ರಕ್ಷ್ಯಶ್ಚತುರ್ಭ್ಯೋಽಪಿ ತತ್‌ಸ್ಥಿತೌ ದೇಹಸಂಸ್ಥಿತಿಃ ।**
**ಸ್ವಂ ಸ್ವಂ ಸ್ಥಾನಂ ನಯೇದೇವಂ ವೃತಾನ್ವಾತಾನ್ವಿಮಾರ್ಗಗಾನ್ ॥**

ಅ.ಹೃ.ಚಿ. ೨೨.

ಉದಾನವನ್ನು ಊರ್ಧ್ವಮುಖವಾಗಿಯೂ (ವಮನದಿಂದಲೂ), ಅಪಾನವನ್ನು ಅಧೋಮುಖವಾಗಿಯೂ (ವಿರೇಚನದಿಂದಲೂ) ಸ್ವಮಾರ್ಗದಲ್ಲಿ ಚಲಿಸುವಂತೆ ಮಾಡಬೇಕು. ಸಮಾನವಾತವನ್ನು ಶಮನ ಮಾಡಬೇಕು. ವ್ಯಾನವಾತಕ್ಕೆ ಈ ಮೂರನ್ನೂ ಮಾಡಬೇಕು. (ಸ್ವಸ್ಥಾನಕ್ಕೆ ಬರುವಂತೆ ಮಾಡಬೇಕು). ಪ್ರಾಣವಾತವೇ ಶರೀರದ ಆಧಾರವಾದುದರಿಂದ ಇದನ್ನು ಉಳಿದ ನಾಲ್ಕು ಬಗೆ ವಾತಗಳಿಂದಲೂ ಅಪಾಯ ಸಂಭವಿಸದಂತೆ ರಕ್ಷಿಸಬೇಕು. ಹೀಗೆ ಆಯಾ ವಾತವನ್ನು ತನ್ನ ತನ್ನ ಸ್ಥಾನಕ್ಕೆ ಒಯ್ಯಬೇಕು. ಪಿತ್ತಸಂಸರ್ಗ

ವಿನಹ ಉಳಿದ ಎಲ್ಲಾ ಆವರಣವಾತಗಳನ್ನೂ ಲಶುನರಸಾಯನ ವಿಧಿಯಿಂದ ಹೋಗಲಾಡಿಸಬೇಕು. ಪಿತ್ತಾವೃತ ಮತ್ತು ರಕ್ತಾವೃತಗಳನ್ನು ವಾತರಕ್ತದಂತೆ ಚಿಕಿತ್ಸಿಸಬೇಕು; ರಕ್ತಪಿತ್ತದಿಂದಾವೃತವಾಗಿದ್ದರೆ ರಕ್ತಪಿತ್ತ ಮತ್ತು ವಾತ ಹರ ಚಿಕಿತ್ಸೆಗಳನ್ನೂ, ರಸಾಯನ ವಿಧಿಯನ್ನೂ ಅನುಸರಿಸಬೇಕು. ಐದು ವಾತಗಳೂ ರಕ್ತಪಿತ್ತ ಸಂಸರ್ಗ ಹೊಂದಿದ್ದರೆ ಅಸಾಧ್ಯ. ಒಟ್ಟಿನಲ್ಲಿ ನಿದಾನ ದಲ್ಲಿ ಹೇಳಿರುವಂತೆ ದೋಷದೂಷ್ಯಗಳನ್ನನುಸರಿಸಿ ಮೇಲೆ ಹೇಳಿರುವಂತೆ ಚಿಕಿತ್ಸಿಸಬೇಕು.

---

# ರಸಾಯನ ಮತ್ತು ವಾಜೀಕರಣ

ಜರಾವ್ಯಾಧಿಗಳನ್ನು ಹೋಗಲಾಡಿಸಿ ದೇಹವನ್ನು ಬೆಳೆಸುವ ದ್ರವ್ಯಕ್ಕೆ **ರಸಾಯನ**ವೆಂದು ಹೆಸರು. ಸ್ವಸ್ಥನಿಗೆ ಇದು ಊರ್ಜಸ್ಕರವಾಗಿಯೂ ವೃಷ್ಯ ವಾಗಿಯೂ ಇರುತ್ತದೆ. **ವಾಜೀಕರಣ**ವೆಂಬುದು ಸ್ವಸ್ಥನಿಗೆ ಸಂತಾನಾಭಿವೃದ್ಧಿ ಯನ್ನು ಮಾಡುವುದು. ಇದಕ್ಕೆ ಉಪಯೋಗಿಸುವ ದ್ರವ್ಯಕ್ಕೆ ವಾಜೀಕರವೆಂದು ಹೆಸರು.

ರೋಗವನ್ನು ಹೋಗಲಾಡಿಸುವುದಕ್ಕೆ ಚಿಕಿತ್ಸೆಯೆಂದು ಹೆಸರು. ವ್ಯಾಧಿ ಹರ, ಪಥ್ಯ, ಸಾಧನ, ಔಷಧ, ಪ್ರಾಯಶ್ಚಿತ್ತ, ಪ್ರಕೃತಿಸ್ಥಾಪನ, ಹಿತ ಮತ್ತು ಭೇಷಜ ಎಂಬುವು ಚಿಕಿತ್ಸೆ ಎಂಬ ಅರ್ಥವನ್ನು ಸೂಚಿಸುವ ಶಬ್ದಗಳು. ಔಷಧ ಅಥವಾ ಭೇಷಜವು ಊರ್ಜಸ್ಕರ ಮತ್ತು ರೋಗಹರಗಳೆಂದು ಎರಡು ವಿಧ. ಕೆಲವು ದ್ರವ್ಯಗಳು ಊರ್ಜಸ್ಕರಗಳಾಗಿಯೂ, ಕೆಲವು ರೋಗಹರಗಳಾಗಿಯೂ ಇನ್ನು ಕೆಲವು ಊರ್ಜಸ್ಕರ ಮತ್ತು ರೋಗಹರಗಳಾಗಿಯೂ ಇರುತ್ತವೆ. ಯಾವ ಗುಣವು ಹೆಚ್ಚಾಗಿರುವುದೋ ಅದೇ ಗುಣದಿಂದ ಆ ದ್ರವ್ಯವು ಕರೆಯಲ್ಪಡುತ್ತದೆ.

ಔಷಧವಲ್ಲದ್ದು ಅಭೇಷ. ಇದೂ ಸಹ ಬಾಧನ ಮತ್ತು ಅನುಬಾಧನ ಗಳೆಂದು ಎರಡು ವಿಧ. ಬಾಧನವು ಅಪಥ್ಯವಾದುದು ಮತ್ತು ಸ್ವಲ್ಪ ಕಾಲ

ಮಾತ್ರ ಕೆಡಕನ್ನುಂಟುಮಾಡುವುದು ಅನುಬಾಧನವು ರೋಗಿಯನ್ನು ಬಹಳ ದಿವಗಳವರೆಗೂ ಪೀಡಿಸುತ್ತಿರುವುದು. ಹೇಗೆಂದರೆ ಮುಗ್ಗಲುಬೀಜ ಸೇರಿದ ಹರಳಿನಿಂದ ತೆಗೆದ ಎಣ್ಣೆ ವಿರೇಚನವನ್ನು ಮಾಡಿಸಿದರೂ ವಾಂತಿ, ಹೊಟ್ಟೆ ನುಲಿತ ಮುಂತಾದ ಬಾಧೆಗಳನ್ನುಂಟುಮಾಡುವುದು. ತೈಲದ ಕಾರ್ಯವು ಮುಗಿದನಂತರ ಸ್ವಲ್ಪಕಾಲ ಉಪದ್ರವಗಳಿದ್ದು ಅನಂತರ ನಿಂತುಹೋಗು ವುವು ಇದು ಬಾಧನ. ಅನುಬಾಧನವು ತಾತ್ಕಾಲಿಕವಾಗಿ ರೋಗಹರಣವನ್ನು ಮಾಡಬಹುದು. ಆದರೆ ಕೆಲವು ಕಾಲದನಂತರ ಶರೀರದಲ್ಲಿ ಚಿರಸ್ಥಾಯಿ ಯಾಗಿ ಬೇರೆ ರೋಗಗಳನ್ನುಂಟುಮಾಡುವುದು. ಉದಾಹರಣೆಗೆ, ಅಶುದ್ಧವಂಗ ಭಸ್ಮವು ಸದ್ಯಃಪ್ರಮೇಹವನ್ನು ಹೋಗಲಾಡಿಸಿದಾಗ್ಯೂ ಅದರ ವಿಷಾಂಶವು ರಕ್ತವನ್ನು ದೂಷಿಸಿ ಭಗಂದರ, ಕುಷ್ಠ ಮುಂತಾದುವನ್ನುಂಟುಮಾಡುವುದು.

**ದೀರ್ಘಮಾಯುಃ ಸ್ಮೃತಿಂ ಮೇಧಾಮಾರೋಗ್ಯಂ ತರುಣಂ ವಯಃ।**
**ಪ್ರಭಾವರ್ಣಸ್ವರೌದಾರ್ಯಂ ದೇಹೇಂದ್ರಿಯಬಲಂಪರಮ್ ॥**
**ವಾಕ್ಸಿದ್ಧಿಂ ಪ್ರಣತಿಂ ಕಾನ್ತಿಂ ಲಭತೇ ನಾ ರಸಾಯನಾತ್ ।**
**ಲಾಭೋಪಾಯೋಹಿ ಶಸ್ತಾನಾಂ ರಸಾದೀನಾಂ ರಸಾಯನಮ್ ॥**

ಚ.ಚಿ.ಅ. ೧.

**ರಸಾಯನದ ಉಪಯೋಗ**—ರಸಾಯನ ಸೇವನೆಯಿಂದ ದೀರ್ಘಾ ಯುಸ್ಸು, ಸ್ಮೃತಿ (ಹಿಂದಿನ ವಿಷಯವನ್ನು ಜ್ಞಾಪಕಕ್ಕೆ ತಂದುಕೊಳ್ಳುವುದು), ಮೇಧಾ (ಬುದ್ಧಿಶಕ್ತಿ), ಆರೋಗ್ಯ, ಯೌವನ, ಶರೀರಕ್ಕೆ ಕಳೆ, ಒಳ್ಳೆಯ ವರ್ಣ, ಒಳ್ಳೆ ಧ್ವನಿ, ಶರೀರ ಮತ್ತು ಇಂದ್ರಿಯಗಳಿಗೆ ಉತ್ತಮವಾದ ಬಲ, ವಾಕ್ಸಿದ್ಧಿ (ವ್ಯರ್ಥವಾಗದಿರುವ ವಾಗ್ಬಲ), ಜನರಿಂದ ಪೂಜ್ಯ ಭಾವನೆಯನ್ನು ಪಡೆಯುವುದು ಇವೆಲ್ಲವೂ ಉಂಟಾಗುವುವು.

**ಅಪತ್ಯಸಂತಾನಕರಂ ಯತ್ ಸದ್ಯಃ ಸಂಪ್ರಹರ್ಷಣಮ್**
**ವಾಜೀವಾತಿಬಲೋ ಯೇನ ಯಾತ್ಯಪ್ರತಿಹತಃ ಸ್ತ್ರಿಯಃ ॥**
**ಭವತ್ಯತಿಪ್ರಿಯಃ ಸ್ತ್ರೀಣಾಂ ಯೇನ ಯೇನೋಪಚೀಯತೇ ।**
**ಜೀರ್ಯತೋಽಪ್ಯಕ್ಷಯಂ ಶುಕ್ರಂ ಫಲವದ್ಯೇನ ದೃಶ್ಯತೇ ॥**

**ಪ್ರಭೂತಶಾಖಃ ಶಾಖೀವ ಯೇನ ಚೈತ್ಯೋಯಥಾಮಹಾನ್ ।**
**ಭವತ್ಯರ್ಚೋಬಹುಮತಃ ಪ್ರಜಾನಾಂ ಸುಬಹುಪ್ರಜಃ ॥**
**ಸಂತಾನಮೂಲಂ ಯೇನೇಹ ಪ್ರೇತ್ಯಚಾನಂತ್ಯಮಶ್ನುತೇ ।**
**ಯಶಃ ಶ್ರಿಯಂ ಬಲಂ ಪುಷ್ಟಿಂ ವಾಜೀಕರಣಮೇವ ತತ್ ॥**
ಚ.ಚಿ.ಅ. ೧.

**ವಾಜೀಕರಣದ ಉಪಯೋಗ**—ವಾಜೀಕರಣದಿಂದ ಪುತ್ರ ಪೌತ್ರಾದಿ ಸಂತಾನವು ಅವಿಚ್ಛಿನ್ನವಾಗಿ ವೃದ್ಧಿಯಾಗುವುದು. ಔಷಧವನ್ನು ಸೇವಿಸಿದೊಡನೆಯೇ ಸ್ತ್ರೀಸಮಾಗಮದಲ್ಲಿ ವಿಶೇಷ ಆಸಕ್ತಿಯುಂಟಾಗುವುದು. ಕುದುರೆಯಂತೆ ಸಮಾಗಮದನಂತರವೂ ಬಲ ತಗ್ಗದೆ ಸಮರ್ಥನಾಗಿಯೇ ಇರುವನು. ಈ ಔಷಧ ಸೇವನೆಯಿಂದ ವಯಸ್ಸಾದರೂ ಶುಕ್ಲಕ್ಷಯವಾಗ ದೆಯೂ ಮತ್ತು ಸ್ತ್ರೀಯರಿಗೆ ಬಹುಪ್ರಿಯವಾಗಿಯೂ ಇರುವಂತೆ ಮಾಡುವುದು.

**ರಸಾಯನ ವಿಧಿಯು ಎರಡು ಬಗೆ**—(೧) ಕುಟೀಪ್ರಾವೇಶಿಕ, (೨) ವಾತಾಪಿಕ.

ಕುಟೀಪ್ರಾವೇಶಿಕವೆಂಬುದು ಧನಿಕರು ಮತ್ತು ಸದ್ವೃತ್ತಿಯನ್ನು ಅವಲಂಬಿಸತಕ್ಕವರುಗಳಿಗೆ ಯೋಗ್ಯವಾದುದು. ನಿರ್ಭಯವಾದ, ಪ್ರಶಸ್ತ ವಾದ ಮತ್ತು ರಸಾಯನ ವಿಧಿಗೆ ಬೇಕಾದ ಸಲಕರಣೆಗಳು ದೊರೆಯುವ ಸ್ಥಳದಲ್ಲಿ ಪೂರ್ವ ಅಥವಾ ಉತ್ತರ ದಿಕ್ಕಿಗೆ ಬಾಗಿಲಿರುವಂತೆಯೂ ಮತ್ತು ಸಣ್ಣ ಸಣ್ಣ ಕಂಡಿಗಳುಳ್ಳ, ಎತ್ತರವಾಗಿಯೂ ಮತ್ತು ದಪ್ಪವಾಗಿಯೂ ಇರುವ ಗೋಡೆಗಳಿಂದ ವಿಶಾಲವಾಗಿ ಮೂರು ಗರ್ಭಗಳುಳ್ಳ ಕೊಠಡಿಯನ್ನು (ಕೊಠ ಡಿಯ ಗೋಡೆಗಳ ಹೊರವಲಯದ ಸುತ್ತಲೂ ಎರಡು ಪ್ರಾಕಾರ ಗೋಡೆಗಳಿರ ಬೇಕು) ನಿರ್ಮಿಸಬೇಕು. ಆಯಾ ಋತುಗಳಲ್ಲಿ ಉಂಟಾಗುವ ಶೀತೋಷ್ಣಾದಿ ಬಾಧೆಗಳಿಲ್ಲದಂತೆ ಶೀತಕಾಲದಲ್ಲಿ ಬೆಚ್ಚಗೂ, ಬೇಸಿಗೆಯಲ್ಲಿ ತಂಪಾಗಿಯೂ, ಕಾಮಕ್ರೋಧಗಳಿಗೆ ಅವಕಾಶವಿಲ್ಲದಂತೆಯೂ ಮನಸ್ಸಿಗೆ ಪ್ರಿಯವಾಗಿರು ವಂತೆಯೂ ಏರ್ಪಡಿಸಿರಬೇಕು. ಅಸಹ್ಯ ಶಬ್ದ, ಬೇಸರವುಂಟುಮಾಡುವ ಜನರು ಮತ್ತು ವ್ಯಾಮೋಹವನ್ನುಂಟುಮಾಡುವ ಸ್ತ್ರೀಯರು ಅಲ್ಲಿಗೆ ಬರಲು ಅವಕಾಶವಿರಬಾರದು.

ಉತ್ತರಾಯಣದಲ್ಲಿ ಶುಕ್ಲಪಕ್ಷದ ಶುಭತಿಥಿ, ನಕ್ಷತ್ರ, ಮುಹೂರ್ತ ಮತ್ತು ಕರಣಗಳಿಂದ ಕೂಡಿರುವ ದಿನದಲ್ಲಿ ರಸಾಯನ ಸೇವನೆ ಮಾಡುವ ಮನುಷ್ಯನು ಆಯುಷ್ಕರ್ಮವನ್ನು ಮಾಡಿಸಿಕೊಂಡು ಧೃತಿ ಸ್ಮೃತಿ ಬಲಗಳನ್ನು ಹೊಂದಿ ಶ್ರದ್ಧೆಯಿಂದ ಒಂದೇ ಮನಸ್ಸಿನಲ್ಲಿ ಎಂದರೆ ಮಾನಸಿಕ ದೋಷಗಳನ್ನು ಬಿಟ್ಟು ಸಕಲ ಪ್ರಾಣಿಗಳಲ್ಲೂ ಸ್ನೇಹವುಳ್ಳವನಾಗಿ ಮೊದಲು ದೇವತೆಗಳನ್ನೂ, ಅನಂತರ ಬ್ರಾಹ್ಮಣರನ್ನೂ ಪೂಜಿಸಿ, ದೇವಗೋಬ್ರಾಹ್ಮಣರಿಗೆ ಪ್ರದಕ್ಷಿಣೆಮಾಡಿ ಮೇಲೆ ಹೇಳಿದ ಕುಟೀಯನ್ನು (ರಸಾಯನಸಾಧನೆಗೆ ನಿರ್ಮಿಸಿದ ಗೃಹ) ಪ್ರವೇಶ ಮಾಡಬೇಕು. ಮೊದಲು ವಮನ, ವಿರೇಚನ, ಆಸ್ಥಾಪನ ಮತ್ತು ಶಿರೋವಿರೇಚನರೂಪ ಶೋಧನೆಗಳನ್ನು ಮಾಡಿಕೊಂಡು ದೋಷನಿರ್ಮುಕ್ತ ನಾಗಿ ಪುನಃ ಬಲ ಬಂದನಂತರ ಆ ಕುಟೀಯಲ್ಲೇ ಇದ್ದುಕೊಂಡು ರಸಾಯನ ಸೇವನೆಗೆ ಪ್ರಾರಂಭಿಸಬೇಕು. ಇದಕ್ಕೆ ಸ್ನೇಹಸ್ವೇದನಗಳನ್ನು ಮಾಡಿಕೊಂಡು ಶೋಧನೆಗಾಗಿ ಹರೀತಕೀಯೋಗವನ್ನು[೧] ತೆಗೆದುಕೊಳ್ಳಬೇಕು. ಅಳಲೆಕಾಯಿ, ಸೈಂಧವಲವಣ, ನೆಲ್ಲೀಕಾಯಿ, ಬೆಲ್ಲ, ಬಜೆ, ವಾಯುವಿಳಂಗ, ಅರಿಸಿನ, ಹಿಪ್ಪಲಿ ಮತ್ತು ಶುಂಠಿಗಳನ್ನು ಸಮಭಾಗ ತೆಗೆದುಕೊಂಡು ಚೂರ್ಣಿಸಿ ಬಿಸಿ ನೀರಿನೊಂದಿಗೆ ಕುಡಿಯಬೇಕು. ಇದರಿಂದ ವಿರೇಚನವಾಗಿ ಕೋಷ್ಠವು ಶುದ್ಧ ವಾಗುವುದು. ಅನಂತರ ಪೇಯಾದಿಕ್ರಮವನ್ನು ಆಚರಿಸಿ ಕೊನೆಯಲ್ಲಿ ಮಲ ಶುದ್ಧಿಯಾಗುವವರೆಗೂ ಎಂದರೆ ಮೂರು ದಿನ, ಐದು ದಿನ ಅಥವಾ ಏಳು ದಿನ ಯವೆಯನ್ನ ತುಪ್ಪಗಳನ್ನು ತಿನ್ನಬೇಕು. ವಯಸ್ಸು, ಪ್ರಕೃತಿ ಮತ್ತು ಸಾತ್ಮ್ಯಗಳನ್ನು ಚೆನ್ನಾಗಿ ತಿಳಿದು ತಕ್ಕ ರಸಾಯನಯೌಗಿಕವನ್ನು ಉಪ ಯೋಗಿಸಬೇಕು.

ಅಭಯಾ ಮತ್ತು ಆಮಲಕಗಳು ರಸಾಯನಕ್ಕೆ ಯೋಗ್ಯವಾದ ಔಷಧ ಗಳು ಇವೆರಡೂ ವೀರ್ಯದಲ್ಲಿ ಪರಸ್ಪರ ವಿಪರೀತವಾದುವು. ಲವಣರಸ ವಿನಹಾ ಎಲ್ಲಾ ರಸಗಳನ್ನೂ ಹೊಂದಿವೆ. ಇವು ದೋಷಾನುಲೋಮಿಗಳು;

---

೧. ಹರೀತಕೀನಾಂ ಚೂರ್ಣಾನಿ ಸೈಂಧವಾಮಲಕೇ ಗುಡಮ್ ।
ವಚಾಂ ವಿಡಂಗಂ ರಜನೀಂ ಪಿಪ್ಪಲೀಂ ವಿಶ್ವಭೇಷಜಮ್ ॥
ಪಿಬೇದುಷ್ಣಾಂಬುನಾಜಂತುಃ ಸ್ನೇಹಸ್ವೇದೋಪಪಾದಿತಃ । ಚ.ಚಿ.ಅ. ೧.

ದೀಪನ ಮತ್ತು ಪಾಚನವಾದುವು. ಜ್ಞಾನೇಂದ್ರಿಯಗಳಿಗೆ ಬಲ ಕೊಡುತ್ತವೆ; ಲಘುವಾದುವು. ಕೋಷ್ಠಮಾರ್ಗದ ಅನೇಕ ವ್ಯಾಧಿಗಳನ್ನು ಹೋಗಲಾಡಿಸುತ್ತವೆ. ಸ್ರೋತೋಬಂಧನಹರವಾದುವು. ಅಜೀರ್ಣಿಗಳು, ರೂಕ್ಷಭೋಜನ ಮಾಡುವವರು, ಸ್ತ್ರೀ, ಮದ್ಯ ಮತ್ತು ವಿಷಗಳಿಂದ ಕೃಶರಾದವರು, ಹಸಿದಿರುವವರು, ಬಾಯಾರಿದವರು ಮತ್ತು ಉಷ್ಣವ್ಯಾಧಿಯುಳ್ಳವರು ಅಳಲೆಕಾಯನ್ನು[೧] ಸೇವಿಸಬಾರದು.

**ಔಷಧಿಗಳ ಲಕ್ಷಣಗಳು**—ಶ್ರೇಷ್ಠವಾದ ಭೂಮಿಯಲ್ಲಿ ಸಕಾಲದಲ್ಲಿ ಹುಟ್ಟಿರುವ ಮತ್ತು ಆಯಾ ಕಾಲಕ್ಕನುಗುಣವಾಗಿ ರಸವೀರ್ಯಗಳನ್ನು ಪಡೆದಿರುವ ಮೂಲಿಕೆಗಳು ಯೋಗ್ಯವಾದುವು. ವಿಶೇಷವಾಗಿ ಹಿಮವತ್ಪರ್ವತದ ಭಾಗಗಳಲ್ಲಿ ಬೆಳೆದಿರುವ ಮೂಲಿಕೆಗಳು ಒಳ್ಳೆಯವು. ಇವು ಸೂರ್ಯನ ಬೆಳಕು, ಗಾಳಿ, ನೆರಳು ಮತ್ತು ನೀರುಗಳಿಂದ ಪೋಷಿಸಲ್ಪಟ್ಟಿರಬೇಕು. ಕ್ರಿಮಿಗಳಿಂದ ತಿನ್ನಲ್ಪಡದೆ, ಕೆಟ್ಟ ವಾಸನೆಯಿಲ್ಲದೆ ಮತ್ತು ವ್ರಣಗಳಿಲ್ಲದೆ ಇರಬೇಕು.

ಬ್ರಾಹ್ಮರಸಾಯನ, ಚ್ಯವನಪಾಶ, ಆಮಲಕ ರಸಾಯನ, ತ್ರಿಫಲಾ ರಸಾಯನಗಳು ಪ್ರಸಿದ್ಧ ಯೋಗಗಳು.

**ಆಮಲಕಘೃತ**—ಒಳ್ಳೆಯ ಭೂಮಿಯಲ್ಲಿ ಸಕಾಲದಲ್ಲಿ ಬೆಳೆವ ಗಂಧ ವರ್ಣಗಳಿಂದ ಕೂಡಿದ ವೀರ್ಯವತ್ತಾದ ನೆಲ್ಲೀಕಾಯಿಗಳನ್ನು ಕುಟ್ಟಿ ನಾಲ್ಕು ಆಢಕ ಸ್ವರಸ ತೆಗೆದು, ಇದರ ನಾಲ್ಕನೇ ಒಂದು ಭಾಗ ಎಂದರೆ ಒಂದು ಆಢಕ ಹಸುವಿನ ತುಪ್ಪವನ್ನೂ, ತುಪ್ಪದ ನಾಲ್ಕನೇ ಒಂದು ಭಾಗ ಎಂದರೆ ಒಂದು ಪ್ರಸ್ಥ ಪುನರ್ನವಾಕಲ್ಕವನ್ನೂ ಹಾಕಿ ಪಾಕ ಮಾಡಬೇಕು. ಈ ಘೃತಕ್ಕೆ ನಾಲ್ಕು ಪಾಲು ನೆಲಗುಂಬಳ ರಸ ಮತ್ತು ನಾಲ್ಕನೆ ಒಂದು ಪಾಲು ಸಿಹಿಹಾಲೆ ಕಲ್ಕಗಳನ್ನು ಹಾಕಿ ಪಾಕಮಾಡಿ ಬಂದ ಘೃತಕ್ಕೆ ನಾಲ್ಕರಷ್ಟು ಹಸುವಿನ ಹಾಲು, ನಾಲ್ಕರಷ್ಟು ಕಳ್ಳಂಗಡಲೆ ಮತ್ತು ಬೋಳಂಗಡಲೆ ಕಷಾಯ ಮತ್ತು ನಾಲ್ಕನೇ ಒಂದು ಭಾಗ ಶತಾವರೀ ಕಲ್ಕಗಳನ್ನು ಹಾಕಿ ಘೃತಪಾಕ ಮಾಡಬೇಕು. ಹೀಗೆ ಒಂದೊಂದು ಕಷಾಯದಿಂದಲೇ, ಅಥವಾ ಒಂದಾದನಂತರ

---

೧. ಅಜೀರ್ಣಿನೋರೂಕ್ಷಭುಜಃ ಸ್ತ್ರೀಮದ್ಯವಿಷಕರ್ಶಿತಾಃ ।
**ಸೇವೇರನ್ನಾಭಯಾಮೇತೇ ಕ್ಷುತ್ತೃಷ್ಣೋಷ್ಣಾರ್ದಿತಾಶ್ಚಯೇ ॥ ಚ.ಚಿ.ಅ. ೧.**

ಒಂದರಂತೆ ಶತಪಾಕ ಅಥವಾ ಸಹಸ್ರಪಾಕ (ಸಾಧ್ಯವಿದ್ದಷ್ಟು) ಮಾಡಿ ಬಂದ ಘೃತಕ್ಕೆ ನಾಲ್ಕನೆಯ ಒಂದು ಭಾಗ ಸಕ್ಕರೆ ಮತ್ತು ಜೇನುತುಪ್ಪಗಳನ್ನು ಕಲಸಿ ಚಿನ್ನದ ಪಾತ್ರೆ ಅಥವಾ ಬೆಳ್ಳಿಯ ಪಾತ್ರೆ ಅಥವಾ ಘೃತಭಾಂಡದಲ್ಲಿರಿಸ ಬೇಕು. ಯಥೋಕ್ತ ವಿಧಿಯಿಂದ ಅಗ್ನಿಬಲಕ್ಕೆ ತಕ್ಕಂತೆ ಸೇವಿಸಿ ಅದು ಜೀರ್ಣಿಸಿದ ಮೇಲೆ ಶಾಲಿ ಅಥವಾ ಷಷ್ಟಿಕ ಅನ್ನವನ್ನು ಹಾಲು ಮತ್ತು ತುಪ್ಪ ಗಳೊಂದಿಗೆ ಊಟ ಮಾಡಬೇಕು ಹೀಗೆ ಮೂರು ವರ್ಷಗಳ ಕಾಲ ಸೇವಿಸು ವುದರಿಂದ ನೂರು ವರ್ಷ ಆಯುಸ್ಸುಳ್ಳವನಾಗಿಯೂ, ಮುಪ್ಪಿನ ಬಾಧೆಯಿಲ್ಲದೆ ಕೇಳಿದ ವಿಷಯವನ್ನು ಜ್ಞಾಪಕದಲ್ಲಿಟ್ಟುಕೊಳ್ಳುವವನಾಗಿಯೂ ನೆಮ್ಮದಿಯಾ ಗಿರುತ್ತಾನೆ. ಇದು ಒಳ್ಳೆಯ ವಾಜೀಕರವೂ ಆಗಿದೆ.

**ಆಮಲಕ ಲೇಹ**—ನೆಲ್ಲೀಕಾಯಿ ೧೦೦೦, ಹಿಪ್ಪಲಿ ೧೦೦೦ ಇವನ್ನು ಬಹಳ ಎಳೆ ಅಥವಾ ಬಹಳ ಹಳೆಯದಲ್ಲವ ಎಂದರೆ ಮಧ್ಯವಯಸ್ಸಿನ ಮುತ್ತು ಗದ ಮರದ ಚೆಕ್ಕೆಯಿಂದ ಬಂದ ಕ್ಷಾರೋದಕದಲ್ಲಿ ಮುಳುಗಿಸಿ, ಚೆನ್ನಾಗಿ ನೆನೆಸಿ, ನೆರಳಿನಲ್ಲೇ ಒಣಗಿಸಬೇಕು. ನೆಲ್ಲೀಕಾಯಿಯ ಬೀಜಗಳನ್ನು ತೆಗೆದು ಹಾಕಿ ಉಳಿದುದನ್ನೂ ಹಿಪ್ಪಲಿಗಳನ್ನೂ ಚೂರ್ಣಿಸಿ ಇದಕ್ಕೆ ನಾಲ್ಕು ಭಾಗ ತುಪ್ಪ ಮತ್ತು ಜೇನುತುಪ್ಪ, ನಾಲ್ಕು ಭಾಗ ಸಕ್ಕರೆಯನ್ನೂ ಕಲಸಿ ತುಪ್ಪದಿಂದ ಪಳುಗಿದ ಗಡಿಗೆಯಲ್ಲಿ ಹಾಕಿ ಆರು ತಿಂಗಳು ಕಾಲ ಭೂಮಿಯಲ್ಲಿ ಸ್ಥಾಪಿಸಬೇಕು. ಅನಂತರ ತೆಗೆದು ಈ ಲೇಹ್ಯವನ್ನು ಅಗ್ನಿಬಲಕ್ಕೆ ತಕ್ಕಂತೆ ದಿನವೂ ಪ್ರಾತಃಕಾಲ ಮಾತ್ರ ಸೇವಿಸಿ ಅದು ಜೀರ್ಣಿಸಿದ ಮೇಲೆ ಅಭ್ಯಾಸವಿರುವ ಆಹಾರವನ್ನು ತೆಗೆದುಕೊಳ್ಳಬೇಕು. ಇದೂ ಸಹ ಹಿಂದಿನ ಯೋಗದಂತೆಯೇ ಆಯುಸ್ಸನ್ನು ಹೆಚ್ಚಿಸಿ ಮುಪ್ಪಿನ ಬಾಧೆಯಿಲ್ಲದಂತೆ ಮಾಡುವುದು.

**ನಾಗಬಲಾ ರಸಾಯನ**—ಫಲವತ್ತಾಗಿರುವ ಸ್ನಿಗ್ಧ, ಕೃಷ್ಣ ಮತ್ತು ಮಧುರಮಣ್ಣಿನ ಭೂಮಿಯಲ್ಲಿ ಅಥವಾ ಹೊಂಬಣ್ಣದ ಭೂಮಿಯಲ್ಲಿ, ದರ್ಭೆಯು ಬೆಳೆಯುವಂತಹ ಪ್ರದೇಶದಲ್ಲಿ ವಿಷಕೀಟಾದಿಗಳಾವುವೂ ಇಲ್ಲದೆ ಚೆನ್ನಾಗಿ ಬೆಳೆದಿರುವ ಮಧ್ಯವಯಸ್ಸಿನ ನಾಗಬಲಾಗಿಡವನ್ನು ಸಂಗ್ರಹಿಸಬೇಕು. ಇದು ಹುತ್ತದ ಮೇಲೆ ಬೆಳೆದಿರಬಾರದು, ಬೆಂಕಿಯ ಬಾಧೆಗೆ ಸಿಕ್ಕಿರಬಾರದು ಮತ್ತು ಇದನ್ನು ಯಾರೂ ತುಳಿದಾಡಿರಬಾರದು. ಇಂತಹ ಗಿಡದಲ್ಲಿ ಹಳೆ

ಎಲೆಗಳು ಉದುರಿ ಹೊಸ ಎಲೆಗಳು ಹುಟ್ಟುವುದಕ್ಕೆ ಮೊದಲೇ ಎಂದರೆ ಮಾಘ ಫಾಲ್ಗುಣ ಮಾಸಗಳಲ್ಲಿ, ಒಳ್ಳೆಯ ಮುಹೂರ್ತದಲ್ಲಿ, ಶುದ್ಧ ಮನಸ್ಸಿನಿಂದ ಈ ಗಿಡದ ಬೇರುಗಳನ್ನು ತೆಗೆದುಕೊಳ್ಳಬೇಕು ಇವನ್ನು ತೊಳೆದು, ಮೇಲಿನ ಸಿಪ್ಪೆ ಒಂದು ಪಲ ಅಥವಾ ಕಾಲು ಪಲ(ಒಂದು ಕರ್ಷ)ದಷ್ಟನ್ನು ನುಣ್ಣಗೆ ಅರೆದು ಹಾಲಿನಲ್ಲಿ ಕಲಸಿ ಪ್ರತಿ ಪ್ರಾತಃಕಾಲವೂ ಕುಡಿಯಬೇಕು. ಅಥವಾ ಇದರ ಚೂರ್ಣವನ್ನು ಹಾಲಿನಲ್ಲಾಗಲೀ ಜೇನುತುಪ್ಪದಲ್ಲಾಗಲೀ ಸೇವಿಸ ಬೇಕು. ಜೀರ್ಣವಾದಮೇಲೆ ಹಾಲು ತುಪ್ಪಗಳೊಂದಿಗೆ ಶಾಲಿ ಅಥವಾ ಷಷ್ಟಿಕ ಅನ್ನವನ್ನು ತಿನ್ನಬೇಕು. ಹೀಗೆ ಒಂದು ವರ್ಷ ಮಾಡುವುದರಿಂದ ನೂರು ವರ್ಷಗಳ ಕಾಲ ಜರಾವ್ಯಾಧಿಗಳಿಲ್ಲದೆ ಸುಖವಾಗಿ ಬಾಳುವನು.

**ಭಲ್ಲಾತಕ ಪ್ರಯೋಗಗಳು**—ಭಲ್ಲಾತಕ ಬೀಜಗಳು ನೇರಿಳೆಹಣ್ಣಿನ ಬಣ್ಣಕ್ಕೆ ತಿರುಗಿರುವಾಗ ಎಂದರೆ ಜ್ಯೇಷ್ಠ ಆಷಾಢ ಮಾಸಗಳಲ್ಲಿ ಅವನ್ನು ಸಂಗ್ರಹಿಸಿ ನಾಲ್ಕು ತಿಂಗಳು ಕಾಲ ಯವೆ ಅಥವಾ ಉದ್ದಿನಕಾಳುಗಳ ರಾಶಿ ಯಲ್ಲಿರಿಸಬೇಕು. ಭಲ್ಲಾತಕಗಳು ಪೆಟ್ಟನಿಂದಾಗಲೀ ಕ್ರಿಮಿಗಳಿಂದಾಗಲೀ ಬಾಧಿಸಲ್ಪಟ್ಟಿರಬಾರದು. ಸಂಪೂರ್ಣ ರಸವೀರ್ಯಗಳಿಂದ ಕೂಡಿ ದೊಡ್ಡದಾಗಿ ಬೆಳೆದಿರಬೇಕು. ಇವನ್ನು ಮಾರ್ಗಶಿರ ಪುಷ್ಯ ಮಾಸಗಳಲ್ಲಿ ಸೇವಿಸಲು ಪ್ರಾರಂಭಿಸಬೇಕು. ಇವನ್ನು ಸ್ನಿಗ್ಧಾಹಾರಿಗಳು ಮಾತ್ರ ಸೇವಿಸಬೇಕು. ರೂಕ್ಷರು, ಪಿತ್ತಪ್ರಕೃತಿಯವರು, ಪಿತ್ತದೋಷಪ್ರಕೋಪದಿಂದ ನರಳುವವರು ಮತ್ತು ಬೆಂಕಿ ಬಿಸಿಲುಗಳನ್ನು ಸೇವಿಸುವವರು ಭಲ್ಲಾತಕಗಳನ್ನು ಉಪಯೋ ಗಿಸಬಾರದು. ಭಲ್ಲಾತಕಘೃತ, ಭಲ್ಲಾತಕಕ್ಷೀರ, ಭಲ್ಲಾತಕಕ್ಷೌದ್ರ ಮುಂತಾದ ಯೋಗಗಳನ್ನು ಯಥಾ ವಿಧಿಯಿಂದ ಉಪಯೋಗಿಸಲು ಜರಾವ್ಯಾಧಿಗಳಿಲ್ಲದೆ ಶತಾಯುಷ್ಯವುಂಟಾಗುವುದು. ಕಫರೋಗಗಳು ನಾಶವಾಗುವುವು. ರಸಾಯನ ವನ್ನು ಸೇವಿಸುವ ಮೊದಲು ಬಾಯಲ್ಲಿ ತುಪ್ಪವನ್ನು ಚೆನ್ನಾಗಿ ಸವರಿಕೊಂಡು ಅನಂತರ ಪ್ರಮಾಣವರಿತು ಇದರ ಯೋಗವನ್ನು ತೆಗೆದುಕೊಳ್ಳಬೇಕು. ಔಷಧಿಯ ದ್ವಿಗುಣ ಹಾಲನ್ನು ಅನುಪಾನವಾಗಿ ಕುಡಿಯಬೇಕು. ಜೀರ್ಣಿಸಿದ ಮೇಲೆ ಶಾಲಿ ಷಷ್ಟಿಕ ಅನ್ನ, ಹಾಲು ಮತ್ತು ತುಪ್ಪಗಳನ್ನು ಊಟಮಾಡ ಬೇಕು.

ಭಲ್ಲಾತಕಾನಿ ತೀಕ್ಷ್ಣಾನಿ ಪಾಕೀನ್ಯಗ್ನಿಸಮಾನಿ ಚ ।
ಭವಂತ್ಯಮೃತಕಲ್ಪಾನಿ ಪ್ರಯುಕ್ತಾನಿ ಯಥಾವಿಧಿ ॥
ಕಫಜೋನಸರೋಗೋಸ್ತಿನ ವಿಬಂಧೋಸ್ತಿಕಶ್ಚನ ।
ಯಂ ನಭಲ್ಲಾತಕಂ ಹನ್ಯಾಚ್ಛೀಘ್ರಂ ಮೇಧಾಗ್ನಿವರ್ಧನಮ್ ॥

**ಭಲ್ಲಾತಕಕ್ವಾದ್ರ**—ಗೇರನ್ನು ಜಜ್ಜಿ ಅಧಃಪಾತನ ಯಂತ್ರದಿಂದ ತೈಲವನ್ನು ತೆಗೆಯಬೇಕು. ಒಂದು ಮಡಕೆಯ ತಳಭಾಗದಲ್ಲಿ ನಾಲ್ಕಾರು ಸಣ್ಣ ರಂಧ್ರಗಳನ್ನು ಕೊರೆದು ಅದರಲ್ಲಿ ಜಜ್ಜಿದ ಭಲ್ಲಾತಕಗಳನ್ನು ಹಾಕಿ ಮೇಲೆ ಒಂದು ಶ್ರಾವೆಯನ್ನು ಮುಚ್ಚಿ ಚೀರುಮಾಡಬೇಕು. ಮತ್ತೊಂದು ಮಡಕೆಯನ್ನು ತುಪ್ಪದಲ್ಲಿ ಪಳುಗಿಸಿ ಅದನ್ನು ಕಂಠದವರೆಗೂ ಭೂಮಿಯಲ್ಲಿ ಹೂತು ಮೇಲೆ ಭಲ್ಲಾತಕ ಮಡಕೆಯನ್ನಿಟ್ಟು ಜೇಡಿಮಣ್ಣಿನಿಂದ ಸಂಧಿಬಂಧ ಮಾಡಬೇಕು. ಶ್ರಾವೆಯಮೇಲೆ ದಪ್ಪ ಬೆರಣಿಗಳನ್ನಿಟ್ಟು ಉರಿಹಾಕುವುದರಿಂದ ಭಲ್ಲಾತಕತೈಲ ಪತನವಾಗುವುದು. ತೈಲಕ್ಕೆ ಎಂಟರಷ್ಟು ಜೇನುತುಪ್ಪವನ್ನೂ ಎರಡರಷ್ಟು ತುಪ್ಪವನ್ನೂ ಕಲಸಿ ಪ್ರಮಾಣವರಿತು ಹಿಂದಿನಂತೆ ಉಪಯೋಗಿಸಬೇಕು.

**ಲೌಹಾದಿ ರಸಾಯನ**—ನಾಲ್ಕು ಅಂಗುಲ ಉದ್ದದ ತೆಳ್ಳಗಿರುವ ತೀಕ್ಷ್ಣಲೋಹದ ತಗಡುಗಳನ್ನು ಕೆಂಪಗೆ ಕಾಯಿಸಿ ಕಾಯಿಸಿ ಕ್ರಮವಾಗಿ ತ್ರಿಫಲಾಕ್ವಾಥ, ಗೋಮೂತ್ರ, ಜ್ಯೋತಿಷ್ಮತಿ (ಗಂಗುಂಗೆ), ಕ್ಷಾರೋದಕ, ಇಂಗಳಕ್ಷಾರೋದಕ ಮತ್ತು ಮುತ್ತುಗದ ಕ್ಷಾರೋದಕಗಳಲ್ಲಿ ಅದ್ದಬೇಕು. ದ್ರವಗಳ ತಳಗಳಲ್ಲಿ ನಿಂತ ಲೋಹಚೂರುಗಳನ್ನು ನುಣ್ಣಗೆ ಅರೆದು ತುಪ್ಪದ ಗಡಿಗೆಯಲ್ಲಿ ಹಾಕಿ ಆ ಚೂರ್ಣಕ್ಕೆ ಜೇನುತುಪ್ಪ ಮತ್ತು ನೆಲ್ಲೀಕಾಯಿ ರಸಗಳನ್ನು ಹಾಕಿ ಲೇಹ್ಯದಂತೆ ಆವನೇಲೆ ಮುಚ್ಚಿ ಯವೆ ಧಾನ್ಯರಾಶಿಯಲ್ಲಿ ಒಂದು ವರ್ಷ ಕಾಲ ಇರಿಸಿರಬೇಕು. ತಿಂಗಳಿಗೊಂದಾವರ್ತಿ ಒಳಗಿರುವ ದ್ರವ್ಯಗಳನ್ನೆಲ್ಲಾ ಕಲಸುತ್ತಿರಬೇಕು. ವರ್ಷವಾದಮೇಲೆ ತೆಗೆದು ಅದನ್ನು ಜೇನುತುಪ್ಪ ಮತ್ತು ತುಪ್ಪಗಳೊಡನೆ ಸೇರಿಸಿ ಪ್ರತಿ ಪ್ರಾತಃಕಾಲ ಪ್ರಮಾಣವರಿತು ಸೇವಿಸಬೇಕು. ಅದು ಜೀರ್ಣವಾದನಂತರ ಅಭ್ಯಾಸವಿರುವ ಆಹಾರವನ್ನು ತೆಗೆದುಕೊಳ್ಳಬೇಕು. ಹೀಗೆ ಒಂದು ವರ್ಷಕಾಲ ಸೇವಿಸಬೇಕು.

ಚಿನ್ನ ಬೆಳ್ಳಿಗಳನ್ನೂ ಇದೇ ರೀತಿಯಲ್ಲಿ ಉಪಯೋಗಿಸಬಹುದು. ಇದರಿಂದ ರೋಗರುಜಿನಗಳಿಲ್ಲದೆ ಬಲಿಷ್ಠನಾಗುವನು. ಇಂದ್ರಿಯಪಾಟವವು ಹೆಚ್ಚುವುದು. ಬುದ್ಧಿ, ವಾಕ್ ಮತ್ತು ಮೇಧಾ ಮತ್ತು ಸ್ಮರಣಶಕ್ತಿಗಳು ಹೆಚ್ಚುವುವು.

**ಪಿಪ್ಪಲೀ ರಸಾಯನ**—(೧) ಪ್ರತಿದಿನವೂ ಪ್ರಾತಃಕಾಲದಲ್ಲಿ ಐದು, ಏಳು, ಎಂಟು ಅಥವಾ ಹತ್ತರಂತೆ ತನಗೆ ತಡೆಯುವಷ್ಟು ಸಂಖ್ಯೆ ಹಿಪ್ಪಲಿಗಳನ್ನು ಚೂರ್ಣಿಸಿ ತುಪ್ಪ ಮತ್ತು ಜೇನುತುಪ್ಪಗಳನ್ನು ಸೇರಿಸಿ ಒಂದು ಸಂವತ್ಸರ ಸೇವಿಸಬೇಕು.

(೨) ಹಿಪ್ಪಲಿಯನ್ನು ಮುತ್ತುಗ ಕ್ಷಾರೋದಕದಲ್ಲಿ ಭಾವನೆಮಾಡಿ ಒಣಗಿಸಿ ತುಪ್ಪದಲ್ಲಿ ಕರಿದು ಪ್ರಾತಃಕಾಲ ಮೂರು, ಮಧ್ಯಾಹ್ನ ಊಟಕ್ಕೆ ಮೊದಲು ಮೂರು ಮತ್ತು ಊಟವಾದ ಮೇಲೆ ಮೂರು ಹಿಪ್ಪಲಿಗಳನ್ನು ಜೇನುತುಪ್ಪದೊಡನೆ ಸೇವಿಸುತ್ತಿರಬೇಕು.

ಈ ವಿಧಿಗಳಿಂದ ಕಾಸ, ಶ್ವಾಸ, ಶೋಷ, ಗಲರೋಗ, ಅರ್ಶ, ಗ್ರಹಣೀ, ವಿಷಮಜ್ವರ, ಗುಲ್ಮ ಮುಂತಾದುವು ನಾಶಹೊಂದುವುವು.

**ವರ್ಧಮಾನಪಿಪ್ಪಲೀ ರಸಾಯನ**—ಹತ್ತು ಹಿಪ್ಪಲಿಗಳಿಂದ ಮೊದಲು ಮಾಡಿ ಹತ್ತು ದಿನಗಳವರೆಗೆ ದಿನವೂ ಹತ್ತುಹತ್ತರಂತೆ ಹೆಚ್ಚಿಸಿಕೊಂಡು ಅನಂತರ ಹನ್ನೊಂದನೆಯ ದಿನದಿಂದ ದಿನಕ್ಕೆ ಹತ್ತುಹತ್ತರಂತೆ ಕಡಿಮೆ ಮಾಡುತ್ತಾ ಹತ್ತೊಂಬತ್ತು ದಿನಗಳಲ್ಲಿ ಒಂದು ಸಾವಿರ ಹಿಪ್ಪಲಿಗಳನ್ನು ಹಾಲಿನೊಡನೆ ಸೇವಿಸಬೇಕು. ಇದು ಉತ್ತಮ ಪ್ರಮಾಣ ಆರು ಆರರಂತೆ ವೃದ್ಧಿ ಮಾಡಿ ಹತ್ತು ದಿನಗಳನಂತರ ಕಡಿಮೆ ಮಾಡುವುದು ಮಧ್ಯಮ ಪ್ರಮಾಣ. ಮೂರರಂತೆ ಉಪಯೋಗಿಸುವುದು ಕನಿಷ್ಠ. ಬಲಿಷ್ಠರು ಹಿಪ್ಪಲಿಗಳನ್ನು ಕಲ್ಕಮಾಡಿ ಹಾಲಿನೊಡನೆ ಕುಡಿಯಬೇಕು. ಮಧ್ಯಮ ಬಲವುಳ್ಳವರು ಹಿಪ್ಪಲಿಗಳನ್ನು ಹಾಲಿನಲ್ಲಿ ಬೇಯಿಸಿ ತಿನ್ನಬೇಕು. ಕಡಿಮೆ ಬಲವುಳ್ಳವರು ಹಿಪ್ಪಲಿಚೂರ್ಣವನ್ನು ಹಾಲಿನಲ್ಲಿ ಕದಡಿ ಕುಡಿಯಬೇಕು. ಈ ರಸಾಯನವು ಬೃಂಹಣವಾದುದು. ಧ್ವನಿಯನ್ನು ಸರಿಪಡಿಸುವುದು; ಆಯುಷ್ಯ ಮತ್ತು ಮೇಧ್ಯ. ಪ್ಲೀಹೋದರವನ್ನು ನಾಶಪಡಿಸುವುದು.

**ತ್ರಿಫಲಾರಸಾಯನ**—ತ್ರಿಫಲಾಕಲ್ಕವನ್ನು ಚೊಕ್ಕಟವಾದ ಕಬ್ಬಿಣ ಪಾತ್ರೆಯೊಳಕ್ಕೆ ಲೇಪಿಸಿ ಒಂದು ಹಗಲು ಒಂದು ರಾತ್ರಿ ಬಿಟ್ಟಿದ್ದು ಮರುದಿನ ಬೆಳಿಗ್ಗೆ ಅದನ್ನು ಕೆರೆದು ಜೇನುತುಪ್ಪ ಮತ್ತು ನೀರುಗಳೊಂದಿಗೆ ಕಲಸಿ ಕುಡಿಯ ಬೇಕು. ಅದು ಜೀರ್ಣಿಸಿದನಂತರ ವಿಶೇಷವಾಗಿ ಸ್ನಿಗ್ಧವಾದ ಆಹಾರವನ್ನು ಸೇವಿಸಬೇಕು. ಹೀಗೆ ಒಂದು ವರ್ಷ ಮಾಡುವುದರಿಂದ ಮುಪ್ಪು ಮತ್ತು ರೋಗಗಳಿಲ್ಲದೆ ಶತಾಯುಷಿಯಾಗುವನು.

**ಶಿಲಾಜತು ರಸಾಯನ**—ಶಿಲಾಜತುವು ಹೇಮಗರ್ಭ, ರಜತಗರ್ಭ, ತಾಮ್ರಗರ್ಭ ಮತ್ತು ಲೋಹಗರ್ಭಗಳೆಂದು ಮುಖ್ಯವಾಗಿ ನಾಲ್ಕು ವಿಧ. ಬಿಸಿಲುಗಾಲದಲ್ಲಿ ಸೂರ್ಯನ ತಾಪದಿಂದ ಹಿಮವತ್ಪರ್ವತದ ಶಿಲಾಪ್ರದೇಶಗಳಲ್ಲಿ ಶಿಲಾಧಾತುಗಳು ಕರಗಿ ಹರಿಯುವುವು. ಇವು ಅರಗಿನಂತೆ ಮೃದುವಾಗಿರುವುದ ರಿಂದ ಶಿಲಾಜತು ಎಂದು ಹೆಸರುಪಡೆದಿದೆ. ಇವು ಆಯಾ ಮೂಲಗಳಿಗನು ಸಾರವಾಗಿ ಬೇರೆಬೇರೆ ಗುಣಗಳನ್ನು ಹೊಂದಿವೆ.

(೧) **ಹೇಮಗರ್ಭ**—ದಾಸವಾಳದ ಹೂವಿನಂತೆ ಕೆಂಪಗಿರುವುದು. ಮಧುರ ತಿಕ್ತರಸವನ್ನುಳ್ಳದ್ದು. ಶೀತವೀರ್ಯ ಮತ್ತು ಕಟುವಿಪಾಕವುಳ್ಳದ್ದು. ವಾತಪಿತ್ತದೋಷಹರವಾದುದು.

(೨) **ರಜತಗರ್ಭ**—ಇದು ಬೆಳ್ಳಗಿರುತ್ತದೆ, ಕಟುರಸ, ಶೀತವೀರ್ಯ ಮತ್ತು ಸ್ವಾದುವಿಪಾಕ; ಶ್ಲೇಷ್ಮಪಿತ್ತಹರ.

(೩) **ತಾಮ್ರಗರ್ಭ**—ತಿಕ್ತರಸ, ಉಷ್ಣವೀರ್ಯ ಮತ್ತು ಕಟುವಿಪಾಕ. ನವಿಲಿನ ಕುತ್ತಿಗೆಯ ಬಣ್ಣವನ್ನು ಹೋಲುತ್ತದೆ. ಕಫದೋಷಹರವಾದುದು.

(೪) **ಲೋಹಗರ್ಭ**—ಗುಗ್ಗುಳುವಿನಂತಿರುತ್ತದೆ. ತಿಕ್ತ ಮತ್ತು ಲವಣರಸ, ಶೀತವೀರ್ಯ ಮತ್ತು ಕಟುವಿಪಾಕಗಳನ್ನುಳ್ಳದ್ದು. ಎಲ್ಲಕ್ಕಿಂತಲೂ ಶ್ರೇಷ್ಠವಾದುದು ತ್ರಿದೋಷಘ್ನ.

**ಸಾಮಾನ್ಯ ಲಕ್ಷಣ**—ಶಿಲಾಜತುವು ಸ್ವಾಭಾವಿಕವಾಗಿ ಅಮ್ಲರಸವಿಲ್ಲದೆ ಒಗರಾಗಿರುತ್ತದೆ. ಕಟುವಿಪಾಕ ಹೊಂದುವುದು; ಸಮಶೀತೋಷ್ಣವಾದುದು; ಗೋಮೂತ್ರಗಂಧವುಳ್ಳದ್ದು. ಎಲ್ಲಾ ಯೋಗಗಳಲ್ಲೂ ಒಳ್ಳೆಯದು. ಇದಕ್ಕೆ

ಗೋಮೂತ್ರ ಶಿಲಾಜತುವೆಂದೂ ಹೆಸರಿದೆ. ಯೋಗವಾಹಿಗುಣವುಳ್ಳದ್ದು. ವಾತ, ಪಿತ್ತ ಮತ್ತು ಕಫಹರಗಳಾದ ಪ್ರತ್ಯೇಕ ಕಷಾಯಗಳಿಂದ ಇದಕ್ಕೆ ಭಾವನೆ ಕೊಟ್ಟರೆ ಆಯಾ ದೋಷಹರಗುಣ ಹೆಚ್ಚುವುದು. ಆದುದರಿಂದ ಬೇಕಾದ ದೋಷಹರಣಮಾಡಲು ತಕ್ಕ ಕಷಾಯದಲ್ಲಿ ಏಳಾವರ್ತಿ ಭಾವನೆ ಮಾಡಿ ಉಪಯೋಗಿಸಬೇಕು.

**ಪ್ರಮಾಣ**—ಆಯಾ ಮನುಷ್ಯನ ಸಹನಶಕ್ತಿಗೆ ತಕ್ಕಷ್ಟು ಎಂದರೆ ಒಂದು ಮಾಷದಿಂದ ಪ್ರಾರಂಭಿಸಿ ಕ್ರಮಕ್ರಮವಾಗಿ ಹೆಚ್ಚಿಸಿಕೊಂಡು ಹೋಗ ಬೇಕು. ಹಿಂದಿನ ಕಾಲದಂತೆ ಇದರ ಪ್ರಮಾಣ ಒಂದು ಕರ್ಷದಿಂದ ಒಂದು ಪಲ.

**ಶಿಲಾಜತು ಪ್ರಯೋಗ**—ಶಿಲಾಜತುವನ್ನು ಹಿಂದಿನ ಯೋಗದಂತೆ ಲೋಹದ ಪಾತ್ರೆಯಲ್ಲಿ ಲೇಪಿಸಿ ಅನಂತರ ತೆಗೆದು ಪ್ರಾತಃಕಾಲ ಹಾಲಿನೊಡನೆ ಸೇವಿಸಬೇಕು. ಹಾಲು ಅನ್ನವನ್ನು ತಿನ್ನಬೇಕು. ಹೀಗೆ ಏಳು ವಾರ ಅಥವಾ ಮೂರು ವಾರ ಇಲ್ಲವೇ ಒಂದು ವಾರಕಾಲ ಸೇವಿಸಬೇಕು. ಈ ಕಾಲಗಳು ಉತ್ತಮ, ಮಧ್ಯಮ ಮತ್ತು ಕನಿಷ್ಠಫಲಗಳನ್ನು ಕೊಡತಕ್ಕವು. ಇದರ ಉಪ ಯೋಗದಿಂದ ದೇಹದಾರ್ಢ್ಯ, ಮೇಧಾಸ್ಮೃತಿಗಳುಂಟಾಗುವುವು, ಜರಾವ್ಯಾಧಿ ಗಳು ದೂರವಾಗುವುವು.

**ಶಿಲಾಜತು ಸೇವನೆಗೆ ನಿಷಿದ್ಧಗಳು**—ವಿದಾಹಿ ಮತ್ತು ಗುರುಪದಾ ರ್ಥಗಳನ್ನೂ ಹುರಳಿಯನ್ನೂ ತ್ಯಜಿಸಬೇಕು.

**ಅನುಪಾನ**—ಹಾಲು, ಮಜ್ಜಿಗೆ, ಮಾಂಸರಸ, ಯೂಷಾ, ನೀರು, ಮತ್ತು ವಿವಿಧ ಕಷಾಯಗಳು ಪಥ್ಯಗಳು.

ಸಮರ್ಥರು, ಆರೋಗ್ಯವಂತರು, ಬುದ್ಧಿವಂತರು, ಇಂದ್ರಿಯನಿಗ್ರಹ ವುಳ್ಳವರು, ಸಹನಶಕ್ತಿಯುಳ್ಳವರು ಮತ್ತು ತಕ್ಕ ಸಲಕರಣೆಗಳನ್ನು ಹೊಂದಿರ ತಕ್ಕವರು ಮಾತ್ರ ಕುಟೀಪ್ರಾವೇಶಿಕ ವಿಧಿಯಲ್ಲಿ ರಸಾಯನವನ್ನು ಸೇವಿಸಲು ಅರ್ಹರು. ಇಂದ್ರಿಯನಿಗ್ರಹವಿಲ್ಲದವರಿಗೆ ರಸಾಯನವು ಸಿದ್ಧಿಸುವುದಿಲ್ಲ. ರಸಾಯನಸಿದ್ಧಿಯಿಲ್ಲದವರಿಗೆ ತಪಸ್ಸು, ಬ್ರಹ್ಮಚರ್ಯ ಮತ್ತು ಆಧ್ಯಾತ್ಮಿಕ ಜ್ಞಾನ ಸಿದ್ಧಿಗಳು ಲಭಿಸುವುದಿಲ್ಲ. ಹಿಂದಿನ ಮಹರ್ಷಿಗಳು ರಸಾಯನ ಸೇವನೆ

ಯಿಂದಲೇ ತಮ್ಮ ಜೀವಿತಕಾಲವನ್ನು ಹೆಚ್ಚಿಸಿಕೊಂಡು ಲೋಕೋಪಕಾರ ಗಳನ್ನು ಮಾಡಿರುವರಲ್ಲದೆ ಬ್ರಹ್ಮಸಾಕ್ಷಾತ್ಕಾರವನ್ನು ಹೊಂದಿದರು.

**ವಾತಾತಪಿಕ**—ಕುಟೀಪ್ರಾವೇಶಿಕ ವಿಧಿಯಿಂದ ಸೇವಿಸಲು ಸಾಧ್ಯವಿಲ್ಲದವರು ಬಿಸಿಲು ಗಾಳಿಗಳನ್ನು ತಪ್ಪಿಸಿಕೊಂಡೇ ಸೇವಿಸಬಹುದು. ಈ ವಿಧಿಗೆ ವಾತಾತಪಿಕವೆಂದು ಹೆಸರು. ಆದರೆ ಇವೆರಡರಲ್ಲಿ ಕುಟೀಪ್ರಾವೇಶಿಕವೇ ಉತ್ತಮವಾದುದು. ರಸಾಯನವಿಧಿಯಲ್ಲಿ ಕ್ರಮ ತಪ್ಪುವುದರಿಂದ ವ್ಯಾಧಿಗ ಳೇನಾದರೂ ಸಂಭವಿಸಿದರೆ ಆ ಔಷಧವನ್ನು ನಿಲ್ಲಿಸಿ ವ್ಯಾಧಿಗಳಿಗೆ ತಕ್ಕ ಚಿಕಿತ್ಸೆ ಯನ್ನು ಮಾಡಬೇಕು. ರಸಾಯನವನ್ನು ಸೇವಿಸುವವನು ಸತ್ಯವಾದಿಯೂ, ರೋಗರಹಿತನೂ, ಮದ್ಯ ಮತ್ತು ಮೈಥುನ ವರ್ಜಿಯೂ ಆಗಿರಬೇಕು. ಅಹಿಂಸಾ, ಅನಾಯಾಸ, ಶಾಂತಸ್ವಭಾವವುಳ್ಳವನೂ ಆಗಿರಬೇಕು. ಪ್ರಿಯ ವಾದಿಯೂ, ಸದಾಚಾರಶೀಲನೂ, ಆಸ್ತಿಕನೂ ಆಗಿರಬೇಕು. ಆಯಾ ಕಾಲ ಗಳಲ್ಲಿ ಎಚ್ಚರವಾಗಿರುವ ಮತ್ತು ನಿದ್ದೆಮಾಡುವ ಅಭ್ಯಾಸಗಳುಳ್ಳವನಾಗಿರ ಬೇಕು.

ವಾಜೀಕರಣವು ಇಹಲೋಕದ ಸುಖವನ್ನೂ ಪರಲೋಕದಲ್ಲಿ ಸದ್ಗತಿ ಯನ್ನೂ ದೊರಕಿಸಿಕೊಡುವುದು. ಇಹಲೋಕದ ಸುಖವೆಂದರೆ ಸಂಸಾರಿಗಳಲ್ಲಿ ಉತ್ತಮ ಸಂಸಾರಿಯಾಗಿ ಫಲ ಮತ್ತು ಛಾಯೆಗಳಿಂದ ಕೂಡಿರುವ ವೃಕ್ಷದೋ ಪಾದಿಯಲ್ಲಿ ಪುರುಷನು ತನ್ನ ಸಂತಾನಾಭಿವೃದ್ಧಿಯನ್ನು ಪಡೆದು ಪುತ್ರಪೌತ್ರಾದಿ ಗಳಿಗೆ ತಾನು ಮೂಲಕಾರಣನಾಗಿಯೂ ಅವರು ಪ್ರಾಪ್ತವಯಸ್ಕರಾದಮೇಲೆ ತಾನು ಅವರಿಂದ ಉತ್ತರಕಾಲ ಸುಖವನ್ನು ಪಡೆಯುವವನಾಗಿಯೂ ಆಗು ವನು. ಸಂತಾನವಿಲ್ಲದವನು ಎಲೆಗಳಿಲ್ಲದ ಒಂದೇ ರೆಂಬೆಯಿರುವ ದುರ್ಗಂಧ ಪುಷ್ಪದ ಮರದಂತೆಯೂ, ಚಿತ್ರದಲ್ಲಿ ಬರೆದಿರುವ ದೀಪದಂತೆಯೂ ಮತ್ತು ಸೊಗಸಾಗಿ ಅಲಂಕರಿಸಲ್ಪಟ್ಟಿರುವ ಅರಗಿನ ಬೊಂಬೆಯಂತೆ ಸಪ್ತಧಾತುಗಳಿಂದ ಕೂಡಿದ್ದರೂ ಸಪ್ತಮಧಾತುವಿಲ್ಲದ ಮನುಷ್ಯನೆಂದು ಹೇಳಲ್ಪಟ್ಟಿದೆ. ಪುತ್ರನಿಂದ ಧರ್ಮ, ಅರ್ಥ, ಪ್ರೀತಿ ಮತ್ತು ಯಶಸ್ಸುಗಳುಂಟಾಗುವುವು. ಇಂತಹ ಪುತ್ರಸಂತಾನಕ್ಕೆ ವಾಜೀಕರಣವೇ ಕಾರಣ ಆದುದರಿಂದ ಲೋಕದಲ್ಲಿ ಧರ್ಮವೇ ಮುಂತಾದ ಗುಣಗಳಿಗಾಶ್ರಯನಾದ ಪುತ್ರನನ್ನು ಪಡೆಯಲಪೇಕ್ಷಿ

ಸುವ ಪುರುಷನು (ಬಾಲಕರು ಮತ್ತು ವೃದ್ಧರು ವಾಜೀಕರಣಕ್ಕೆ ಅನರ್ಹರು) ಪ್ರತಿದಿನವೂ ವಾಜೀಕರಣವನ್ನು ಸೇವಿಸಬೇಕು. ಇದಕ್ಕೆ ಕ್ಷೇತ್ರವು ಸ್ತ್ರೀ.

**ಸ್ತ್ರೀ ಗುಣಗಳು**—ಮನಸ್ಸಿಗೆ ಹರ್ಷವನ್ನುಂಟುಮಾಡುವ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧಗಳೆಂಬ ಐದು ವಿಷಯುಗಳೂ ಸ್ತ್ರೀಯಲ್ಲಿವೆ. ಆಕೆಯಲ್ಲಿ ಧರ್ಮ, ಇಂದ್ರಿಯಾರ್ಥ, ಸಂಪತ್ತು ಮತ್ತು ಅಪತ್ಯಗಳು ಸ್ಥಿರವಾಗಿ ನೆಲೆಸಿವೆ. ಒಳ್ಳೆಯ ರೂಪ, ಯೌವನಗಳಿಂದಲೂ ಪದ್ಮಿನ್ಯಾದಿ ಲಕ್ಷಣ ಗಳಿಂದಲೂ ಕೂಡಿರುವ, ಗೀತ ವಾದ್ಯ ನೃತ್ಯ ಮುಂತಾದ ಕಲೆಗಳಲ್ಲಿ ಶಿಕ್ಷಣ ವನ್ನು ಹೊಂದಿರುವ ಮತ್ತು ತನಗೆ ವಶ್ಯಳಾಗಿರುವ ಸ್ತ್ರೀಯೇ ಶ್ರೇಷ್ಠಳಾದ ವೃಷ್ಯಳು. ಇಷ್ಟು ಗುಣಗಳಿಂದ ಕೂಡಿರುವವಳು ತನ್ನ ಪತಿಯ ಅನುರಾಗಕ್ಕೆ ಪಾತ್ರಳಾಗಿರುವಳು. ಪತ್ನೀಸಮೇತನಾದವನಿಗೆ ಧರ್ಮಾದಿಗಳು ಸಿದ್ಧಿಯಾಗು ವುದರಿಂದ ಅವೆಲ್ಲವೂ ಸ್ತ್ರೀಯಲ್ಲಿ ಪ್ರತಿಷ್ಠವಾಗಿವೆಯೆಂದು ತಿಳಿಯಬೇಕು. ವೃಷ್ಯತಮಳ ಹೆಸರು, ಮಾತು, ನೋಟ, ಉಪಚಾರ ಮುಂತಾದುವುಗಳಿಂದ ಪುರುಷನಿಗೆ ಭಯ, ಉದ್ವೇಗ ಮತ್ತು ದುಃಖಗಳು ಮಾಯವಾಗಿ ಹರ್ಷವು ಉಂಟಾಗುವುದು.

> **ಅತುಲ್ಯಗೋತ್ರಾಂ ವೃಷ್ಯಾಂ ಚ ಪ್ರಹೃಷ್ಟಾಂ ನಿರುಪದ್ರವಾಮ್ ।**
> **ಶುದ್ಧಸ್ನಾತಾಂ ವ್ರಜೇನ್ನಾರೀಂ ಅಪತ್ಯಾರ್ಥೀ ನಿರಾಮಯಃ ॥**
> **ಚ ಚಿ.ಅ. ೨.**

ವೃಷ್ಯಳಾದ ಸ್ತ್ರೀಯು ತನಗಿಂತ ಬೇರೆಯ ಗೋತ್ರದಲ್ಲಿ ಹುಟ್ಟಿದವ ಳಾಗಿಯೂ, ಸಂತೋಷಮನಸ್ಕಳಾಗಿಯೂ ಮತ್ತು ಉಪದ್ರವರಹಿತಳಾಗಿಯೂ ಇರಬೇಕು. ಆಕೆಯು ಋತುಸ್ನಾತಳಾಗಿರುವಾಗ ಆರೋಗ್ಯವಂತನಾದ ಪತಿಯು ಆಕೆಯನ್ನು ಹೊಂದಬೇಕು. ಒಂದೇ ಗೋತ್ರದಲ್ಲಿ ಜನಿಸಿದ ಸ್ತ್ರೀ ಪುರುಷರಲ್ಲಿ ಸಹೋದರ ಸಹೋದರೀ ಭಾವಗಳಿರುವುವು. ಸಹೋದರಿಯಲ್ಲಿರುವ ಪ್ರೇಮಕ್ಕೂ ಪತ್ನಿಯಲ್ಲಿರುವ ಪ್ರೇಮಕ್ಕೂ ಬಹುವ್ಯತ್ಯಾಸವಿರುವುದು. ಧರ್ಮ, ಅರ್ಥ ಮತ್ತು ಅಪತ್ಯಗಳ ಶ್ರೇಯೋಭಿವೃದ್ಧಿಗಳಿಗಾಗಿ ಅತುಲ್ಯಗೋತ್ರಳನ್ನೇ ಪಡೆಯಬೇಕೆಂಬ ಅನುಶಾಸನವಿದೆ.

ಪ್ರೀತಿ, ಬಲ, ಸುಖ, ಜೀವನದ ವ್ಯಾಪ್ತಿ, ವಂಶವೃದ್ಧಿ, ಯಶಸ್ಸು, ಇಹ ಮತ್ತು ಪರಲೋಕ ಸುಖಗಳು ಸತ್ಪುತ್ರನಲ್ಲಿ ಪ್ರತಿಷ್ಠಿತವಾಗಿವೆ. ಆದುದರಿಂದ ಸತ್ಪುತ್ರನನ್ನೂ ಉಪಭೋಗಸುಖವನ್ನೂ ಪಡೆಯಲಪೇಕ್ಷಿಸುವವನು ಮೊದಲು ಸ್ನೇಹಸ್ವೇದಾದಿಗಳಿಂದ ಶರೀರವನ್ನು ಶುದ್ಧಿಮಾಡಿಕೊಂಡು ಅನಂತರ ವಾಜೀಕರಣ ಯೋಗಗಳನ್ನು ಸೇವಿಸಬೇಕು. ವಿಶೇಷವಾಗಿ ಇದನ್ನು ಸತ್ವಹೀನರು, ಶಾರೀರಕ ಕಷ್ಟಗಳಿಂದ ಪೀಡಿತರಾದವರು ಮತ್ತು ಶರೀರಕ್ಷಯವಾಗಿರುವವರೂ ಸೇವಿಸಲೇಬೇಕು. ಇವರೆಲ್ಲರೂ ಮಧ್ಯವಯಸ್ಸಿನವರಾಗಿರಬೇಕು. ಯಾವ ನಿಯಂತ್ರಣವೂ ಇಲ್ಲದೆ ಎಲ್ಲಾ ಋತುಗಳಲ್ಲೂ ಸೇವಿಸಬಹುದು. ಮೊದಲು ಸ್ನೇಹಸ್ವೇದಗಳಿಂದಲೂ, ನಿರೂಹ ಮತ್ತು ಅನುವಾಸನಗಳಿಂದಲೂ ಪರಿಶುದ್ಧನಾಗಿ ತುಪ್ಪ, ಎಣ್ಣೆ, ಮಾಂಸರಸ, ಕ್ಷೀರ, ಶರ್ಕರ ಮತ್ತು ಜೇನುತುಪ್ಪಗಳನ್ನು ಸೇವಿಸುತ್ತಿರುವವನಾಗಿ ಅನಂತರ ಶುಕ್ರಾಪತ್ಯಗಳನ್ನು ಹೆಚ್ಚಿಸುವ ಮತ್ತು ತನಗೆ ಅನುಕೂಲವಾಗಿರುವ ಯೋಗಗಳನ್ನು ತೆಗೆದುಕೊಳ್ಳುವವನಾಗಬೇಕು. ಈ ಕಾಲದಲ್ಲಿ ಹಾಲು, ಮಾಂಸರಸ ಮುಂತಾದ ವೃಷ್ಯಗಳನ್ನು ಹೆಚ್ಚಾಗಿ ಉಪಯೋಗಿಸಬೇಕು.

**ವಾಜೀಕರಣಘೃತ**—ಹೊಸ ಉದ್ದಿನಕಾಳು ಒಂದು ಆಢಕ, ಹೊಸ ನುಗ್ಗುನ್ನಿಬೀಜ ಒಂದು ಆಢಕ; ಜೀವಕ, ಋಷಭಕ, ಕ್ಷೀರಕಾಕೋಳೀ, ಮೇದ, ಋದ್ಧಿ, ಶತಾವರೀ, ಅತಿಮಧುರ ಮತ್ತು ಅಶ್ವಗಂಧಿಬೇರು ಇವು ಪ್ರತ್ಯೇಕ ಒಂದು ಕುಡವ; ಇವನ್ನೆಲ್ಲಾ ಕುಟ್ಟಿ ಒಟ್ಟರ ನಾಲ್ಕರಷ್ಟು ನೀರನ್ನು ಹಾಕಿ ಚತುರ್ಥಾವಶೇಷಕ್ವಾಥವನ್ನು ಮಾಡಬೇಕು. ಈ ಕ್ವಾಥಕ್ಕೆ ಒಂದು ಪ್ರಸ್ಥ ಹಸುವಿನ ತುಪ್ಪವನ್ನೂ, ಹತ್ತು ಪ್ರಸ್ಥ ಹಾಲನ್ನೂ, ಒಂದೊಂದು ಪ್ರಸ್ಥ ನೆಲಗುಂಬಳರಸ ಮತ್ತು ಕಬ್ಬಿನ ಹಾಲು ಇವೆಲ್ಲವನ್ನೂ ಹಾಕಿ ಘೃತಪಾಕ ಮಾಡಿ ಶೋಧಿಸಿ ಅದಕ್ಕೆ ಸಕ್ಕರೆ, ಬಿದಿರುಪ್ಪು ಮತ್ತು ಜೇನುತುಪ್ಪ ಇವು ಪ್ರತಿಯೊಂದೂ ನಾಲ್ಕು ಪಲ, ಹಿಪ್ಪಲಿ ಚೂರ್ಣ ಒಂದು ಪಲ ಇವುಗಳನ್ನು ಹಾಕಿ ಚೆನ್ನಾಗಿ ತೊಳೆಸಿಡಬೇಕು. ಈ ಘೃತವನ್ನು ಬೆಳಿಗ್ಗೆ ಒಂದು ಪಲ (ಅಗ್ನಿಬಲಕ್ಕನುಸಾರವಾಗಿ) ಸೇವಿಸಿ ಅದು ಜೀರ್ಣವಾದನಂತರ ಭೋಜನವನ್ನು ಮಾಡಬೇಕು. ಇದರಿಂದ ಶುಕ್ರವೃದ್ಧಿ ಮತ್ತು ಲಿಂಗಬಲಗಳುಂಟಾಗುವುವು

**ವಾಜೀಕರಣಪಿಂಡರಸ**—ಸಕ್ಕರೆ, ಉದ್ದಿನಬೇಳೆ, ಬಿದಿರುಪ್ಪು, ಹಾಲು, ತುಪ್ಪ ಮತ್ತು ಗೋಧಿಹಿಟ್ಟು ಇವನ್ನು ಕಲಸಿ ತುಪ್ಪದೊಡನೆ ಹೋಳಿಗೆ ಮಾಡಬೇಕು. ಇವು ಬಹಳ ಪಕ್ವವಾಗಲೀ ಅಥವಾ ಹಸಿದಾಗಲೀ ಆಗದಂತೆ ಸುಟ್ಟು ಅವನ್ನು ಮರ್ದನೆಮಾಡಿ ಒಂದುಗೂಡಿಸಿ ಮಧುರ ಮತ್ತು ಸುಗಂಧದ್ರವ್ಯಗಳೊಂದಿಗೆ ಸಿದ್ಧವಾದ ಬಿಸಿಯಾದ ಕೋಳಿಮಾಂಸರಸದಲ್ಲಿ ಹಾಕಿ ಗಟ್ಟಿಯಾಗುವಂತೆ ಕಲಸಬೇಕು. ಇದರ ಸೇವನೆಯಿಂದ ಶುಕ್ರವೃದ್ಧಿ ಮತ್ತು ಲಿಂಗಬಲಗಳುಂಟಾಗುವುವು.

**ವೃಷ್ಯಮಾಂಸ**—ಗುಬ್ಬಚ್ಚಿ ಮಾಂಸವನ್ನು ರಾತ್ರಿಯಲ್ಲಿ ತೃಪ್ತಿಯಾಗಿ ತಿಂದು ಮೇಲೆ ಹಸುವಿನ ಹಾಲನ್ನು ಕುಡಿಯುವುದರಿಂದ ಶುಕ್ರಕ್ಷಯವಾಗದೆ ಸಹನಶಕ್ತಿಯಿರುವುದು.

**ವೃಷ್ಯಲೇಹ್ಯ**—ನೆಲಗುಂಬಳ, ಹಿಪ್ಪಲಿ, ಶಾಲಿಯಕ್ಕಿ, ಚಾರುಪೊಪ್ಪು, ಕೊಳವಳಿಕೆಬೀಜ ಮತ್ತು ನಸುಗುನ್ನಿಬೇರು ಇವು ಪ್ರತ್ಯೇಕ ನಾಲ್ಕು ಪಲ; ಜೇನುತುಪ್ಪ ನಾಲ್ಕು ಪಲ; ಸಕ್ಕರೆ ಐವತ್ತು ಪಲ; ತುಪ್ಪ ಎಂಟು ಪಲ, ಇವುಗಳಿಂದ ಸಿದ್ಧಮಾಡಿದ ಲೇಹ್ಯವು ಅತ್ಯಂತ ವಾಜೀಕರವಾದುದು.

ಪ್ರಮಾಣ—ಒಂದು ಕರ್ಷ.

**ವೃಷ್ಯರಸಾಯನ**—ಹಿಪ್ಪಲಿ ಮತ್ತು ನೆಲ್ಲೀಚೆಟ್ಟುಗಳನ್ನು ಸಮಭಾಗ ಹಾಕಿ ಚೂರ್ಣಿಸಿ ಅದನ್ನು ನೆಲ್ಲೀಕಾಯಿರಸದಲ್ಲಿ ಚೆನ್ನಾಗಿ ಭಾವನೆಮಾಡಿ ಅದಕ್ಕೆ ಸಕ್ಕರೆ, ಜೇನುತುಪ್ಪ ಮತ್ತು ತುಪ್ಪ ಇವನ್ನು ಕಲಸಿ ನೆಕ್ಕುವುದರಿಂದ ಆ ಮನುಷ್ಯನು ವಯಸ್ಸಾದರೂ ತಾರುಣ್ಯದಿಂದಲೇ ಸುಖಪಡುವನು.

**ಶ್ವದಂಷ್ಟ್ರಾಚೂರ್ಣ**—ನೆಗ್ಗಿಲು, ಕೊಳವಳಿಕೆಬೀಜ, ಉದ್ದಿನಕಾಳು, ನಸುಗುನ್ನಿಬೀಜ ಮತ್ತು ಶತಾವರೀ ಇವುಗಳ ಚೂರ್ಣವನ್ನು ಹಸುವಿನ ಹಾಲಿನೊಂದಿಗೆ ಕುಡಿಯುವುದರಿಂದ ವೃದ್ಧನಾದರೂ ವಾಜೀಕೃತನಾಗುವನು.

**ಯತ್ಕಿಂಚಿನ್ಮಧುರಂ ಸ್ನಿಗ್ಧಂ ಜೀವನಂ ಬೃಂಹಣಂ ಗುರು |**
**ಹರ್ಷಣಂ ಮನಸಶ್ಚೈವ ಸರ್ವಂ ತದ್ವೃಷ್ಯಮುಚ್ಯತೇ ||**

ಚ.ಚಿ.ಅ. ೨.

ಮಧುರ, ಸ್ನಿಗ್ಧ, ಬಲಕರ, ಬೃಂಹಣ, ಗುರು ಈ ಗುಣಗಳುಳ್ಳ ದ್ರವ್ಯಗಳೆಲ್ಲವೂ ಮತ್ತು ಮನಸ್ಸಿಗೆ ಸಂತೋಷಕರವಾದ ವಿಷಯಗಳೆಲ್ಲವೂ ವೃಷ್ಯಗಳೆಂದು ಹೇಳಲ್ಪಡುತ್ತವೆ. ಇವುಗಳ ಸೇವನೆಯಿಂದ ಪುರುಷನಿಗೆ ತನ್ನಲ್ಲಿಯೇ ಸ್ವಾಭಾವಿಕವಾಗಿ ವೇಗ ಹುಟ್ಟುವುದು. ಜೊತೆಗೆ ತನಗೆ ವಶ್ಯಳಾದ ಎಂದರೆ ಇಷ್ಟವಾದ ಹಾವಭಾವ ಭೂಷಣಾದಿಗಳಿಂದ ಕೂಡಿದ ಸ್ತ್ರೀಯಿಂದ ಉತ್ತೇಜಿತನಾಗಿ ರಮಿಸುವನು. ಆಯಾ ಋತುಗಳಿಗೆ ತಕ್ಕಂತೆ ಶೀತೋಷ್ಣೋಪಚಾರಗಳಿಂದ ಏರ್ಪಡಿಸಿರುವ ಉದ್ಯಾನವನ, ಕೊಠಡಿ ಮುಂತಾದುವುಗಳಿಂದ ಮನುಷ್ಯನು ಯಾವಾಗಲೂ ಹರ್ಷಚಿತ್ತನಾಗಿಯೇ ಇರುತ್ತಾನೆ. ಹೀಗೆ ತೃಪ್ತನೂ ವಾಜೀಕೃತನೂ ಆದವನು ಇಹಪರ ಸುಖಗಳೆರಡನ್ನೂ ಅನುಭವಿಸಿ ಯಶಸ್ವಿಯಾಗುವನು.

**ನಿತ್ಯಂ ಹಿತಾಹಾರವಿಹಾರಸೇವೀ**
**ಸಮೀಕ್ಷ್ಯಕಾರೀ ವಿಷಯೇಷ್ವಸಕ್ತಃ ।**
**ದಾತಾಸಮಃ ಸತ್ಯಪರಃ ಕ್ಷಮಾವಾ**
**ನಾಪ್ತೋಪಸೇವೀ ಚ ಭವತ್ಯರೋಗಃ ॥** ಅ.ಹೃ.ಸೂ. ೪


ಚಿಕಿತ್ಸಾ
ಸಾಮಾನ್ಯ
(ಸ್ನೇಹ, ಸ್ವೇದ, ಅಭ್ಯಂಗ, ಉದ್ವರ್ತನ)
ಬೃಂಹಣ
ಲಂಘನ
ಭೇಷಜ,—ರಸಾಯನ
ರೋಗಹರ| ಊರ್ಜಕರ
ಅಥವಾ ಓಜಸ್ಕರ
ವಾಜೀಕರಣ
ಅಥವಾ ವೃಷ್ಯ
ಶಮನ
ಶೋಧನ
ಕುಟೀಪ್ರಾವೇಶಿಕ
ವಾತಾತಪಿಕ
ಕ್ಷುತ್
ತೃಟ್
ವ್ಯಾಯಾಮ
ಆತಪ
ಮಾರುತ
ವಮನ
ವಿರೇಚನ
ವಸ್ತಿ
ರಕ್ತಮೋಕ್ಷಣ (ಶಲ್ಯತಂತ್ರ)
(ಶಸ್ತ್ರ, ಶೃಂಗ, ಅಲಾಬು, ಜಲೌಕ)
ಕಾಯ
ಶಿರಃ
ನಿರೂಹ
ಅನುವಾಸನ
ಉತ್ತರ
ಶಿರಃ
ನಸ್ಯ
ಅಂಜನ
ಪುಟಪಾಕ
ಅಕ್ಷಿತರ್ಪಣ
ಧೂಮ
ಗಂಡೂಷ

# ಯೋಗಸಂಗ್ರಹ

## ಕ್ವಾಥಗಳು

**೧. ಕುಟಜಾಷ್ಟಕಕ್ವಾಥ** (ಶಾ ಸಂ.)

ಕೊಡಸಿಗೆ ಚಕ್ಕೆ, ಅತಿಬಜೆ, ಅಗಳುಶುಂಠಿ, ಧಾತಕೀಕುಸುಮ, ಲೋಧ್ರ ಚಕ್ಕೆ, ಕೊನ್ನಾರಿಗೆಡ್ಡೆ, ಮುಡಿವಾಳ ಮತ್ತು ದಾಳಿಂಬೆಹಣ್ಣಿನ ಸಿಪ್ಪೆ ಇವುಗಳನ್ನು ಸಮತೂಕ ಸೇರಿಸಿ ಕುಟ್ಟಿ ಎಂಟು ಪಾಲು ನೀರಿನಲ್ಲಿ ಕಾಯಿಸಿ ಚತುರ್ಥಾಂಶ ಕ್ವಾಥ ಮಾಡಿ ಆರಿದನಂತರ ಶೋಧಿಸಬೇಕು.

ಪ್ರಮಾಣ—ಅರ್ಧದಿಂದ ಒಂದು ಔನ್ಸ್ ಜೇನುತುಪ್ಪ ಮತ್ತು ಮೋಚರಸ(ಎಲವದಹಗಿನು)ಗಳೊಂದಿಗೆ ದಿನಕ್ಕೆ ಮೂರು ವೇಳೆ ಕುಡಿಸಬೇಕು.

ಉಪಯೋಗ—ರಕ್ತಾತೀಸಾರ, ಪ್ರವಾಹಿಕಾ ಮತ್ತು ಉರಿಗಳನ್ನು ಹೋಗಲಾಡಿಸುತ್ತದೆ.

**೨. ಗುಡೂಚ್ಯಾದಿಕ್ವಾಥ** (ಅಮೃತಾದಿಕ್ವಾಥ) (ಅ.ಹೃ.ಸೂ.)

ಅಮೃತಬಳ್ಳಿ, ಪದ್ಮಕ, ಬೇವಿನಚಕ್ಕೆ ಒಳನಾರು, ಧನಿಯ, ರಕ್ತಚಂದನ ಇವನ್ನು ವಿಧಿವತ್ತಾಗಿ ಕ್ವಾಥ ಮಾಡಿ ಕುಡಿಸುವುದರಿಂದ ಪಿತ್ತಶ್ಲೇಷ್ಮ, ಜ್ವರ, ಛರ್ದಿ, ದಾಹ ಮತ್ತು ಬಾಯಾರಿಕೆಗಳು ನಿಲ್ಲುವುವು. ಅಗ್ನಿವೃದ್ಧಿಯಾಗುವುದು.

**೩. ತ್ರಿಫಲಾದಿಕ್ವಾಥ-೧** (ಶಾ.ಸಂ.)

ಆಳಲೆಕಾಯಿ ಸಿಪ್ಪೆ, ತಾರೆಕಾಯಿ ಸಿಪ್ಪೆ, ನೆಲ್ಲೀಚೆಟ್ಟು, ದೇವದಾರು ಚಕ್ಕೆ, ಕೊನ್ನಾರಿಗೆಡ್ಡೆ, ಇಲಿಕಿವಿಸೊಪ್ಪು ಮತ್ತು ನುಗ್ಗೆಚಕ್ಕೆ ಇವುಗಳ ಚೂರ್ಣವನ್ನು ಎಂಟು ಪಾಲು ನೀರಿನಲ್ಲಿ ಹಾಕಿ ಅಷ್ಟಮಾಂಶ ಕ್ವಾಥ ಮಾಡಬೇಕು

ಪ್ರಮಾಣ—೧ರಿಂದ ೨ ಔನ್ಸ್; ಒಂದು ಶಾಣ ಹಿಪ್ಪಲೀ ಮತ್ತು ವಿಡಂಗ ಚೂರ್ಣದೊಡನೆ ಕುಡಿಸಬೇಕು.

ಉಪಯೋಗ—ಕ್ರಿಮಿಗಳು ನಾಶವಾಗುವುವು ಮತ್ತು ಕ್ರಿಮಿಜನ್ಯ ರೋಗಗಳು ನಿಲ್ಲುವುವು.

## ೪. ತ್ರಿಫಲಾದಿಕ್ವಾಥ--೨ (ಶಾ.ಸಂ.)

ಅಳಲೆಕಾಯಿ ಸಿಪ್ಪೆ, ತಾರೆಕಾಯಿ ಸಿಪ್ಪೆ, ನೆಲ್ಲೀಚೆಟ್ಟು, ಅಮೃತಬಳ್ಳಿ, ಕಟುಕರೋಹಿಣಿ, ಬೇವಿನಚಕ್ಕೆ ಒಳನಾರು, ಚಿರಾಯಿತ ಮತ್ತು ಆಡುಸೋಗೆ ಸೊಪ್ಪು ಇವನ್ನು ಕ್ವಾಥ ಮಾಡಿ ಒಂದು ಔನ್ಸ್‌ಗೆ ಒಂದು ಟೀ ಚಮಚದಷ್ಟು ಜೇನುತುಪ್ಪವನ್ನು ಬೆರಸಿ ಕುಡಿಸುವುದರಿಂದ ಕಾಮಿಲಾ ಮತ್ತು ಪಾಂಡು ರೋಗಗಳು ಶಮನವಾಗುವುವು.

## ೫. ದಶಮೂಲಕ್ವಾಥ (ಶಾ.ಸಂ.)

ಬಿಲ್ವ, ತಗ್ಗಿ, ಹೆಮ್ಮರ, ಶಿವನಿ, ಪಾದರಿ ಬೇರುಗಳ ಚಕ್ಕೆಗಳು, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಹೆಗ್ಗುಳ್ಳ, ನೆಲಗುಳ್ಳ ಮತ್ತು ನೆಗ್ಗಿಲು ಇವುಗಳ ಸಮೂಲ ಚೂರ್ಣಮಾಡಿ ಹದಿನಾರು ಪಟ್ಟು ನೀರಿನಲ್ಲಿ ಹಾಕಿ ಅಷ್ಟಾವಶೇಷ ಕ್ವಾಥ ಮಾಡಿ ಅವಶ್ಯವಿರುವಾಗ ಉಪಯೋಗಿಸಬೇಕು.

ಪ್ರಮಾಣ—ಒಂದರಿಂದ ಎರಡು ಔನ್ಸ್; ಹಿಪ್ಪಲಿ ಚೂರ್ಣದೊಡನೆ ಕುಡಿಸಬೇಕು

ಉಪಯೋಗ—ಸನ್ನಿಪಾತಜ್ವರ, ಸೂತಿಕಾದೋಷ, ಹೃದಯ, ಕಂಠ, ಪಾರ್ಶ್ವ, ಶಿರಃಶೂಲೆಗಳನ್ನೂ ತಂದ್ರಾವಸ್ಥೆಯನ್ನೂ ಹೋಗಲಾಡಿಸುವುದು. ಹಿಂಗು ಮತ್ತು ಪುಷ್ಕರಮೂಲಗಳ ಚೂರ್ಣವನ್ನು ಸೇರಿಸಿ ಕುಡಿಸುವುದರಿಂದ ಗೃಧ್ರಸೀ ವಾತಶೂಲೆಯನ್ನು ನಿವಾರಿಸುವುದು. ಇದೇ ಕ್ವಾಥಕ್ಕೆ ಯವಕ್ಷಾರ ಮತ್ತು ಸೈಂಧವಲವಣಗಳನ್ನು ಸೇರಿಸಿ ಕುಡಿಸಿದರೆ ಹೃಚ್ಛೂಲ, ಗುಲ್ಮಶೂಲ, ವಾತಶ್ಲೇಷ್ಮಕಾಸ ಮತ್ತು ಶ್ವಾಸಗಳು ನಾಶವಾಗುವುವು.

## ೬. ದ್ರಾಕ್ಷಾದಿಕ್ವಾಥ (ಶಾ.ಸಂ.)

ದ್ರಾಕ್ಷೆ, ಅಳಲೆಕಾಯಿ ಸಿಪ್ಪೆ, ಮುಸ್ತಾ, ಕಟುಕರೋಹಿಣೀ, ಕಕ್ಕೆ ಮಯಣ ಮತ್ತು ಪರ್ಪಟ ಇವನ್ನು ಕುಟ್ಟಿ ಎಂಟು ಪಾಲು ನೀರಿಂದ ಚತುರ್ಥಾಂಶ ಕ್ವಾಥ ಮಾಡಿ ಕುಡಿಸಬೇಕು.

ಪ್ರಮಾಣ—ಒಂದರಿಂದ ಎರಡು ಔನ್ಸ್.

ಉಪಯೋಗ—ಪಿತ್ತಜ್ವರ, ತೃಷ್ಣಾ, ಮೂರ್ಛಾ, ದಾಹ, ರಕ್ತಪಿತ್ತ ಗಳನ್ನು ಹೋಗಲಾಡಿಸುವುದು. ಭೇದನವಾದುದು.

**೭. ಪಟೋಲಾದಿಕ್ವಾಥ** (ಅ.ಹೃ.ಸೂ.)

ಕಹಿಪಡವಲ, ಕಟುಕರೋಹಿಣೀ, ರಕ್ತಚಂದನ, ಅತಿಮಧುರ, ಅಮೃತ ಬಳ್ಳಿ ಮತ್ತು ಅಗಳುಶುಂಠಿ ಇವನ್ನು ಮೇಲೆ ಹೇಳಿದಂತೆ ಕ್ವಾಥ ಮಾಡಿ ಉಪಯೋಗಿಸಬೇಕು.

ಪ್ರಮಾಣ—ಒಂದರಿಂದ ಎರಡು ಔನ್ಸ್.

ಉಪಯೋಗ—ಕಫ ಮತ್ತು ಪಿತ್ತದೋಷಗಳಿಂದಾದ ಕುಷ್ಠ, ಜ್ವರ, ವಿಷದೋಷ, ವಾಂತಿ, ಅರೋಚಕ ಮತ್ತು ಕಾಮಾಲೆಗಳನ್ನು ಹೋಗಲಾಡಿಸುವುದು.

**೮. ಪಂಚಕೋಲಕ್ವಾಥ** (ಧನ್ವಂತರಿ ನಿಘಂಟು)

ಹಿಪ್ಪಲಿ, ಮೋಡಿ, ಚವ್ಯ, ಚಿತ್ರಮೂಲ, ಶುಂಠಿ ಇವುಗಳ ಚೂರ್ಣ ವನ್ನು ಕ್ವಾಥಮಾಡಬೇಕು.

ಪ್ರಮಾಣ—ಅರ್ಧದಿಂದ ಒಂದು ಔನ್ಸ್.

ಉಪಯೋಗ—ದೀಪನ ಮತ್ತು ಪಾಚನವಾದುದು. ವಾತಕಫದೋಷ ದಿಂದಾದ ಸ್ವರಭೇದ, ಶೂಲ ಮತ್ತು ಗುಲ್ಮಗಳು ನಾಶವಾಗುವುವು.

**೯. ಭಾರ್ಙ್ಯಾದಿಕ್ವಾಥ** (ಸಹಸಯೋಗ)

ಗಂಟುಪರಂಗಿ, ಕೊನ್ನಾರಿಗೆಡ್ಡೆ, ಪರ್ಪಾಷ್ಟಕ, ತುರಚನ ಬೇರು, ಶುಂಠಿ, ನೆಲಬೇವು, ಚಂಗಲ್ಕೋಷ್ಟ, ಹಿಪ್ಪಲಿ, ಆಡುಸೋಗೆಬೇರು, ಅಮೃತ ಬಳ್ಳಿ ಇವುಗಳನ್ನೆಲ್ಲಾ ಸಮತೂಕ ಹಾಕಿ ಜಜ್ಜಿ ಎಂಟರಷ್ಟು ನೀರನ್ನು ಹಾಕಿ ಅಷ್ಟಾವಶೇಷ ಕಾಯಿಸಿ ಆರಿದನಂತರ ಶೋಧಿಸಿ ಉಪಯೋಗಿಸಬೇಕು.

ಪ್ರಮಾಣ—೧ರಿಂದ ೨ ಔನ್ಸ್; ಊಟಕ್ಕೆ ಮೊದಲು ದಿನಕ್ಕೆ ಎರಡು ಸಲ.

ಉಪಯೋಗ—ದೀಪನ, ಪಾಚನ; ಕಾಸ ಮತ್ತು ಶ್ವಾಸಗಳನ್ನೂ, ವಾತಕಫಜ್ವರ, ಜೀರ್ಣಜ್ವರ, ಸಂತತ ಮುಂತಾದ ಎಲ್ಲಾ ವಿಷಮಜ್ವರ ಗಳನ್ನೂ ಹೋಗಲಾಡಿಸುವುದು.

## ೧೦. ಪುನರ್ನವಾಷ್ಟಕಕ್ವಾಥ (ಶಾ.ಸಂ.)

ಬಿಳಿಕೊಮ್ಮೆ ಬೇರು, ಮರದರಿಸಿನ, ಅರಿಸಿನ, ಶುಂಠಿ, ಅಳಲೆಕಾಯಿ ಸಿಪ್ಪೆ, ಅಮೃತಬಳ್ಳಿ, ಚಿತ್ರಮೂಲ, ಗಂಟುಪರಂಗಿ, ದೇವದಾರು ಇವನ್ನು ಸಮವಾಗಿ ತೆಗೆದುಕೊಂಡು ಅಷ್ಟಭಾಗ ನೀರಲ್ಲಿ ಕಾಯಿಸಿ ಚತುರ್ಥಾವಶೇಷ ಮಾಡಿ ಅರ್ಧದಿಂದ ಒಂದು ಔನ್ಸ್ ಕಷಾಯವನ್ನು ಕುಡಿಸುವುದರಿಂದ ಕೈ, ಕಾಲು ಮತ್ತು ಮುಖಗಳಲ್ಲಿರುವ ಶೋಥವು ನಾಶವಾಗುವುದು.

## ೧೧. ಪಂಚವಲ್ಕಲಕ್ವಾಥ (ಧನ್ವಂತರಿ ನಿಘಂಟು)

ಆಲ, ಅತ್ತಿ, ಅರಳಿ, ಗೋಣಿ ಮತ್ತು ಬಸರಿ ಮರಗಳ ಚಕ್ಕೆಗಳನ್ನು ಸಣ್ಣಗೆ ಕತ್ತರಿಸಿ ಸಮಭಾಗ ಸೇರಿಸಿ ಹದಿನಾರು ಭಾಗ ನೀರನ್ನು ಹಾಕಿ ಅಷ್ಟಾವಶೇಷ ಕ್ವಾಥಮಾಡಿ ಶೋಧಿಸಬೇಕು.

ಪ್ರಮಾಣ—ಒಂದರಿಂದ ಎರಡು ಔನ್ಸ್.

ಉಪಯೋಗ—ತೃಷ್ಣಾ, ದಾಹ, ಶ್ವೇತ ಮತ್ತು ರಕ್ತಪ್ರದರಗಳು ನಿಲ್ಲುವುವು. ವ್ರಣಕ್ಷಾಳನಕ್ಕೂ ವರ್ಣ ಬರುವುದಕ್ಕೂ ಉಪಯೋಗವಾಗಿದೆ.

## ೧೨. ಲಘುಮಂಜಿಷ್ಠಾದಿಕ್ವಾಥ (ಶಾ.ಸಂ)

ಮಂಜಿಷ್ಠೆ, ಅಳಲೆಕಾಯಿ, ತಾರೆಕಾಯಿ, ನೆಲ್ಲೀಚೆಟ್ಟು, ಕಟುಕರೋಹಿಣಿ, ಬಜೆ, ಮರದರಿಸಿನ, ಅಮೃತಬಳ್ಳಿ ಮತ್ತು ಬೇವಿನ ಚಕ್ಕೆ ಇವೆಲ್ಲವನ್ನೂ ಸಮಭಾಗ ತೆಗೆದುಕೊಂಡು ಕುಟ್ಟಿ ಎಂಟು ಪಾಲು ನೀರಿನಲ್ಲಿ ಕಾಯಿಸಿ ಚತುರ್ಥಾಂಶ ಕಷಾಯ ಮಾಡಬೇಕು.

ಪ್ರಮಾಣ—೧ರಿಂದ ೨ ಔನ್ಸ್. ಊಟಕ್ಕೆ ಒಂದು ಘಂಟೆ ಮೊದಲು ಸೇವಿಸಬೇಕು; ದಿನಕ್ಕೆ ಎರಡು ಸಲ.

ಉಪಯೋಗ—ವಾತರಕ್ತದಲ್ಲಿ ಇದನ್ನು ಮಹಾಯೋಗರಾಜಗುಗ್ಗುಳುವಿನೊಂದಿಗೆ ಕೊಡಬೇಕು. ಕುಷ್ಠ ಮತ್ತು ಇತರ ರಕ್ತಜರೋಗಗಳಲ್ಲಿ ಪಂಚತಿಕ್ತ ಗುಗ್ಗುಳು ಘೃತದೊಡನೆಯೂ ಫಿರಂಗ ರೋಗದಲ್ಲಿ ಮಧುಸ್ನುಹಿ ರಸಾಯನ ಅಥವಾ ಭಲ್ಲಾತಕ ಲೇಹ್ಯದೊಡನೆ ಕೊಡಬೇಕು.

### ೧೩. ಪಂಚತಿಕ್ತಕ್ವಾಥ (ಅ.ಹೃ.ಚಿ.)

ಆಡುಸೋಗೆ, ಅಮೃತಬಳ್ಳಿ, ಬೇವಿನ ಚೆಕ್ಕೆ, ಕಹಿಪಡವಲ ಮತ್ತು ನೆಲಗುಳ್ಳ ಇವುಗಳ ಸಮಭಾಗವನ್ನು ಮೇಲಿನಂತೆಯೇ ಕಾಯಿಸಿ ಕೊಡಬೇಕು.

### ೧೪. ಮಹಾರಾಸ್ನಾದಿಕ್ವಾಥ

ತುರಚನ ಬೇರು, ಕಳ್ಳಂಗಡಲೆ, ಹರಳುಬೇರು, ದೇವದಾರು, ಕರ್ಪೂರ ಶುಂಠಿ, ಬಜೆ, ಆಡುಸೋಗೆ, ಶುಂಠಿ, ಅಳಲೆಕಾಯಿ, ಚವ್ಯ, ಮುಸ್ತಾ, ಪುನರ್ನವಾ, ಗುಡೂಚೀ, ಪರಂಗಿಚೆಕ್ಕೆ, ಸಬ್ಬಸಿಗೆಬೀಜ, ನೆಗ್ಗಿಲು, ಅಶ್ವಗಂಧಿ ಬೇರು, ಅತಿಬಜೆ, ಕಕ್ಕೆಮಯಣ, ಶತಾವರೀ, ಹಿಪ್ಪಲಿ, ಗೊರಟೆ, ಧನಿಯ, ಹೆಗ್ಗುಳ್ಳ ಮತ್ತು ನೆಲಗುಳ್ಳ ಇವನ್ನೆಲ್ಲಾ ಸಮಭಾಗ ಹಾಕಿ ಇವೆಲ್ಲಕ್ಕೂ ಎರಡರಷ್ಟು ರಾಸ್ನೆಯನ್ನು ಸೇರಿಸಿ ವಿಧಿವತ್ತಾಗಿ ಕ್ವಾಥವನ್ನು ಮಾಡಬೇಕು.

ಪ್ರಮಾಣ—ಅರ್ಧದಿಂದ ಒಂದು ಔನ್ಸ್.

ಉಪಯೋಗ—ಈ ಕ್ವಾಥದೊಂದಿಗೆ ರೋಗಾನುಸಾರವಾಗಿ ಶುಂಠಿ ಚೂರ್ಣ, ಹಿಪ್ಪಲಿ ಚೂರ್ಣ, ಯೋಗರಾಜ ಗುಗ್ಗುಳು, ಅಜಮೋದಾದಿ ಚೂರ್ಣ, ಹರಳೆಣ್ಣೆ ಇವುಗಳಲ್ಲೊಂದನ್ನು ಸೇರಿಸಿ ಕುಡಿಸುವುದರಿಂದ ಎಲ್ಲಾ ವಿಧವಾದ ವ್ಯಾಧಿಗಳೂ, ಅಂತ್ರವೃದ್ಧಿ, ಆಧ್ಮಾನ, ಲಿಂಗರೋಗ ಮತ್ತು ಯೋನಿರೋಗಗಳು ನಾಶವಾಗುವುವು ಗರ್ಭವನ್ನು ನಿಲ್ಲಿಸುತ್ತದೆ.

### ೧೫. ರಾಸ್ನಾದಿಕ್ವಾಥ (ಸ.ಯೋ.)

ರಾಸ್ನೆ, ಹರಳುಬೇರು, ಕಳ್ಳಂಗಡಲೆ, ಗೊರಟೆ, ಶತಾವರೀ, ತುರಚನ ಗಿಡ, ಆಡುಸೋಗೆ, ಅಮೃತಬಳ್ಳಿ, ದೇವದಾರು, ಅತಿಬಜೆ, ಕೊನ್ನಾರಿಗೆಡ್ಡೆ, ಕೊಳವಳಿಕೆ, ಕರ್ಪೂರಶುಂಠಿ ಮತ್ತು ದೇಶಾವರಶುಂಠಿ ಇವನ್ನು ಸಮಭಾಗ ಕುಟ್ಟಿ ಕ್ವಾಥ ಮಾಡಬೇಕು.

ಪ್ರಮಾಣ—೧ರಿಂದ ೨ ಔನ್ಸ್. ತುಪ್ಪ ಮತ್ತು ಎಣ್ಣೆಗಳನ್ನು ಸೇರಿಸಿ ಊಟಕ್ಕೆ ಒಂದು ಘಂಟೆ ಮುಂಚಿತವಾಗಿ, ದಿನಕ್ಕೆರಡು ಸಲ.

ಉಪಯೋಗ—ಸಂಧಿವಾತ, ಆಮವಾತ ಮತ್ತು ವಾತರಕ್ತಗಳನ್ನು ಗುಣಮಾಡುವುದು.

**೧೬. ವ್ಯಾಘ್ರ್ಯಾದಿಕ್ವಾಥ** (ಅ.ಹೃ.ಚಿ.)

ಹೆಗ್ಗುಳ್ಳ, ಒಣಶುಂಠಿ ಮತ್ತು ಅಮೃತಬಳ್ಳಿ ಇವನ್ನು ಸಮತೂಕ ಹಾಕಿ ಕ್ವಾಥಮಾಡಿ ಉಪಯೋಗಿಸುವಾಗ ಒಂದರಿಂದ ಎರಡು ಔನ್ಸ್ ಕ್ವಾಥಕ್ಕೆ ಒಂದು ಮಾಷ ಹಿಪ್ಪಲಿ ಚೂರ್ಣ ಸೇರಿಸಿಕೊಡುವುದರಿಂದ ನೆಗಡಿ, ಕೆಮ್ಮು ಮತ್ತು ವಾತಶ್ಲೇಷ್ಮಜ್ವರಗಳು ನಿಲ್ಲುವುವು. ವಾತಶ್ಲೇಷ್ಮಚಿಹ್ನೆಗಳು ಹೆಚ್ಚಾಗಿರುವ ಜ್ವರಗಳಲ್ಲಿ (ಇನ್‌ಫ್ಲೂಯಿಂಜಾದಲ್ಲೂ) ಉತ್ತಮ ಗುಣಕಾರಿಯಾಗಿದೆ.

## ಅರ್ಕಗಳು

**೧೭. ಶಂಖದ್ರಾವಕ** (ವೈದ್ಯಸಾರ ಸಂಗ್ರಹ)

ಸಮುದ್ರಲವಣ, ಸೈಂಧವಲವಣ, ಸೌವರ್ಚಲಲವಣ, ಚೌಳುಪ್ಪು, ಬಿಡಲವಣ, ಮೈಲುತುತ್ಥ, ಕರ್ಪರೀತುತ್ಥ ಇವು ಪ್ರತಿಯೊಂದೂ ೫ ಪಲ, ಪಟಿಕ ೨ ಪಲ, ನವಾಸಾಗರ ೧ ಪಲ, ಕಾಸೀಸ, ಬಿಳಿಗಾರ, ಸರ್ಜಕ್ಷಾರ ಮತ್ತು ಯವಕ್ಷಾರ ಇವು ಪ್ರತ್ಯೇಕ ೮ ಪಲ, ಪೆಟ್ಲುಪ್ಪು ೨೦ ಪಲ, ಇವಿಷ್ಟನ್ನು ಮರ್ದಿಸಿ ಡಮರು ಯಂತ್ರದಲ್ಲಿ ಅಥವಾ ತಿರ್ಯಕ್ಪಾತನ ಯಂತ್ರದಲ್ಲಿ ಹಾಕಿ ಕಾಯಿಸಿ ಭಟ್ಟಿ ಇಳಿಸುವುದರಿಂದ ಬರುವ ದ್ರಾವಕಕ್ಕೆ ಶಂಖದ್ರಾವಕವೆಂದು ಹೆಸರು

ಪ್ರಮಾಣ—೨ರಿಂದ ೮ ತೊಟ್ಟು ನೀರಿನಲ್ಲಾಗಲೀ, ಮಜ್ಜಿಗೆಯಲ್ಲಾಗಲೀ ಕುಡಿಸಬೇಕು; ದಿನಕ್ಕೆರಡು ಸಲ.

ಉಪಯೋಗ— ಘೋರವಾದ ಅಗ್ನಿಮಾಂದ್ಯ, ವಿಷೂಚಿಕಾ, ಗುಲ್ಮ, ಉದರಶೂಲೆ, ಪ್ಲೀಹಾಭಿವೃದ್ಧಿ ಮುಂತಾದುವು ಗುಣವಾಗುವುವು.

**೧೮. ಅಜಮೋದಾರ್ಕ**

ಚೊಕ್ಕಟ ಮಾಡಿದ ಖುರಾಸಾನಿವೋಮ ೫ ಸೇರು, ತ್ರಿಕಟು, ತ್ರಿಫಲಾ ಲವಂಗ, ರಾಸ್ನೆ, ಮೋಡಿ, ಚಿತ್ರಮೂಲ ಇವು ಪ್ರತ್ಯೇಕ ೪ ತೊಲ, ನೀರು ೨೫೬ ಪಲ. ಚೂರ್ಣದ್ರವ್ಯಗಳನ್ನು ಸ್ಥೂಲ ಚೂರ್ಣಮಾಡಿ ಕಲಾಯಿ ಪಾತ್ರೆಯಲ್ಲಿ ನೀರನ್ನು ಬೆರಸಿ ೨೪ ಘಂಟೆ ಕಾಲ ನೆನೆಸಿ ಮುಚ್ಚಿಡಬೇಕು. ಅನಂತರ ಇವನ್ನೆಲ್ಲಾ ಎರಡು ದ್ರೋಣದ ಅರ್ಕಯಂತ್ರದಲ್ಲಿ ಹಾಕಿ ಉದ್ದಿನ

ಹಿಟ್ಟಿನ ಬಟ್ಟೆಯಿಂದ ಸಂಧಿಬಂಧ ಮಾಡಿ ಅರ್ಕವನ್ನು ತೆಗೆಯಬೇಕು. ಒಂದು ದ್ರೋಣ ನೀರಿಗೆ ಸುಮಾರು ೧೨ ಶೀಸೆ ಅರ್ಕ ಬರುವುದು. ಒಳಗಿಂದ ಕಪ್ಪು ಹೊಗೆ ಬರುವ ಸಮಯವನ್ನರಿತು ಉರಿಯನ್ನು ನಿಲ್ಲಿಸಿ ತೆಗೆದುಬಿಡಬೇಕು.

ಪ್ರಮಾಣ—·|·ರಿಂದ ·||· ಔನ್ಸ್; ಮಕ್ಕಳಿಗೆ ಅರ್ಧ ಪ್ರಮಾಣ.

ಉಪಯೋಗ—ದೀಪನ, ಪಾಚನ, ಗ್ರಾಹಿ, ಕಫಹರವಾದುದು. ಅಜೀರ್ಣ, ಹೊಟ್ಟೆನೋವು, ಕೆಮ್ಮು, ಜ್ವರ ಮತ್ತು ಅತೀಸಾರಗಳನ್ನು ಹೋಗಲಾಡಿಸುತ್ತದೆ. ಕಫದೋಷವುಳ್ಳ ಮಕ್ಕಳಿಗೆ ಹಿತವಾದುದು. ವಿಷೂಚಿಯಲ್ಲಿ ·||·ದಿಂದ ಒಂದು ಔನ್ಸ್ ಪ್ರಮಾಣದಲ್ಲಿ ದಿನಕ್ಕೆ ಮೂರು ಅಥವಾ ನಾಲ್ಕು ಸಲ ಕೊಡಬಹುದು.

### ೧೯. ಕರ್ಪೂರಾದ್ಯರ್ಕ

ಕರ್ಪೂರ ೧೨ ತೊಲ, ಖುರಾಸಾನಿವೋಮ ೫ ಸೇರು, ನೀರು ಒಂದೂ ಕಾಲು ದ್ರೋಣ (೩೨೦ ಪಲ) ಅಜವೋದವನ್ನು ಕುಟ್ಟಿ ನೀರಿನಲ್ಲಿ ೨೪ ಘಂಟೆ ನೆನೆಸಿ ಅನಂತರ ಇವೆರಡನ್ನೂ ಅರ್ಕಯಂತ್ರದಲ್ಲಿ ಸುರಿಯಬೇಕು. ಕರ್ಪೂರವನ್ನು ಪುಡಿಮಾಡಿ ಯಂತ್ರದಲ್ಲಿ ಸೇರಿಸಬೇಕು. ಮೇಲೆ ಹೇಳಿದ ರೀತಿಯಲ್ಲಿ ಅರ್ಕವನ್ನು ತೆಗೆಯಬೇಕು. ಅರ್ಕವನ್ನು ಚೆನ್ನಾಗಿ ಕಲಕಿ ಕೆಲವು ದಿನಗಳವರೆಗೂ ಇಟ್ಟಿದ್ದು ಶೋಧಿಸಿ ಉಪಯೋಗಿಸಬೇಕು.

ಪ್ರಮಾಣ—·||· ದಿಂದ ೧ ಔನ್ಸ್; ಅವಶ್ಯವಿದ್ದರೆ ನೀರಿನೊಂದಿಗೆ ಕೊಡಬಹುದು.

ಉಪಯೋಗ—ದೀಪನ, ಪಾಚನ ಮತ್ತು ಗ್ರಾಹಿ. ವಿಷೂಚಿಕಾ, ಅತೀಸಾರ ಮತ್ತು ಗಲಶೋಥಹರ.

## ಆಸವ ಅಥವಾ ಅರಿಷ್ಟಗಳು

### ೨೦. ಅಭಯಾರಿಷ್ಟ (ಚ.ಚಿ.ಅ. ೧೪)

ಅಳಲೆಕಾಯಿ ಸಿಪ್ಪೆ ೨೪ ತೊಲ, ನೆಲ್ಲೀಕಾಯಿಸಿಪ್ಪೆ ೪೮ ತೊಲ, ಬೇಲದ ಹಣ್ಣಿನ ತಿರುಳು ೩೦ ತೊಲ, ಇಂದ್ರವಾರುಣೀ ಬೇರು ೧೫ ತೊಲ; ವಾಯು

ವಿಳಂಗ, ಹಿಪ್ಪಲಿ, ಲೋಧ್ರ, ಮೆಣಸು, ಏಲಾವಾಲುಕ ಇವು ಪ್ರತಿಯೊಂದೂ ೬ ತೊಲ. ಇವನ್ನು ಸ್ಥೂಲಚೂರ್ಣ ಮಾಡಿ ೩೨ ಸೇರು (ಅಳತೆ) ಎಂದರೆ ತೂಕ ೧೦೨೪ ಪಲ ನೀರಿನಲ್ಲಿ ಹಾಕಿ ಚತುರ್ಥಾಂಶಕ್ವಾಥ ಮಾಡಿ ಆರಿಸಿ ಶೋಧಿಸಿದನಂತರ ೨೫ ಸೇರು ಬೆಲ್ಲವನ್ನೂ ೬ ತೊಲ ಧಾತಕೀಕುಸುಮವನ್ನೂ ಸೇರಿಸಿ ಸಂಧಾನ ಮಾಡಬೇಕು. ವಾಯುವಿಳಂಗ, ಹಿಪ್ಪಲಿ ಮೊದಲಾದು ವನ್ನೇ ಸಾಮಾನ್ಯ ಸೂಕ್ಷ್ಮಚೂರ್ಣ ಮಾಡಿ ಪ್ರತಿವಾಪದ್ರವ್ಯಗಳನ್ನಾಗಿ ಹಾಕು ವುದರಿಂದ ಹೆಚ್ಚು ಗುಣ ಬರುತ್ತದೆ.

ಪ್ರಮಾಣ—·||·ದಿಂದ ೧ ಔನ್ಸ್.

ಉಪಯೋಗ—ಅರ್ಶ, ಗ್ರಹಣೀದೋಷ, ಪಾಂಡು, ಹೃದ್ರೋಗ, ಪ್ಲೀಹವೃದ್ಧಿ, ಗುಲ್ಮ, ಉದರ, ಶೋಥ, ಮಲಬಂಧ ಮುಂತಾದುವು ದೂರವಾಗು ವುವು. ಹಸಿವು ಚೆನ್ನಾಗಿ ಆಗುವುದು.

## ೨೧. ಅಮೃತಾರಿಷ್ಟ (ಭೈ.ರ.)

ಅಮೃತಬಳ್ಳಿ ೧೨·||· ಸೇರು, ದಶಮೂಲಗಳು ಒಟ್ಟು ೧೨·||· ಸೇರು. ಇವನ್ನು ಸಣ್ಣಗೆಮಾಡಿ ಜಜ್ಜಿ ಅಳತೆ ೩೨ ಸೇರು ನೀರಿನಲ್ಲಿ ಹಾಕಿ ಚತುರ್ಥಾಂಶ ಕಷಾಯಮಾಡಿ ಆರಿಸಿ ಶೋಧಿಸಬೇಕು. ಇದಕ್ಕೆ ಬೆಲ್ಲ ೪೦ ಸೇರು; ಕಲ್ಕ ದ್ರವ್ಯ—ಬಿಳಿ ಜೀರಿಗೆ ೨ ಸೇರು, ಪರ್ಪಾಷ್ಟಕ ೬ ತೊಲ, ಸಪ್ತಪರ್ಣಿಚೆಕ್ಕೆ, ಶುಂಠಿ, ಹಿಪ್ಪಲಿ, ಮೆಣಸು, ಮುಸ್ತಾ, ನಾಗಕೇಸರ, ಕಟುರೋಹಿಣೀ, ಅತಿ ಬಜೆ ಮತ್ತು ಕುಟಜಬೀಜ ಇವು ಪ್ರತ್ಯೇಕ ಮೂರು ತೊಲ. ಇವನ್ನೆಲ್ಲಾ ಚೂರ್ಣಿಸಿ ಸೇರಿಸಿ ಸಂಧಾನ ಮಾಡಬೇಕು. ಸುಮಾರು ಒಂದು ತಿಂಗಳು ಬಿಟ್ಟಿದ್ದು ತೆಗೆದು ಶೋಧಿಸಬೇಕು.

ಪ್ರಮಾಣ—·||· ದಿಂದ ೧ ಔನ್ಸ್.

ಉಪಯೋಗ—ತ್ರಿದೋಷಘ್ನ; ಎಲ್ಲಾ ಜ್ವರಗಳಲ್ಲೂ ಉಪಯೋಗ ವಾದುದು. ಸನ್ನಿಪಾತಜ್ವರದಲ್ಲಿ ಹೃದಯದೌರ್ಬಲ್ಯವಿದ್ದರೆ ಕಾಲು ಗ್ರೈನ್ ಕಸ್ತೂರಿಯನ್ನು ಸೇರಿಸಿಕೊಡಬಹುದು.

## ೨೨. ಅರವಿಂದಾಸವ (ಆ.ಸಂ.)

ತಾವರೆಗೆಡ್ಡೆ. ಲಾವಂಚ, ಕಿರಿಶಿವನಿ ಹಣ್ಣು, ನೈದಿಲೆಗೆಡ್ಡೆ, ಮಂಜಿಷ್ಠೆ, ಸಣ್ಣ ಏಲಕ್ಕಿ, ಕಳ್ಳಂಗಡಲೆ, ಜಟಾಮಾಂಸಿ, ಮುಸ್ತಾ, ಸೊಗದೆಬೇರು, ಅಳಲೆಕಾಯಿ ಸಿಪ್ಪೆ, ತಾರೆಕಾಯಿ ಸಿಪ್ಪೆ, ನೆಲ್ಲೀಚೆಟ್ಟು, ಬಜೆ, ಕಚೋರ, ಕರೀತಿಗಡೆ, ನೀಲಿ ಎಲೆ, ಕಹಿಪಡವಲ, ಪರ್ಪಾಟಕ, ಮತ್ತಿಚೆಕ್ಕೆ, ಹಿಪ್ಪೆ ಹೂವು, ಅತಿಮಧುರ, ಮುರಾ ಇವನ್ನು ಐದೈದು ತೊಲಗಳಂತೆ ತೆಗೆದುಕೊಂಡು ದ್ರಾಕ್ಷೆ ೧೦೦ ತೊಲ ಹಾಕಿ ಕುಟ್ಟಿ ಅಳತೆ ೨೫ ಸೇರು ನೀರಿನಲ್ಲಿ ಪಾದಶೇಷ ಕಾಷ್ಠ್ವಮಾಡಿ ಆರಿಸಿ ಶೋಧಿಸಿ ೧೩·||· ಸೇರು ಸಕ್ಕರೆ, ಜೇನುತುಪ್ಪ ೬ |· ಧಾತಕೀಕುಸುಮ ೩·||· ಸೇರು ಇವೆಲ್ಲವನ್ನೂ ಸೇರಿಸಿ ಸಂಧಾನ ಮಾಡಬೇಕು.

ಪ್ರಮಾಣ—ತಿಂಗಳು ಮಗುವಿಗೆ ಒಂದು ತೊಟ್ಟಿನಂತೆ ಒಂದು ವರ್ಷದ ವರೆಗೆ ವಯಸ್ಸಿನಷ್ಟು ತೊಟ್ಟುಗಳು. ವರ್ಷದ ಮಗುವಿಗೆ ಒಂದು ಟೀ ಚಮಚ ದಷ್ಟು ಕೊಡಬಹುದು.

ಉಪಯೋಗ—ಮಕ್ಕಳ ಅತೀಸಾರ, ತಾಲುಕಂಟಕ, ಹಾಲನ್ನು ವಾಂತಿ ಮಾಡುವುದು, ಹಾಲು ಜೀರ್ಣವಾಗದಿರುವುದು ಮುಂತಾದ ಬಾಲರೋಗಗಳಲ್ಲಿ ಬಹಳ ಗುಣಕಾರಿ.

## ೨೩. ಅರ್ಜುನಾರಿಷ್ಟ (ಭೈ.ರ.)

ಬಿಳಿಮತ್ತಿಚೆಕ್ಕೆ ೧೦೦ ಪಲ, ದ್ವೀಪದ್ರಾಕ್ಷೆ ೫೦ ಪಲ ಮತ್ತು ಹಿಪ್ಪೆಹೂವು ೨೦ ಪಲ ಇವನ್ನು ನಾಲ್ಕು ದ್ರೋಣ ನೀರಿನಲ್ಲಿ ಹಾಕಿ ಚತುರ್ಥಾಂಶ ಕಷಾಯ ಮಾಡಿ ಶೋಧಿಸಿ ಅದಕ್ಕೆ ೧೦೦ ಪಲ ಹಳೆ ಬೆಲ್ಲ ಮತ್ತು ೨೦ ಪಲ ಧಾತಕೀ ಕುಸುಮಗಳನ್ನು ಹಾಕಿ ಸಂಧಾನ ಮಾಡಬೇಕು.

ಪ್ರಮಾಣ—·|·ರಿಂದ ೧ ಔನ್ಸ್. ಗ್ರಾಹಿ, ಹೃದ್ಯ, ಬಲ್ಯ.

ಉಪಯೋಗ—ಹೃದಯ ಮತ್ತು ಪುಪ್ಪುಸ ರೋಗಗಳಲ್ಲಿ ಉಪಯೋಗ ವಾಗಿದೆ. ರೋಗ ಹಳೆಯದಾಗಿದ್ದರೆ ಬಹುದಿನಗಳ ವರೆಗೂ ಕೊಡುತ್ತಿರಬೇಕು.

## ೨೪. ಅಶೋಕಾರಿಷ್ಟ (ಭೈ.ರ)

ಅಶೋಕಚೆಕ್ಕೆ ೧೦೦ ಪಲ, ನಾಲ್ಕು ದ್ರೋಣ ನೀರು ಇವನ್ನು ಕಾಯಿಸಿ

ಪಾದಾವಶೇಷ ಕ್ವಾಥಮಾಡಿ ಆರಿಸಿ ಶೋಧಿಸಿ ೨೦೦ ಪಲ ಹಳೆ ಬೆಲ್ಲವನ್ನೂ ೧೬ ಪಲ ಧಾತಕೀಕುಸುಮವನ್ನೂ ಸೇರಿಸಬೇಕು. ಪ್ರಕ್ಷೇಪದ್ರವ್ಯಗಳು—ಜೀರಿಗೆ, ಮುಸ್ತಾ, ಶುಂಠಿ, ಮರದರಿಸಿನ, ನೈದಿಲೆಗೆಡ್ಡೆ, ತ್ರಿಫಲಾ ಪ್ರತ್ಯೇಕ ಮಾವಿನ ಬೀಜ, ದಪ್ಪ ಜೀರಿಗೆ, ಆಡುಸೋಗೆ ಬೇರು ಮತ್ತು ಶ್ರೀಗಂಧ ಒಂದೊಂದು ಪಲದಂತೆ ಹಾಕಿ ಚೂರ್ಣಿಸಿ ಬೆರಸಬೇಕು. ಅರಿಷ್ಟವಾದ ಮೇಲೆ ಶೋಧಿಸಿಡಬೇಕು.

ಪ್ರಮಾಣ—·|· ರಿಂದ ೧ ಔನ್ಸ್ ನೀರಿನೊಂದಿಗೆ.

ಉಪಯೋಗ—ಗ್ರಾಹಿ ಮತ್ತು ರಜೋದೋಷಹರ. ಋತುಶೂಲ, ಋತುಬಂಧಗಳನ್ನು ಹೋಗಲಾಡಿಸುತ್ತದೆ. ಶ್ವೇತ ಮತ್ತು ರಕ್ತಪ್ರದರಗಳನ್ನು ನಿಲ್ಲಿಸುತ್ತದೆ.

### ೨೫ ಅಶ್ವಗಂಧಾರಿಷ್ಟ (ಭೈ ರ.)

ಅಶ್ವಗಂಧ ೬·|· ಸೇರು, ನೆಲತಾಟಿಗೆಡ್ಡೆ ೬೦ ತೊಲ, ಮಂಜಿಷ್ಠೆ, ಹರೀತಕೀ, ಅರಿಸಿನ, ಮರದರಿಸಿನ, ಅತಿಮಧುರ, ರಾಸ್ನೆ, ನೆಲಗುಂಬಳ, ಬಿಳಿಮತ್ತಿ ಚಕ್ಕೆ, ಮುಸ್ತಾ, ತ್ರಿವೃತ್ ಇವು ಪ್ರತ್ಯೇಕ ೩೦ ತೊಲ; ಶ್ವೇತಶಾರಿಬಾ, ಕೃಷ್ಣ ಶಾರಿಬಾ, ಶ್ವೇತಚಂದನ, ರಕ್ತಚಂದನ, ಬಜೆ, ಚಿತ್ರಮೂಲ ಇವು ಪ್ರತ್ಯೇಕ ೨೪ ತೊಲ; ಇವೆಲ್ಲವನ್ನೂ ಕುಟ್ಟಿ ಎಂಟು ದ್ರೋಣ ನೀರಿನಲ್ಲಿ ಹಾಕಿ ಅಷ್ಟಾವಶೇಷ ಕಷಾಯಮಾಡಿ ಆರಿಸಿ ಶೋಧಿಸಿ ಅದಕ್ಕೆ ಧಾತಕೀಕುಸುಮ ೧೬ ಪಲ, ತ್ರಿಕಟು ೩ ತೊಲ, ತ್ರಿಜಾತಕ ೪ ಪಲ, ಪ್ರಿಯಂಗು ೪ ಪಲ ಮತ್ತು ನಾಗಕೇಸರಿ ೭ ಪಲ ಇವುಗಳ ಕಲ್ಕವನ್ನೂ, ಜೇನುತುಪ್ಪ ೨೫ ಸೇರುಗಳನ್ನೂ ಹಾಕಿ ಸಂಧಾನ ಮಾಡಿಸಬೇಕು.

ಉಪಯೋಗ—·|· ರಿಂದ ೧ ಔನ್ಸ್.

ಉಪಯೋಗ—ಮೂರ್ಛೆ, ಅಪಸ್ಮಾರ, ಶೋಷ, ಕಾರ್ಶ್ಯ, ಮಂದಾಗ್ನಿ ಮತ್ತು ವಾತದಿಂದಾಗುವ ಇತರ ವಿಕಾರಗಳಲ್ಲಿ ಉಪಯೋಗವಾಗಿದೆ. (ಹಿಸ್ಟೀರಿಯಾದಲ್ಲಿ ಉಪಯೋಗ.)

## ೨೬. ಚಂದನಾಸವ (ಭೈ.ರ.)

ಶ್ವೇತಚಂದನ, ಮುಡಿವಾಳ, ಕೊನ್ನಾರಿಗೆಡ್ಡೆ, ಶಿವನಿಹಣ್ಣು, ನೈದಿಲೆ ಗೆಡ್ಡೆ, ಪ್ರಿಯಂಗು, ಪದ್ಮಾಕ, ಲೋಧ್ರ, ಮಂಜಿಷ್ಠೆ, ರಕ್ತಚಂದನ, ಅಗಳು ಶುಂಠಿ, ನೆಲಬೇವು, ಆಲದ ಚೆಕ್ಕೆ, ಅರಳಿಚೆಕ್ಕೆ ಕಚೋರ, ಪರ್ಪಾಟಕ, ಅತಿ ಮಧುರ, ರಾಸ್ನೆ, ಕಹಿ ಪಡವಲ, ಕಂಚವಾಳದ ಚೆಕ್ಕೆ, ಮಾವಿನ ಚೆಕ್ಕೆ, ಬೂರಗದ ಬಂಕೆ ಇವು ಪ್ರತಿಯೊಂದೂ ಒಂದೊಂದು ಪಲ; ಇವನ್ನು ಕುಟ್ಟಿ ಎರಡು ದ್ರೋಣ ನೀರಿನಲ್ಲಿ ಉನಿಸಿ ಜೊತೆಗೆ ೧೬ ಪಲ ಧಾತಕೀಕುಸುಮ, ೩೦ ಪಲ ದ್ರಾಕ್ಷೆ, ಸಕ್ಕರೆ ೧೨||· ಸೇರು, ಬೆಲ್ಲ ೬·|· ಸೇರು ಇವನ್ನು ಅರೆದು ಸೇರಿಸಿ ಸಂಧಾನ ಮಾಡಬೇಕು.

ಪ್ರಮಾಣ—·|· ರಿಂದ ೧ ಔನ್ಸ್.

ಉಪಯೋಗ—ಹೃದ್ಯ, ಬಲ್ಯ ಮತ್ತು ದೀಪನವಾದುದು. ಶುಕ್ರಮೇಹ ಹರವಾದುದು.

## ೨೭. ಕನಕಾಸವ (ಭೈ.ರ.)

ಧತ್ತೂರ (ಉಮ್ಮತ್ತಿ) ಪಂಚಾಂಗ ೪ ಪಲ, ಬಿದಿರುಬೇರಿನ ತೊಗಟೆ ೪ ಪಲ, ಅತಿಮಧುರ, ಹಿಪ್ಪಲಿ, ನೆಲಗುಳ್ಳ, ನಾಗಕೇಸರಿ, ಶುಂಠಿ, ಗಂಟು ಪರಂಗಿ ಮತ್ತು ತಾಳೀಸಪತ್ರೆ ಇವು ಪ್ರತ್ಯೇಕ ೨ ಪಲ, ಧಾತಕೀಕುಸುಮ ೧೬ ಪಲ, ದ್ರಾಕ್ಷೆ ೨೦ ಪಲ, ನೀರು ಎರಡು ದ್ರೋಣ, ಸಕ್ಕರೆ ೧ ತುಲಾ ಮತ್ತು ಜೇನುತುಪ್ಪ ಅರ್ಧ ತುಲಾ (೫೦ ಪಲ). ವಿಧಿಪೂರ್ವಕವಾಗಿ ಸಂಧಾನ ಮಾಡಿ ಶೋಧಿಸಿ ಉಪಯೋಗಿಸಬೇಕು.

ಪ್ರಮಾಣ—·|·ರಿಂದ ೧ ಔನ್ಸ್.

ಉಪಯೋಗ—ಶ್ವಾಸ, ಕಾಸ, ಉರಃಕ್ಷತ, ಕ್ಷಯ, ಕ್ಷತಕ್ಷೀಣತೆ ಮತ್ತು ಜೀರ್ಣಜ್ವರಗಳಲ್ಲಿ ಸ್ರೋತಸ್ಸುಗಳನ್ನು ಶುದ್ಧಿಮಾಡಿ ರೋಗಹರಣ ಮಾಡುವುದು.

## ೨೮. ಕುಟಜಾರಿಷ್ಟ (ಭೈ.ರ.)

ಕೊಡಸಿಗೆ ಚೆಕ್ಕೆ ೧೦೦ ಪಲ, ದ್ರಾಕ್ಷೆ ೫೦ ಪಲ, ಹಿಪ್ಪೆಹೂವು,

ಕಿರಿಶಿವನಿ ಇವು ಹತ್ತು ಹತ್ತು ಪಲ; ಎಲ್ಲವನ್ನೂ ಕುಟ್ಟಿ ನಾಲ್ಕು ದ್ರೋಣ ನೀರಿನಲ್ಲಿ ಹಾಕಿ ಚತುರ್ಥಾಂಶ ಕಷಾಯ ಮಾಡಿ ಶೋಧಿಸಿ ಧಾತಕೀಕುಸುಮ ೨೦ ಪಲ, ಬೆಲ್ಲ ೧೦೦ ಪಲ ಇವನ್ನು ಕೂಡಿಸಿ ಸಂಧಾನ ಮಾಡಿ ಶೋಧಿಸ ಬೇಕು.

ಪ್ರಮಾಣ—॰|॰ರಿಂದ ೧ ಔನ್ಸ್.

ಉಪಯೋಗ—ಜ್ವರ, ಎಲ್ಲಾ ಬಗೆಯ ಅತೀಸಾರ ಮತ್ತು ಸಂಗ್ರಹಣಿ ಗಳನ್ನು ಹೋಗಲಾಡಿಸುತ್ತದೆ.

## ೨೯. ಲೋಹಾಸವ (ಶಾ.ಸಂ)

ಲೋಹಭಸ್ಮ, ಶುಂಠಿ, ಹಿಪ್ಪಲಿ, ಮೆಣಸು, ಅಳಲೆಕಾಯಿ, ತಾರೇ ಕಾಯಿ, ನೆಲ್ಲೀಕಾಯಿ, ಖುರಾಸಾನಿವೋಮ, ವಾಯುವಿಳಂಗ, ಮುಸ್ತಾ, ಚಿತ್ರಮೂಲ ಇವು ಪ್ರತಿಯೊಂದೂ ೮ ಪಲ; ಕೆಲವರು ಲೋಹಭಸ್ಮಕ್ಕೆ ಒದ ಲಾಗಿ ಲೋಹದ ಸೂಕ್ಷ್ಮ ಧೂಳನ್ನು ಹಾಕುವುದುಂಟು. ಆದರೆ ಲೋಹಾಂಶವು ಚೆನ್ನಾಗಿ ಸೇರುವುದಕ್ಕೋಸ್ಕರ ಮೇಲಿನ ದ್ರವ್ಯಗಳ ಜೊತೆಗೆ ಲೋಹವನ್ನು ಹಾಕಿ ವಿಧಿವತ್ತಾಗಿ ಅಷ್ಟಮಾಂಶ ಕ್ವಾಥ ಮಾಡಿ ಆರಿಸಿ ಶೋಧಿಸಿ ೨೦ ಪಲ ಧಾತಕೀಕುಸುಮ, ಜೇನುತುಪ್ಪ ೬೪ ಪಲ ಮತ್ತು ಬೆಲ್ಲ ೧೦೦ ಪಲ ಹಾಕಿ ಆಸವವನ್ನು ತಯಾರಿಸಬಹುದು. ಕ್ವಾಥ ಮಾಡುವುದರಿಂದ ತ್ರಿಫಲೆಗಳೊಂದಿಗೆ ಲೋಹವು ಚೆನ್ನಾಗಿ ಸೇರುವುದು. ಇದಕ್ಕೆ ಬದಲಾಗಿ ಲೋಹದ ಅಷ್ಟಮ ಭಾಗ ಕಾಸೀಸವನ್ನು ಸೇರಿಸುವುದೂ ಒಂದು ಯುಕ್ತಿ.

ಪ್ರಮಾಣ— | ರಿಂದ ೧ ಔನ್ಸ್.

ಉಪಯೋಗ—ದೀಪನ, ಗ್ರಾಹಿ, ಲೇಖನ ಮತ್ತು ರಕ್ತವರ್ಧಕ ವಾದುದು. ಪಾಂಡು, ಕಾಮಿಲಾ, ಶೋಥ, ಅರ್ಶ, ಪ್ಲೀಹವೃದ್ಧಿಗಳಲ್ಲಿ ಫಲಕಾರಿಯಾದುದು.

## ೩೦. ದಶಮೂಲಾರಿಷ್ಟ (ಶಾ.ಸಂ.)

ದಶಮೂಲಗಳು ಪ್ರತ್ಯೇಕ ೧೫ ತೊಲ, ಚಿತ್ರಮೂಲ, ಪುಷ್ಕರಮೂಲ ಪ್ರತ್ಯೇಕ ೭೫ ತೊಲ; ಲೋಧ್ರಚಕ್ಕೆ, ಅಮೃತಬಳ್ಳಿ ಪ್ರತ್ಯೇಕ ೬೦ ತೊಲ,

ನೆಲ್ಲೀಚೆಟ್ಟು ೪೮ ತೊಲ, ತುರಚನಮೂಲ ೩೬ ತೊಲ, ಕಗ್ಗಲಿಚೆಕ್ಕೆ, ಕೊಡಸಿಗೆ ಚೆಕ್ಕೆ, ಅಳಲೆಕಾಯಿ ಸಿಪ್ಪೆ ಇವು ಪ್ರತ್ಯೇಕ ೨೪ ತೊಲ, ಚಂಗಲ್ಕೋಷ್ಠ, ಮಂಜಿಷ್ಠೆ, ದೇವದಾರು, ವಾಯುವಿಳಂಗ, ಅತಿಮಧುರ, ಗಂಟುಭಾರಂಗಿ, ಬೇಲದ ಹಣ್ಣಿನ ತಿರುಳು, ತಾರೇಕಾಯಿ, ಬಿಳಿಕೊಮ್ಮೆಬೇರು, ಚವ್ಯ, ಜಟಾಮಾಂಸಿ, ಪ್ರಿಯಂಗು, ಸೊಗದೇಬೇರು, ಕರೀಜೀರಿಗೆ, ತಿಗಡೆ ಬೇರು, ರೇಣುಕೆ ಬೀಜ, ರಾಸ್ನೆ, ಹಿಪ್ಪಲಿ, ಅಡಿಕೆ, ಕಚೋರ, ಅರಿಸಿನ, ಸಬ್ಬಸಿಗೆ ಬೀಜ, ಪದ್ಮಕ, ನಾಗಕೇಸರಿ, ಕೊನ್ನಾರಿಗಡ್ಡೆ, ಕೊಡಸಿಗೆ ಬೀಜ, ಕರ್ಕಾಟಕ ಶೃಂಗಿ, ಅಷ್ಟವರ್ಗಗಳು ಇವು ಪ್ರತ್ಯೇಕ ೬ ತೊಲ, ಇವೆಲ್ಲವನ್ನೂ ಸ್ಥೂಲ ಚೂರ್ಣ ಮಾಡಿ ಒಟ್ಟು ತೂಕಕ್ಕೆ ಎಂಟರಷ್ಟು ನೀರಿನಲ್ಲಿ ಹಾಕಿ ಚತುರ್ಥಾಂಶ ಕಷಾಯ ಮಾಡಿ ಆರಿಸಿ ಸಂಧಾನಪಾತ್ರೆಯಲ್ಲಿ ಹಾಕಬೇಕು. ೮ ಸೇರು ದ್ರಾಕ್ಷೆಯನ್ನು ೩೨ ಸೇರು ನೀರಿನಲ್ಲಿ ಕಾಯಿಸಿ ಸಿಹಿ ಭಾಗವು ಕರಗಿದ ಮೇಲೆ ಶೋಧಿಸಿ ಹಿಂದಿನ ದ್ರವದೊಂದಿಗೆ ಸೇರಿಸಬೇಕು.

ಪ್ರಕ್ಷೇಪ ದ್ರವ್ಯಗಳು—ಜೇನುತುಪ್ಪ ೪ ಸೇರು, ಬೆಲ್ಲ ೫೦ ಸೇರು, ಧಾತಕೀಕುಸುಮ ೯೦ ತೊಲ, ತಕ್ಕೋಲ, ಮುಡಿವಾಳ, ಶ್ರೀಗಂಧ, ಜಾಕಾಯಿ, ಲವಂಗ, ಚತುರ್ಜಾತಕಗಳು, ಹಿಪ್ಪಲಿ ಇವು ಪ್ರತ್ಯೇಕ ೬ ತೊಲ, ಇವನ್ನು ಕಲ್ಕ ಮಾಡಿ ಕ್ವಾಥದಲ್ಲಿ ಸೇರಿಸಬೇಕು. ಸಂಧಾನವು ಪೂರ್ತಿಯಾಗಿ ಆದ ನಂತರ ಶೋಧಿಸಿ ಅದಕ್ಕೆ ಚಿಲ್ಲದ ಬೀಜದ ಕಲ್ಕವನ್ನು ಬೆರಸಿ ಸ್ವಲ್ಪಕಾಲ ಬಿಟ್ಟು ತಿಳಿದ್ರವವನ್ನು ಮಾತ್ರ ತೆಗೆದುಕೊಂಡು ಒಳ್ಳೆಯ ಕಸ್ತೂರಿ ಕಾಲು ತೊಲವನ್ನು ಅರೆದು ಬೆರಸಬೇಕು.

ಪ್ರಮಾಣ—ಅರ್ಧದಿಂದ ಒಂದು ಔನ್ಸ್.

ಉಪಯೋಗ—ಸೂತಿಕಾರೋಗಗಳಲ್ಲಿ ಉತ್ತಮ ಗುಣಕಾರಿ. ಕಾಸ, ಶ್ವಾಸ, ಅಗ್ನಿಮಾಂದ್ಯ, ಮೈ ಕೈ ನೋವು, ಹೊಟ್ಟೆನೋವುಗಳನ್ನು ಹೋಗ ಲಾಡಿಸುತ್ತದೆ. ಪಾಂಡು, ಕ್ಷಯ, ಪುರಾಣಸಂಗ್ರಹಣಿ, ತ್ರಿದೋಷಜ್ವರಗಳಲ್ಲಿ ಬಹಳ ಉಪಯೋಗವಾಗುತ್ತದೆ.

### ೩೧. ದ್ರಾಕ್ಷಾರಿಷ್ಟ

ದ್ವೀಪದ್ರಾಕ್ಷೆ ೬।। ಸೇರು, ನೀರು ಎರಡು ದ್ರೋಣ; ಚತುರ್ಥಾಂಶ

ಕ್ವಾಥ ಮಾಡಿ ಶೋಧಿಸಿ ಆರಿದನಂತರ ಶೋಧಿಸಿ ೨೫ ಸೇರು ಬೆಲ್ಲವನ್ನು ಪುಡಿ ಮಾಡಿ ಹಾಕಬೇಕು.

ಕಲ್ಕಕ್ಕೆ ದ್ರವ್ಯಗಳು—ಚತುರ್ಜಾತಕಗಳು ಪ್ರತ್ಯೇಕ ೩ ತೊಲ, ಪ್ರಿಯಂಗು, ಕರಿಮೆಣಸು, ಹಿಪ್ಪಲಿ, ವಿಳಂಗ, ಧಾತಕೀಕುಸುಮ ಪ್ರತ್ಯೇಕ ೩ ತೊಲ ಎಲ್ಲವನ್ನೂ ಕೂಡಿಸಿ ಸಂಧಾನ ಮಾಡಿ ಶೋಧಿಸಿ ತೆಗೆದಿರಿಸಬೇಕು.

ಪ್ರಮಾಣ—·|·ರಿಂದ ೧ ಔನ್ಸ್.

ಉಪಯೋಗ—ಕಾಸ, ಶ್ವಾಸ, ಉರಃಕ್ಷತ, ರಾಜಯಕ್ಷ್ಮಗಳಲ್ಲಿ ಬಹಳ ಉಪಯೋಗವಾದುದು. ಅಂತ್ರಗಳಿಗೆ ಬಲ ಹೆಚ್ಚಿಸಿ ಮಲಾಶಯವನ್ನು ಶುದ್ಧಿ ಮಾಡುತ್ತದೆ.

## ಚೂರ್ಣಗಳು

### ೩೨. ಅಷ್ಟಚೂರ್ಣ (ಅ.ಹೃ.ಚಿ. ೧೪)

ಶುಂಠಿ, ಹಿಪ್ಪಲಿ, ಮೆಣಸು, ಅಜಮೋದ, ಸೈಂಧವಲವಣ, ಜೀರಿಗೆ, ಕರೀಜೀರಿಗೆ ಮತ್ತು ಹಿಂಗು (ತುಪ್ಪದಲ್ಲಿ ಹುರಿಯಬೇಕು) ಎಲ್ಲವನ್ನೂ ಸಮ ಭಾಗ ತೆಗೆದುಕೊಂಡು ಚೂರ್ಣಮಾಡಬೇಕು. ಇದಕ್ಕೆ ಹಿಂಗ್ವಾಷ್ಟಕವೆಂದೂ ಹೆಸರುಂಟು.

ಪ್ರಮಾಣ—೧೦ ರಿಂದ ೨೦ ಗ್ರೈ. ದಿನಕ್ಕೆ ಎರಡು ಅಥವಾ ಮೂರು ವೇಳೆ ಬಿಸಿ ನೀರು ಅಥವಾ ಮಜ್ಜಿಗೆಯೊಂದಿಗೆ ಕುಡಿಸಬಹುದು

ಉಪಯೋಗ—ಅಗ್ನಿಮಾಂದ್ಯ, ವಾತಗುಲ್ಮಗಳನ್ನು ಹೋಗಲಾಡಿಸುವುದು. ಗ್ರಾಹಿ. ಊಟದ ಮೊದಲನೆಯ ತುತ್ತಿಗೆ ತುಪ್ಪದೊಂದಿಗೆ ಈ ಚೂರ್ಣವನ್ನು ಸೇವಿಸಬಹುದು.

### ೩೩. ಅಜಮೋದಾದಿಚೂರ್ಣ (ಶಾ.ಸಂ)

ಅಜಮೋದ, ವಾಯುವಿಳಂಗ, ಸೈಂಧವಲವಣ, ದೇವದಾರು, ಚಿತ್ರಮೂಲ, ಮೋಡಿ, ಸಬ್ಬಸಿಗೆ, ಹಿಪ್ಪಲಿ, ಮೆಣಸು ಇವು ಪ್ರತ್ಯೇಕ ಒಂದೊಂದು ತೊಲ; ಅಳಲೆಕಾಯಿ ಸಿಪ್ಪೆ ಐದು ತೊಲ, ಪರಂಗಿ ಚೆಕ್ಕೆ, ಮತ್ತು ಶುಂಠಿ ಹತ್ತು ಹತ್ತು ತೊಲ ಎಲ್ಲವನ್ನೂ ಕುಟ್ಟಿ ಸೂಕ್ಷ್ಮಚೂರ್ಣ ಮಾಡಬೇಕು.

ಪ್ರಮಾಣ—೧೦ ರಿಂದ ೨೦ ಗ್ರೈನ್ ಬಿಸಿನೀರಿನೊಡನೆ ಕೊಡಬೇಕು.

ಉಪಯೋಗ—ಶೋಥ, ಆಮವಾತ, ಸಂಧಿವಾತ, ಗೃಧ್ರಸೀ ಮುಂತಾದ ವಾತರೋಗಗಳನ್ನು ಹೋಗಲಾಡಿಸುತ್ತದೆ.

**೩೪. ಏಲಾದಿಚೂರ್ಣ** (ಅ ಹೃ.ಚಿ. ೫)

ಏಲಕ್ಕಿ, ದಾಲ್ಚಿನ್ನಿ, ನಾಗಕೇಸರಿ, ಮೆಣಸು, ಹಿಪ್ಪಲಿ ಮತ್ತು ಶುಂಠಿ ಇವನ್ನು ಕ್ರಮವಾಗಿ ಒಂದೊಂದು ತೊಲದಂತೆ ಹೆಚ್ಚಿಸಿಕೊಂಡು ಸೇರಿಸಿ ಒಟ್ಟು ಚೂರ್ಣಕ್ಕೆ ಸಮಭಾಗ ಸಕ್ಕರೆಯನ್ನು ಬೆರಸಬೇಕು.

ಪ್ರಮಾಣ—೧೦ ರಿಂದ ೨೦ ಗ್ರೈನ್.

ಉಪಯೋಗ—ಅರುಚಿ, ಹೃದಯ, ಕಾಸ, ಶ್ವಾಸ ಮತ್ತು ಕಂಠರೋಗಗಳನ್ನು ಹೋಗಲಾಡಿಸುತ್ತದೆ.

**೩೫. ತಾಳಿಸಾದಿಚೂರ್ಣ** (ಶಾ.ಸಂ.)

ತಾಳೀಸಪತ್ರೆ ೧ ತೊಲ, ಮರಿಚ ೨ ತೊಲ, ಶುಂಠಿ ೩ ತೊಲ, ಹಿಪ್ಪಲಿ ೪ ತೊಲ, ಬಿದಿರುಪ್ಪು ೫ ತೊಲ, ಏಲಕ್ಕಿ ಅರ್ಧ ತೊಲ, ದಾಲ್ಚಿನ್ನಿ ಅರ್ಧ ತೊಲ, ಸಕ್ಕರೆ ೩೨ ತೊಲ ಎಲ್ಲವನ್ನೂ ಚೂರ್ಣಿಸಬೇಕು.

ಪ್ರಮಾಣ—೧೦ ರಿಂದ ೨೦ ಗ್ರೈ.

ಉಪಯೋಗ—ಅರುಚಿ, ಕಾಸ, ಶ್ವಾಸ, ಜ್ವರ, ವಾಂತಿ, ಶೋಷ, ಅಗ್ನಿಮಾಂದ್ಯ ಮುಂತಾದುವನ್ನು ಹೋಗಲಾಡಿಸುತ್ತದೆ.

**೩೬. ಸಿತೋಪಲಾದಿಚೂರ್ಣ** (ಚ.ಚಿ. ೮)

ಕಲ್ಲುಸಕ್ಕರೆ ೧೬ ತೊಲ, ಬಿದಿರುಪ್ಪು ೮ ತೊಲ, ಹಿಪ್ಪಲಿ ೪ ತೊಲ, ಏಲಕ್ಕಿ ೨ ತೊಲ, ದಾಲ್ಚಿನ್ನಿ ೧ ತೊಲ ಎಲ್ಲವನ್ನೂ ಸೇರಿಸಿ ನುಣ್ಣಗೆ ಚೂರ್ಣಿಸಬೇಕು.

ಪ್ರಮಾಣ—೧೦ ರಿಂದ ೨೦ ಗ್ರೈ.

ಉಪಯೋಗ—ಶ್ವಾಸ, ಕಾಸ, ರಾಜಯಕ್ಷ್ಮ, ಸುಪ್ತಜಿಹ್ವಾ, ಅರೋಚಕಗಳನ್ನು ಹೋಗಲಾಡಿಸುತ್ತದೆ.

## ೩೭. ದಾಡಿಮಾಷ್ಟಕಚೂರ್ಣ (ಅ.ಹೃ. ೯)

ದಾಳಿಂಬೆ ಬೀಜ ಮತ್ತು ಸಿಪ್ಪೆ ಒಣಗಿದ್ದು ೩೨ ತೊಲ, ಸಕ್ಕರೆ ೩೨ ತೊಲ, ಬಿದಿರುಪ್ಪು ೧ ತೊಲ, ಏಲಕ್ಕಿ, ದಾಲ್ಚಿನ್ನಿ, ಲವಂಗಪತ್ರೆ, ನಾಗಕೇಸರಿ ಇವು ಪ್ರತ್ಯೇಕ ೨ ತೊಲ, ಖುರಾಸಾನಿವೋಮ, ಕೊತ್ತಂಬರಿ ಬೀಜ, ಜೀರಿಗೆ, ಗ್ರಂಥಿಕತಗರ, ಶುಂಠಿ, ಹಿಪ್ಪಲಿ, ಮೆಣಸು ಇವು ಪ್ರತ್ಯೇಕ ೪ ತೊಲ.

ಪ್ರಮಾಣ—೧೦ ರಿಂದ ೩೦ ಗ್ರೈ. ಮಜ್ಜಿಗೆ ಅಥವಾ ಹಾಲು ಒಡೆದ ನೀರಿನೊಡನೆ.

ಉಪಯೋಗ—ದೀಪನವಾದುದು; ಗ್ರಾಹಿ; ಗ್ರಹಣೀ, ಅತೀಸಾರ, ಪ್ರವಾಹಿಕಾಗಳಲ್ಲಿ ಶ್ರೇಷ್ಠವಾದುದು.

## ೩೮. ಪುನರ್ನವಾಷ್ಟಕಚೂರ್ಣ

ಪುನರ್ನವಾಷ್ಟಕ ಕ್ವಾಥ ದ್ರವ್ಯಗಳನ್ನೇ ಚೂರ್ಣಿಸಿ ೧೦ರಿಂದ ೩೦ ಗ್ರೈನ್ ಉಪಯೋಗಿಸಬಹುದು.

## ೩೯. ಜಾತೀಫಲಾದಿಚೂರ್ಣ (ಶಾ.ಸಂ.)

ಜಾಯಿಕಾಯಿ, ಲವಂಗ, ಏಲಕ್ಕಿ, ಲವಂಗಪತ್ರೆ, ದಾಲ್ಚಿನ್ನಿ, ನಾಗಕೇಸರಿ, ಕರ್ಪೂರ, ಶ್ರೀಗಂಧ, ಎಳ್ಳು, ಬಿದಿರುಪ್ಪು, ಗ್ರಂಥಿಕತಗರ, ನೆಲ್ಲೀಚೆಟ್ಟು, ತಾಳೀಸಪತ್ರೆ, ಹಿಪ್ಪಲಿ, ಅಳಲೆಕಾಯಿ, ದಪ್ಪ ಜೀರಿಗೆ, ಚಿತ್ರ ಮೂಲ, ಶುಂಠಿ, ವಾಯುವಿಳಂಗ, ಮೆಣಸು ಇವು ಪ್ರತ್ಯೇಕ ಒಂದೊಂದು ತೊಲ. ಭಂಗೀಸೊಪ್ಪು ೧೫ ತೊಲ. ಇವಿಷ್ಟಕ್ಕೂ ಸಮಭಾಗ ಸಕ್ಕರೆ ಹಾಕಿ ಚೂರ್ಣಿಸಬೇಕು.

ಷರಾ—ಭಂಗೀಸೊಪ್ಪು ವ್ಯವಾಯಿ ದ್ರವ್ಯವಾದುದರಿಂದ ಇದನ್ನು ಬಿಟ್ಟು ಉಳಿದುವನ್ನು ಹಾಕಿ ಮಾಡುವ ರೂಢಿಯಿದೆ. ಇದೂ ಬಹು ಗುಣ ಕಾರಿಯಾಗಿದೆ. ಅವಶ್ಯಬಿದ್ದರೆ ಮಾತ್ರ ಪ್ರಮಾಣವರಿತು ಭಂಗಿಯನ್ನು ಹಾಕ ಬಹುದು.

ಪ್ರಮಾಣ—೫ ರಿಂದ ೧೫ ಗ್ರೈ.

ಉಪಯೋಗ—ಗ್ರಾಹಿ ಮತ್ತು ಶಮನವಾದುದು. ಅರುಚಿ, ಕಾಸ, ಶ್ವಾಸ, ನಿದ್ರಾನಾಶ, ಗ್ರಹಣೀ, ಅತೀಸಾರಗಳನ್ನು ಹೋಗಲಾಡಿಸುವುದು.

### ೪೦. ಜೀರಕಾದಿಚೂರ್ಣ

ಜೀರಿಗೆ, ಗಂಟುಪರಂಗಿ, ಏಲಕ್ಕಿ, ತವಕ್ಷೀರ, ಕರ್ಪೂರ ಶಿಲಾಜತು ಭಸ್ಮ, ಕಲ್ನಾರು ಇವನ್ನೆಲ್ಲಾ ಸಮಭಾಗ ಹಾಕಿ ಚೂರ್ಣಿಸಿ ಬಂದುದಕ್ಕೆ ಸಮಭಾಗ ಬೂರಾಸಕ್ಕರೆಯನ್ನು ಹಾಕಿ ಕಲಸಿ ಭದ್ರಪಡಿಸಬೇಕು.

ಪ್ರಮಾಣ—೧೯ ರಿಂದ ೨೦ ಗ್ರೈನ್. ಗುಲಾಬಿ ಗುಲ್ಕನ್, ಬೆಣ್ಣೆ ಅಥವಾ ನೀರು ಅನುಪಾನ.

ಉಪಯೋಗ—ರಕ್ತಪಿತ್ತ, ರಕ್ತಾರ್ಶ, ರಕ್ತಾತೀಸಾರಗಳಲ್ಲಿ ಬಹಳ ಉಪಯೋಗವಾದುದು. ರಕ್ತಸ್ರಾವವನ್ನು ನಿಲ್ಲಿಸುತ್ತದೆ. ಉರಿ, ಬಾಯಾರಿಕೆಗಳನ್ನು ಹೋಗಲಾಡಿಸುತ್ತದೆ.

### ೪೧. ಗೋಕ್ಷುರಾದಿಚೂರ್ಣ

ನೆಗ್ಗಿಲು, ಎಣ್ಣೆಬಿಳಿಗಾರ, ಸೂರತಿಬಿಳಿಗಾರ, ಯವಕ್ಷಾರ, ಕೊಮ್ಮೆಬೇರು, ಅಳಲೆಕಾಯಿ, ಸೂರ್ಯಕ್ಷಾರ, ಸರ್ಜಕ್ಷಾರ, ತಕ್ಕೋಲ ಮತ್ತು ರೇವಲ್ಚಿನ್ನಿ ಎಲ್ಲಾ ಸಮಭಾಗ; ಬಿಳಿಗಾರಗಳೆರಡನ್ನೂ ಬೇರೆ ಬೇರೆಯಾಗಿ ಹುರಿದುಕೊಳ್ಳಬೇಕು. ಉಳಿದ ದ್ರವ್ಯಗಳನ್ನೆಲ್ಲಾ ಚೂರ್ಣಿಸಿ ಬಿಳಿಗಾರವನ್ನು ಸರಿಯಾಗಿ ಬೆರಸಬೇಕು.

ಪ್ರಮಾಣ—೧೦ ರಿಂದ ೨೦ ಗ್ರೈನ್. ದಿನಕ್ಕೆ ಎರಡು ಅಥವಾ ಮೂರು ಸಲ.

ಉಪಯೋಗ—ಲೇಖನ ಮತ್ತು ಮೂತ್ರಶೋಧನವಾದುದರಿಂದ ಶೋಥ, ಉದರ, ಪೂಯಮೇಹಗಳಲ್ಲಿ ಉಪಯೋಗವಾಗಿದೆ.

### ೪೨. ಲಘುಗಂಗಾಧರಚೂರ್ಣ (ಶಾ.ಸಂ.)

ಕೊನ್ನಾರಿಗೆಡ್ಡೆ, ಕೊಡಸಿಗೆಬೀಜ, ಬಿಲ್ವದ ತಿರುಳು, ಲೋಧ್ರಚೆಕ್ಕೆ, ಎಲವದಹಗಿನು ಮತ್ತು ಧಾತಕೀಕುಸುಮ; ಎಲ್ಲವನ್ನು ಸಮಭಾಗ ಹಾಕಿ ಚೂರ್ಣಿಸಬೇಕು.

ಪ್ರಮಾಣ—೧೦ ರಿಂದ ೨೦ ಗ್ರೈನ್. ದಿನಕ್ಕೆ ಎರಡು ಅಥವಾ ಮೂರು ಸಲ ಮಜ್ಜಿಗೆ ಮತ್ತು ಬೆಲ್ಲಗಳೊಡನೆ ಕೊಡಬೇಕು.

ಉಪಯೋಗ—ಗ್ರಾಹಿ, ದೀಪನ ಮತ್ತು ಪಾಚನವಾದುದು. ಅತೀಸಾರ ಮತ್ತು ಗ್ರಹಣಿಗಳಲ್ಲಿ ಮಜ್ಜಿಗೆ ಅಥವಾ ಹಾಲನ್ನು ಒಡೆದು ತೆಗೆದ ನೀರಿನಲ್ಲಿ ಕೊಡಬೇಕು.

## ೪೩. ಸುದರ್ಶನಚೂರ್ಣ (ಶಾ ಸಂ.)

ತ್ರಿಫಲಾ ಪ್ರತ್ಯೇಕ, ಅರಿಸಿನ, ಮರದರಿಸಿನ, ಹೆಗ್ಗುಳ್ಳ, ನೆಲಗುಳ್ಳ, ಕಚೋರ, ತ್ರಿಕಟು ಪ್ರತ್ಯೇಕ, ಮೋಡಿ, ಹಾಲುಕೊರಟಿಗೆ, ಅಮೃತಬಳ್ಳಿ, ತುರಚನಬೇರು, ಕಟುಕರೋಹಿಣಿ, ಪರ್ವಾಷ್ಟಕ, ಮುಸ್ತಾ, ತ್ರಾಯಮಾಣ, ಮುಡಿವಾಳ, ಜೇನಿನಚಿಕ್ಕೆ, ಪುಷ್ಕರಮೂಲ, ಅತಿಮಧುರ, ಕೊಡಸಿಗೆ ಚೆಕ್ಕೆ, ಪೋಮು, ಇಂದ್ರಯವ, ಗಂಟುಪರಂಗಿ, ನುಗ್ಗೆಬೀಜ, ಪಟಿಕ, ಬಜೆ, ದಾಲ್ಚಿನ್ನಿ, ಲಾವಂಚ, ಶ್ರೀಗಂಧ, ಅತಿಬಜೆ, ಕಳ್ಳಂಗಡಲೆಬೇರು, ಒಂದೆಲೆ ಮತ್ತು ಮೂರೆಲೆಹೊನ್ನೆ, ವಾಯುವಿಳಂಗ, ಗ್ರಂಥಿಕತಗರ, ಚಿತ್ರಮೂಲ, ದೇವದಾರು, ಚವ್ಯ, ಕಹಿಪಡವಲ, ಲವಂಗ, ಬಿದಿರುಪ್ಪು, ತಾವರೆದಂಟು, ಲವಂಗಪತ್ರೆ, ಜಾಪತ್ರೆ ಮತ್ತು ತಾಳೀಸಪತ್ರೆ ಇವೆಲ್ಲವನ್ನೂ ಸಮಭಾಗ ಹಾಕಿ ಒಟ್ಟು ತೂಕದ ಅರ್ಧಭಾಗ ಚಿರಾಯಿತವನ್ನು ಸೇರಿಸಿ ನುಣ್ಣಗೆ ಚೂರ್ಣಿಸಬೇಕು.

ಪ್ರಮಾಣ—೧೦ ರಿಂದ ೨೦ ಗ್ರೈನ್ ದಿನಕ್ಕೆ ಎರಡು ಅಥವಾ ಮೂರು ಸಲ ಕಾದಾರಿದ ನೀರಿನಲ್ಲಿ ಕೊಡಬೇಕು.

ಉಪಯೋಗ—ದೀಪನಪಾಚನವಾದುದು. ವಿಷಮಜ್ವರಗಳಲ್ಲಿ ಉಪಯೋಗ.

## ೪೪. ಸೋನಾದಿಚೂರ್ಣ

ಸೋನಾಮುಖಿ ೬ ಸೇರು, ಅತಿಮಧುರ ૩ ಸೇರು, ಧನಿಯಾ ೧.॥. ಸೇರು, ಶುಂಠಿ ૩ ಪಾವು—ಎಲ್ಲವನ್ನೂ ಕುಟ್ಟಿ ನುಣ್ಣಗೆ ಚೂರ್ಣಿಸಬೇಕು.

ಪ್ರಮಾಣ—೩೦ರಿಂದ ೬೦ ಗ್ರೈ.

ಉಪಯೋಗ—ಮೃದುವಿರೇಚನ ಮಾಡಿಸುವುದು.

**೪೫. ದ್ರಾಕ್ಷಾದಿಚೂರ್ಣ** (ಯೋ.ರ.)

ದ್ರಾಕ್ಷೆ, ಭಕ್ತ್ರದರಳು, ಬಿಳಿದಾವರೆಗೆಡ್ಡೆ, ಅತಿಮಧುರ, ಖರ್ಜೂರ, ಸೊಗದೇಬೇರು, ಬಿದಿರುಪ್ಪು, ಮುಡಿವಾಳ, ನೆಲ್ಲೀಚೆಟ್ಟು, ಶ್ರೀಗಂಧ, ಕೊನ್ನಾರಿಗೆಡ್ಡೆ, ಗ್ರಂಥಿಕತಗರ, ತಕ್ಕೋಲ, ಜಾಯಿಕಾಯಿ, ದಾಲ್ಚಿನ್ನಿ, ಲವಂಗಪತ್ರೆ, ಏಲಕ್ಕಿ, ನಾಗಕೇಸರಿ, ಧನಿಯ ಮತ್ತು ಹಿಪ್ಪಲಿ ಇವೆಲ್ಲಾ ಸಮತೂಕ; ಎಲ್ಲಕ್ಕೂ ಸಮತೂಕ ಬೂರಾಸಕ್ಕರೆ. ಇವನ್ನು ಚೂರ್ಣಿಸಿ ಭದ್ರಪಡಿಸಬೇಕು.

ಪ್ರಮಾಣ—೧೫ ರಿಂದ ೨೦ ಗ್ರ್ಯಾ. ತುಪ್ಪ, ಹಾಲು, ಗುಲ್ಕನ್ ಮುಂತಾದ ಅನುಪಾನಗಳಲ್ಲಿ ಕೊಡುವುದರಿಂದ ಪಿತ್ತವಿಕಾರಗಳು ಶಮನ ಹೊಂದುವುವು. ಕಾಸಹರ.

**೪೬. ಪಾರದಾದಿಚೂರ್ಣ ಮತ್ತು ಮುಲಾಮು** (ವೈದ್ಯಜೀವನ)

ಪಾದರಸ, ಗಂಧಕ, ಜೀರಿಗೆ, ಕರಿಜೀರಿಗೆ, ಅರಿಸಿನ, ಮರದರಿಸಿನ, ಮೆಣಸು, ಚಂದ್ರ (ಸಿಂಧೂರ), ಮಣಿಶಿಲೆ ಇವೆಲ್ಲವನ್ನೂ ಸಮತೂಕ ತೆಗೆದುಕೊಂಡು ಮೊದಲು ರಸ ಗಂಧಕಗಳನ್ನು ಅರೆದು ಮಣಿಶಿಲೆ ಮತ್ತು ಚಂದ್ರಗಳನ್ನು ಸೇರಿಸಿ ಅನಂತರ ಉಳಿದ ದ್ರವ್ಯಗಳ ಚೂರ್ಣವನ್ನು ಬೆರಸಬೇಕು. ಇದನ್ನು ಕೊಬ್ಬರಿ ಎಣ್ಣೆ ಅಥವಾ ತುಪ್ಪದೊಂದಿಗೆ ಕಲಸಿ ಲೇಪನ ಮಾಡುವುದರಿಂದ ಕಜ್ಜಿ ತುರಿಗಳು ಹೋಗುವುವು. ಬಾಯಿ ಕಣ್ಣುಗಳಿಗೆ ಸೋಕದಂತೆ ಎಚ್ಚರಿಕೆ ತೆಗೆದುಕೊಳ್ಳಬೇಕು.

ಚೂರ್ಣಕ್ಕೆ ಸಮತೂಕ ತುಪ್ಪ, ತುಪ್ಪಕ್ಕೆ ಅರ್ಧತೂಕ ಜೇನುಮಯಣಗಳನ್ನು ಕರಗಿಸಿ ಆರಿದ ಕೂಡಲೇ ಚೂರ್ಣವನ್ನು ಸೇರಿಸಿ ಮುಲಾಮನ್ನು ಮಾಡಿ ದುಷ್ಟವ್ರಣಗಳಿಗೆ ಲೇಪನವಾಗಿ ಉಪಯೋಗಿಸಬಹುದು.

## ವಟಿಗಳು

**೪೭. ಅಷ್ಟಾಕ್ಷರಿಗುಟಿಕಾ** (ಅ.ಕ.)

ಅಫೀಮು, ಶ್ರೀಗಂಧ, ರಕ್ತಚಂದನ, ಜಾಯಿಕಾಯಿ, ಶುದ್ಧಹಿಂಗುಲ, ಹಿಪ್ಪಲಿ, ಹಿಂಗು ಮತ್ತು ಅತಿಬಜೆ ಇವು ಪ್ರತ್ಯೇಕ ಒಂದೊಂದು ತೊಲ;

ಹಿಪ್ಪಲಿಯನ್ನು ಸ್ವಲ್ಪ ಹುರಿದು, ಹಿಂಗುವನ್ನು ತುಪ್ಪದಲ್ಲಿ ಕರಿಯಬೇಕು. ಮೊದಲು ಹಿಂಗುಳವನ್ನು ನುಣ್ಣಗೆ ಅರೆದು ಅನಂತರ ಕ್ರಮವಾಗಿ ಅಫೀಮು, ಹಿಂಗುಗಳನ್ನು ಸೇರಿಸಿ ಅರೆದು ಕೊನೆಗೆ ಉಳಿದ ದ್ರವ್ಯಗಳ ಸೂಕ್ಷ್ಮ ಚೂರ್ಣ ವನ್ನು ಹಾಕಿ (೧) ಬಿಲ್ವ, (೨) ಜೀರಿಗೆ, (೩) ತುರಚನಬೇರು, (೪) ಮುಸ್ತಾ, (೫) ಪೋಮ, (೬) ಧನಿಯಗಳ ಕಷಾಯಗಳಲ್ಲರೆದು ಅನಂತರ ನಿಂಬೆ ಹಣ್ಣಿನ ರಸದಲ್ಲರೆದು ಗುಂಜಾಪ್ರಮಾಣ ಮಾತ್ರೆಗಳನ್ನು ಮಾಡಬೇಕು.

ಉಪಯೋಗ—ಗ್ರಾಹಿಯಾದುದು. ಅತೀಸಾರ, ಗ್ರಹಣಿಗಳಲ್ಲಿ ಮಜ್ಜಿಗೆ ಅಥವಾ ಜೇನುತುಪ್ಪದೊಡನೆ ಕೊಡಬೇಕು. ಪಾಚನವಾಗಿ ಪಂಚಕೋಲ ಕಷಾಯದೊಂದಿಗೆ ಕೊಡಬಹುದು.

**೪೮. ತಾಳೀಸಾದಿವಟೀ** (ಅ.ಹೃ ಚಿ. ೧೦)

ತಾಳೀಸಪತ್ರೆ, ಚವ್ಯ, ಮೆಣಸು ಇವು ಪ್ರತ್ಯೇಕ ೧ ಪಲ, ಹಿಪ್ಪಲಿ ೨ ಪಲ, ಮೋಡಿ ೨ ಪಲ, ಶುಂಠಿ ೩ ಪಲ, ದಾಲ್ಚಿನ್ನಿ, ಲವಂಗಪತ್ರೆ, ಏಲಕ್ಕಿ ಮತ್ತು ಲಾವಂಚ ಇವು ಪ್ರತ್ಯೇಕ ೧ ಕರ್ಷ; ಎಲ್ಲವನ್ನೂ ಸೂಕ್ಷ್ಮ ಚೂರ್ಣ ಮಾಡಿ ಇದಕ್ಕೆ ಮೂರರಷ್ಟು ಬೆಲ್ಲ ಸೇರಿಸಿ ಹತ್ತು ಗ್ರೈನಿನ ಮಾತ್ರೆಗಳನ್ನು ಮಾಡಬೇಕು.

ಪ್ರಮಾಣ—ಹೊತ್ತಿಗೆ ೧ ವಟಿಯಂತೆ ದಿನಕ್ಕೆ ಮೂರು ಅಥವಾ ನಾಲ್ಕು ಹೊತ್ತು ಬಾಯಲ್ಲಿಟ್ಟುಕೊಂಡಿದ್ದು ಕರಗಿದಂತೆಲ್ಲಾ ಅದರ ದ್ರವವನ್ನು ನುಂಗು ತ್ತಿರಬೇಕು.

ಉಪಯೋಗ—ವಾತಶ್ಲೇಷ್ಮ ದೋಷಗಳಿಂದುಂಟಾದ ಛರ್ದಿ, ಗ್ರಹಣೀ, ಪಾರ್ಶ್ವಶೂಲ, ಹೃದ್ಗ್ರಹ, ಶ್ವಾಸ, ಕಾಸ ಮುಂತಾದುವು ಹೋಗುತ್ತವೆ.

ಪರಾ—ಬಾಯಲ್ಲಿಟ್ಟುಕೊಂಡು ನಿದ್ರಿಸಬಾರದು. ಏಕೆಂದರೆ ವಟಿಯು ಖಾರವಾಗಿರುವುದರಿಂದ ಒಂದೇ ಕಡೆಯಲ್ಲಿದ್ದರೆ ಬಾಯಿ ಹುಣ್ಣಾಗುವುದು. ಶುಂಠಿಗೆ ಬದಲಾಗಿ ಅಳಲೆಕಾಯಿಯನ್ನು ಹಾಕಿ ವಟಿಮಾಡಿದರೆ ಇದೇ ಗುಣ ಗಳೊಂದಿಗೆ ಮಲಬಂಧವನ್ನೂ ಹೋಗಲಾಡಿಸುವುದು.

೩೫ನೇ ಯೋಗದಲ್ಲಿ ಹೇಳಿದ ತಾಳೀಸಾದಿ ಚೂರ್ಣವನ್ನೇ ವಟಿ ಮಾಡುವುದುಂಟು.

## ೪೯. ಕರ್ಪೂರಾದಿವಟೀ

ಕರ್ಪೂರ ೧೨ ತೊಲ, ಕವಡೆಸಾಂಬ್ರಾಣಿ ೨೪ ತೊಲ, ರುಬ್ಬಿಸೂಸ್ (ಅತಿಮಧುರಸತ್ವ) ೩೬ ತೊಲ, ಸೋಂಪು ೪೮ ತೊಲ, ಅಫೀಮು ೨ ತೊಲ. ಮೊದಲು ಅಫೀಮನ್ನು ನೀರಿನಲ್ಲಿ ನುಣ್ಣಗೆ ಅರೆದು ಅದರ ಜೊತೆಗೆ ರುಬ್ಬಿಸೂಸಿನ ಸಣ್ಣ ಸಣ್ಣ ಚೂರುಗಳನ್ನು ಸೇರಿಸಿ ಅರೆಯಬೇಕು. ಅನಂತರ ಕರ್ಪೂರ ಮತ್ತು ಉಳಿದ ದ್ರವ್ಯಗಳ ಚೂರ್ಣಗಳನ್ನು ಸೇರಿಸಿ ಎಲ್ಲವನ್ನೂ ಅರೆದು ೩ ಗ್ರೈ. ಮಾತ್ರೆಗಳನ್ನು ಮಾಡಬೇಕು.

ಉಪಯೋಗ—ಕಾಸಶ್ವಾಸಹರ. ರಾತ್ರಿಯಲ್ಲಿ ಕೆಮ್ಮಿನಿಂದ ನಿದ್ದೆ ಬರದಿದ್ದರೆ ಈ ವಟಿಯನ್ನು ಬಾಯಲ್ಲಿರಿಸಿಕೊಳ್ಳುವುದರಿಂದ ಗಂಟಲುನೋವು, ಉರಿ, ಕೆಮ್ಮುಗಳು ನಿಂತು ಸುಖವಾಗಿ ನಿದ್ದೆ ಬರುವುದು.

## ೫೦. ನಾಗಕೇಸರಿವಟೀ

ನಾಗಕೇಸರಿ, ಕಾಚು, ಮಾಪಾಳದ ಕಾಯಿ, ಜಾಯಿಕಾಯಿ ಇವು ಪ್ರತ್ಯೇಕ ೧ ಸೇರು, ಅಫೀಮು ೩ ತೊಲ. ಮೊದಲು ಅಫೀಮನ್ನು ನೀರಿನಲ್ಲ ರೆದು ಉಳಿದ ದ್ರವ್ಯಗಳ ಚೂರ್ಣವನ್ನು ಸೇರಿಸಿ ಎರಡು ಗ್ರೈನ್ ಮಾತ್ರೆಗಳನ್ನು ಮಾಡಬೇಕು. ಅತೀಸಾರ, ಪ್ರದರ, ಕಾಸಗಳಲ್ಲಿ ಉಪಯೋಗವಾದುದು.

## ೫೧. ಭುಕ್ತಾಂಜರೀವಟೀ (ಕ್ಷಾರಗುಟಿಕಾ ಚ.ಚಿ.ಅ. ೧೫)

ಮುಂಡುಗಳ್ಳಿ ೪ ಪಲ, ಸೌವರ್ಚಲಲವಣ ೧ ಪಲ, ಬಿಡಲವಣ ೧ ಪಲ, ಬದನೆಎಲೆ ೪ ಪಲ, ಎಕ್ಕದೆಲೆ ೮ ಪಲ ಮತ್ತು ಚಿತ್ರಮೂಲ ೨ ಪಲ ಎಲ್ಲವನ್ನೂ ಸೇರಿಸಿ ಒಂದು ಗಡಿಗೆಯಲ್ಲಿ ಹಾಕಿ ಮುಚ್ಚಿ ಸುಟ್ಟು, ಬಂದ ಕ್ಷಾರವನ್ನು ಬದನೆಸೊಪ್ಪಿನ ರಸದಲ್ಲೇ ಅರೆದು ೫ ಗ್ರೈನ್ ವಟಿಯನ್ನು ಮಾಡಬೇಕು.

ಪ್ರಮಾಣ—೧ ರಿಂದ ೨ ವಟಿಗಳನ್ನು ಊಟದನಂತರ ಸೇವಿಸಬೇಕು.

ಅನುಪಾನ—ತಕ್ರ, ಬಿಸಿನೀರು, ಆಸವ.

ಉಪಯೋಗ—ಆಹಾರವನ್ನು ಜಾಗ್ರತೆಯಾಗಿ ಜೀರ್ಣಿಸುವುದು. ಕಾಸ, ಶ್ವಾಸ, ಅರ್ಶ, ವಿಷೂಚಿಕಾ, ಪ್ರತಿಶ್ಯಾಯಾದಿಗಳನ್ನು ಗುಣಪಡಿಸುವುದು.

**೫೨. ಮಂಡೂರವಟೀ** (ಅ.ಹೃ ಚಿ. ೧೬)

ತ್ರಿಕಟು ಪ್ರತ್ಯೇಕ, ಚಿತ್ರಮೂಲ, ವಾಯುವಿಳಂಗ, ತ್ರಿಫಲಾ ಪ್ರತ್ಯೇಕ, ಕೊನ್ನಾರಿಗೆಡ್ಡೆ ಇವನ್ನು ಒಂದೊಂದು ತೊಲದಂತೆ ಹಾಕಿ ಸೂಕ್ಷ್ಮ ಚೂರ್ಣ ಮಾಡಿ ೧೮ ತೊಲ ಶುದ್ಧಿಮಾಡಿದ ಹಳೇ ಮಂಡೂರ ಚೂರ್ಣವನ್ನು ಹಾಕಿ ಒಟ್ಟು ಎಂಟರಷ್ಟು ಗೋಮೂತ್ರದಲ್ಲಿ ಗಟ್ಟಿಯಾಗುವವರೆಗೂ ಕುದಿಸಬೇಕು ಐದು ಗ್ರೈನ್ ವಟಿಗಳನ್ನು ಮಾಡಿ ತಕ್ರಾನುಪಾನವಲ್ಲಿ ಕೊಡುವುದರಿಂದ ಪಾಂಡು, ಕುಷ್ಠ, ಶೋಫ, ಊರುಸ್ತಂಭ, ಅರ್ಶ, ಕಾಮಿಲಾ, ಪ್ಲೀಹಗಳು ನಾಶವಾಗುತ್ತವೆ.

**೫೩. ಅಗ್ನಿತುಂಡೀವಟೀ** (ಶಾ.ಸಂ.)

ಶುದ್ಧ ಪಾದರಸ, ಶುದ್ಧ ವತ್ಸನಾಭಿ, ಶುದ್ಧ ಗಂಧಕ, ಖುರಾಸಾನಿವೋಮ, ಅಳಲೆಕಾಯಿ, ತಾರೆಕಾಯಿ, ನೆಲ್ಲೀಕಾಯಿ, ಸರ್ಜಕ್ಷಾರ, ಯವಕ್ಷಾರ, ಚಿತ್ರ ಮೂಲ, ಸೈಂಧವಲವಣ, ಜೀರಿಗೆ, ಸೌವರ್ಚಲಲವಣ, ವಾಯುವಿಳಂಗ, ಸಮುದ್ರಲವಣ, ಶುಂಠಿ, ಹಿಪ್ಪಲಿ ಮತ್ತು ಮೆಣಸು ಎಲ್ಲವನ್ನೂ ಸಮಭಾಗ ತೆಗೆದುಕೊಂಡು ಇವೆಲ್ಲಕ್ಕೂ ಸಮಭಾಗ ಶುದ್ಧ ವಿಷಮುಷ್ಟಿ ಬೀಜವನ್ನು ಹಾಕ ಬೇಕು. ಮೊದಲು ರಸಗಂಧಕ ಕಜ್ಜಲಿಮಾಡಿ ಅದಕ್ಕೆ ಉಳಿದ ದ್ರವ್ಯಗಳ ಸೂಕ್ಷ್ಮ ಚೂರ್ಣವನ್ನು ಸೇರಿಸಿ ನಿಂಬೆಹಣ್ಣಿನ ರಸದಲ್ಲಿ ೧೨ ಘಂಟೆಕಾಲ ಚೆನ್ನಾಗಿ ಅರೆದು ಒಂದು ಗ್ರೈನ್ ಮಾತ್ರೆಗಳನ್ನು ಮಾಡಬೇಕು.

ಪ್ರಮಾಣ—೧ ವಟಿಯಂತೆ ಬೆಳಿಗ್ಗೆ ಮತ್ತು ಸಂಜೆ ನೀರು ಅಥವಾ ಮಜ್ಜಿಗೆಯೊಂದಿಗೆ ಕೊಡಬೇಕು.

ಉಪಯೋಗ—ಅಗ್ನಿಮಾಂದ್ಯ, ಆಮಾತೀಸಾರ, ವಾತರೋಗ ಮುಂತಾದುವನ್ನು ಹೋಗಲಾಡಿಸುತ್ತದೆ. ದೀಪನ, ಪಾಚನ ಮತ್ತು ಶೂಲ ಹರವಾದುದು.

**೫೪. ಆನಂದಭೈರವರಸ** (ಬಸವರಾಜೀಯಂ)

ಶುದ್ಧ ಹಿಂಗುಲ, ಶುದ್ಧ ವತ್ಸನಾಭಿ, ಶುಂಠಿ, ಟಂಕಣ ಇವು ಒಂದೊಂದು ತೊಲ. ಮೆಣಸು ಮತ್ತು ಹಿಪ್ಪಲಿ ಎರಡೆರಡು ತೊಲ. ಮಾದಳದರಸದಲ್ಲಿ

(ಅಥವಾ ನಿಂಬೆಹಣ್ಣಿನ) ಒಂದು ವಾರ ಒಂದೇ ಸಮವಾಗಿ ಅರೆದು ಗುಂಜಾ ಪ್ರಮಾಣ ಮಾತ್ರೆ ಮಾಡಬೇಕು.

ಪ್ರಮಾಣ—೧ ರಿಂದ ೨ ಮಾತ್ರೆ ಮಕ್ಕಳಿಗೆ ಅರ್ಧ ಮಾತ್ರೆ. ದಿನಕ್ಕೆ ಎರಡು ಅಥವಾ ಮೂರು ಸಲ ವಿವಿಧ ಅನುಪಾನಗಳಲ್ಲಿ ಕೊಡಬೇಕು.

ಉಪಯೋಗ—ಜ್ವರ, ಉಶ್ಲೇಷ್ಮಗಳಲ್ಲಿ ಹಸಿಶುಂಠಿ, ಜೇನುತುಪ್ಪ ಗಳೊಂದಿಗೆ; ರಕ್ತಾತಿಸಾರ, ಜ್ವರಾತಿಸಾರ, ಗ್ರಹಣಿಗಳಲ್ಲಿ ಕೊಡಸಿಗೆ, ಜೀರಿಗೆ ಮತ್ತು ದಾಳಿಂಬೆ ಗಳೊಂದಿಗೆ, ಜ್ವರಗಳಲ್ಲಿ ಗುಡೂಚೀ ಕ್ವಾಥದೊಡನೆ ಕೊಡಬೇಕು.

## ೫೫. ಇಚ್ಛಾಭೇದಿರಸ

ಶುದ್ಧ ಹಿಂಗುಲ ೫ ತೊಲ, ಹುರಿದ ಸೂರತಿಬಿಳಿಗಾರ ೧೦ ತೊಲ, ಗಜ್ಜುಗದ ಬೀಜ ೧೦ ತೊಲ, ಮುತ್ತುಗದ ಬೀಜ ೧೦ ತೊಲ, ಅಳಲೆಕಾಯಿ ಸಿಪ್ಪೆ ೧೦ ತೊಲ, ತಾರೆಕಾಯಿ ಸಿಪ್ಪೆ ೧೦ ತೊಲ, ನೆಲ್ಲೀಚೆಟ್ಟು ೧೦ ತೊಲ, ಶುದ್ಧ ಜಾಪಾಳ ೩೦ ತೊಲ ಎಲ್ಲವನ್ನೂ ಚೆನ್ನಾಗಿ ಚೂರ್ಣಿಸಿ ಗರುಗದ ಸೊಪ್ಪಿನರಸ ದಲ್ಲರೆದು ಒಂದು ಗುಂಜಿಯಷ್ಟು ಮಾತ್ರೆಗಳನ್ನು ಮಾಡಬೇಕು.

ಪ್ರಮಾಣ—೧ ರಿಂದ ೨ ಮಾತ್ರೆಯನ್ನು ಬಿಸಿ ನೀರಿನೊಡನೆ ಸೇವಿಸ ಬೇಕು. ಹುಡುಗರಿಗೆ ಅರ್ಧ ಪ್ರಮಾಣ.

ಉಪಯೋಗ—ವಿರೇಚನಕಾರಿ. ಕೋಷ್ಠದಲ್ಲಿರುವ ಸಣ್ಣ ಸಣ್ಣ ಕ್ರಿಮಿ ಗಳನ್ನು ಹೋಗಲಾಡಿಸಿ ವಾತಾನುಲೋಮನಮಾಡುವುದು.

## ೫೬. ಮಹಾಜ್ವರಾಂಕುಶರಸ (ಬಸವರಾಜೀಯಂ)

ಶುದ್ಧರಸ, ಶುದ್ಧಗಂಧಕ, ಶುದ್ಧವತ್ಸನಾಭಿ ಇವು ಒಂದೊಂದು ತೊಲ; ಶುದ್ಧ ಉಮ್ಮತ್ತಿಬೀಜ ೩ ತೊಲ, ಶುಂಠಿ ೪ ತೊಲ, ಹಿಪ್ಪಲಿ ೪ ತೊಲ ಮತ್ತು ಮೆಣಸು ೪ ತೊಲ ಮೊದಲು ಕಜ್ಜಲಿಯನ್ನು ಮಾಡಿ ಉಳಿದ ದ್ರವ್ಯಗಳ ಸೂಕ್ಷ್ಮ ಚೂರ್ಣವನ್ನು ಬೆರಸಿ ಎಲ್ಲವನ್ನೂ ನಿಂಬೆಹುಳಿಯಲ್ಲಿ ಮೂರು ದಿನ ಅರೆದು ಗುಂಜಾಪ್ರಮಾಣ ಮಾತ್ರೆಗಳನ್ನು ಮಾಡಬೇಕು.

ಪ್ರಮಾಣ—೧ರಿಂದ ೨ ಮಾತ್ರೆ ದಿನಕ್ಕೆ ಎರಡು ಅಥವಾ ಮೂರು ಸಲ ಜೇನುತುಪ್ಪ ಅಥವಾ ನೀರು ಅನುಪಾನದೊಡನೆ ಕೊಡಬೇಕು

ಉಪಯೋಗ—ವಿಷಮಜ್ವರ ಮತ್ತು ಸನ್ನಿಪಾತಜ್ವರಗಳನ್ನು ಹೋಗಲಾಡಿಸುತ್ತದೆ. ಸನ್ನಿಪಾತಜ್ವರದಲ್ಲಿ ಜ್ಞಾನತಪ್ಪಿದ್ದರೆ ಅಥವಾ ಪ್ರಲಾಪವಿದ್ದರೆ ಈ ಮಾತ್ರೆಯನ್ನು ನೀರಿನಲ್ಲರೆದು ಅಂಜನ ಹಾಕಬಹುದು.

**೫೭. ವಾತಗಜಾಂಕುಶರಸ** (ಬಸವರಾಜೀಯಂ)

ಶುದ್ಧರಸ ೮ ತೊಲ, ಶುದ್ಧ ಇಟ್ಟೇಬೀಜಚೂರ್ಣ ೮ ತೊಲ, ಶುದ್ಧಗಂಧಕ ೩ ತೊಲ, ತ್ರಿಕಟುಚೂರ್ಣ ೩ ತೊಲ, ತ್ರಿಫಲಾಚೂರ್ಣ ೩ ತೊಲ; ಮೊದಲು ರಸಗಂಧಕ ಕಜ್ಜಲಿಯನ್ನು ಮಾಡಿ ಉಳಿದ ದ್ರವ್ಯಗಳ ಚೂರ್ಣಗಳನ್ನು ಸೇರಿಸಿ ನಿಂಬೆಹಣ್ಣಿನ ರಸದಲ್ಲರೆದು ಗುಂಜಾಮಾತ್ರ ವಟಿಗಳನ್ನು ಮಾಡಬೇಕು.

ಪ್ರಮಾಣ—೧ ರಿಂದ ೨ ಮಾತ್ರೆ ದಿನಕ್ಕೆರಡು ಸಲ; ಊಟಕ್ಕೆ ಅರ್ಧ ಘಂಟೆ ಮೊದಲು.

ಉಪಯೋಗ—ವಾತಹರ ಮತ್ತು ದೀಪನವಾದುದು. ಆಮವಾತ ಮತ್ತು ಊರುಸ್ತಂಭಗಳಲ್ಲಿ ಹಸಿಶುಂಠಿರಸ ಮತ್ತು ಜೇನುತುಪ್ಪಗಳೊಂದಿಗೆ ಕೊಡಬೇಕು.

**೫೮. ವಾತರಾಕ್ಷಸ** (ವೈ.ಚಿಂ.)

ರಸಭಸ್ಮ, ಶುದ್ಧಗಂಧಕ, ಕಾಂತಸಿಂಧೂರ, ಅಭ್ರಕಭಸ್ಮ ಮತ್ತು ತಾಮ್ರಭಸ್ಮ; ಮೊದಲು ರಸಭಸ್ಮ ಮತ್ತು ಗಂಧಕಗಳನ್ನು ಅರೆದು ಅನಂತರ ಭಸ್ಮಗಳನ್ನು ಹಾಕಿ ಬಿಳಿಕೊಮ್ಮೆರಸ, ಚಿತ್ರಮೂಲ ಕಷಾಯ, ಅಮೃತಬಳ್ಳಿ ಕಷಾಯ, ತುಳಸೀರಸ ಮತ್ತು ತ್ರಿಕಟುಕ್ವಾಥಗಳಲ್ಲಿ ಮೂರು ಮೂರು ದಿನ ಅರೆದು ಒಣಗಿಸಿ ಶ್ರಾವೆಗಳಲ್ಲಿಟ್ಟು ೩೦ ಬೆರಣಿಗಳಿಂದ ಲಘುಪುಟವನ್ನು ಕೊಡಬೇಕು. ಸ್ವಾಂಗಶೀತಲವಾದ ಮೇಲೆ ಔಷಧವನ್ನು ನುಗ್ಗೆ ಅಥವಾ ಬಿಳಿಕೊಮ್ಮೆರಸದಲ್ಲರೆದು ಗುಂಜಾಪ್ರಮಾಣ ಮಾತ್ರೆಗಳನ್ನು ಮಾಡಬೇಕು.

ಪ್ರಮಾಣ—೧ ರಿಂದ ೨ ಮಾತ್ರೆ ದಿನಕ್ಕೆ ಎರಡು ವೇಳೆ.

ಉಪಯೋಗ—ಊರುಸ್ತಂಭ, ವಾತರಕ್ತ, ಆಕ್ಷೇಪ, ಆಮವಾತ ರೋಗಗಳನ್ನು ಹೋಗಲಾಡಿಸುವುದು.

## ೫೯. ರಜಃಪ್ರವರ್ತಿನೀವಟೀ (ಆ.ವಿ)

ಟಂಕಣ, ಹಿಂಗು, ಕಾಸೀಸಸಿಂಧೂರ, ಮುಸಾಂಬರ ಇವನ್ನು ಸಮಭಾಗ ಹಾಕಿ ಲೋಳಿಸರಂದ ಬೇರಿನ ರಸದಲ್ಲರೆದು ೫ ಗ್ರ್ರೈನ್ ವಟಿಗಳನ್ನು ಮಾಡಬೇಕು.

ಪ್ರಮಾಣ—೧ ರಿಂದ ೨ ಮಾತ್ರೆಗಳನ್ನು ದಿನಕ್ಕೆ ಮೂರು ಸಲ ಕೊಡ ಬೇಕು.

ಉಪಯೋಗ—ನಷ್ಟಾರ್ತವ ಮತ್ತು ಪೀಡಿತಾರ್ತವಗಳನ್ನು ಹೋಗ ಲಾಡಿಸುವುದು.

## ೬೦. ಪ್ರದರಾರಿರಸ

ಶುದ್ಧರಸ, ಶುದ್ಧ ಗಂಧಕ ಪ್ರತ್ಯೇಕ ೧ ತೊಲ, ನಾಗಭಸ್ಮ ೨ ತೊಲ, ದಾರ್ವೀರಸಾಂಜನ ೩ ತೊಲ, ಲೋಧ್ರ ೬ ತೊಲ ಎಲ್ಲವನ್ನೂ ಕ್ರಮವಾಗಿ ಸೇರಿಸಿ ಆಡುಸೋಗೆರಸದಲ್ಲಿ ಆರು ಘಂಟೆಕಾಲ ಅರೆದು ಗುಂಜಾಪ್ರಮಾಣ ವಟಗಳನ್ನು ಮಾಡಬೇಕು.

ಪ್ರಮಾಣ—೧ ರಿಂದ ೨ ಮಾತ್ರೆ ಅಕ್ಕಿ ತೊಳೆದ ನೀರಿನ ಅನುಪಾನದಲ್ಲಿ ಕೊಡಬೇಕು.

ಉಪಯೋಗ—ಶ್ವೇತಪ್ರದರ, ರಕ್ತಪ್ರದರಗಳನ್ನು ಹೋಗಲಾಡಿಸುವುದು.

## ೬೧. ತ್ರಿಭುವನಕೀರ್ತಿರಸ

ಶುದ್ಧ ಹಿಂಗುಲ, ಶುದ್ಧ ವತ್ಸನಾಭಿ, ಶುಂಠಿ, ಮೆಣಸು, ಹಿಪ್ಪಲಿ, ಹುರಿದ ಟಂಕಣ, ಮೋಡಿ (ಜೀರಿಗೆ ಮತ್ತು ಸೋಂಪುಬೀಜ—ವೃದ್ಧ ವೈದ್ಯರ ಸಂಪ್ರ ದಾಯದಂತೆ) ಎಲ್ಲವನ್ನೂ ಸಮಭಾಗ ಸೇರಿಸಿ ತುಳಸೀರಸ, ಹಸೀಶುಂಠಿರಸ ಮತ್ತು ಉಮ್ಮತ್ತಿರಸಗಳಲ್ಲಿ ಮೂರು ಮೂರು ಭಾವನೆಕೊಟ್ಟು ಒಂದೊಂದು ಗ್ರ್ರೈನ್ ವಟಿಗಳನ್ನು ಮಾಡಬೇಕು.

ಪ್ರಮಾಣ—ಹೊತ್ತಿಗೆ ಒಂದು ಮಾತ್ರೆಯಂತೆ ಎರಡು ಹೊತ್ತು ಅನು ಪಾನಭೇದದಿಂದ.

ಉಪಯೋಗ—ವಾತ ಮತ್ತು ಕಫಪ್ರಧಾನ ಜ್ವರ, ವಿಷಮಜ್ವರ, ಕಫ ಪ್ರಧಾನ ಸನ್ನಿಪಾತಜ್ವರಗಳನ್ನು ಹೋಗಲಾಡಿಸುವುದು.

## ೬೨. ಸೂತಶೇಖರರಸ (ಯೋ.ರ.)

ಶುದ್ಧರಸ, ಶುದ್ಧಗಂಧಕ, ಸುವರ್ಣಭಸ್ಮ, ಟಂಕಣ, ಶುದ್ಧವತ್ಸನಾಭಿ, ತ್ರಿಕಟು ಚೂರ್ಣ, ಶುದ್ಧ ಉಮ್ಮತ್ತಿ ಬೀಜ, ತಾಮ್ರಭಸ್ಮ, ಚಾತುರ್ಜಾತಕ ಚೂರ್ಣ, ಶಂಖಭಸ್ಮ, ಬಿಲ್ವದ ತಿರುಳು ಮತ್ತು ಕಚೋರ; ಸುವರ್ಣಭಸ್ಮ (ಅಥವಾ ಸುವರ್ಣರೇಖು) ಮತ್ತು ರಸಗಳನ್ನು ಅರೆದು ಗಂಧಕ ಹಾಕಿ ಕಜ್ಜಲಿ ಮಾಡಿ ಅನಂತರ ಇತರ ಭಸ್ಮಗಳನ್ನೂ ಆಮೇಲೆ ಉಳಿದ ದ್ರವ್ಯಗಳನ್ನೂ ಸೇರಿಸಿ ಭೃಂಗರಾಜರಸದಲ್ಲಿ ಮರ್ದನೆ ಮಾಡಿ ಗುಂಜಾ ಪ್ರಮಾಣ ಮಾತ್ರೆಗಳನ್ನು ಮಾಡಬೇಕು.

ಪ್ರಮಾಣ—೧ ರಿಂದ ೨ ಮಾತ್ರೆ.

ಉಪಯೋಗ—ದೀಪನ, ಪಾಚನ ಮತ್ತು ರಸಾಯನವಾದುದು. ಆಮ್ಲಪಿತ್ತ, ಪರಿಣಾಮಶೂಲ, ಗುಲ್ಮ, ಕಾಸ, ಗ್ರಹಣೀ, ಅತೀಸಾರ, ಶ್ವಾಸ, ರಾಜಯಕ್ಷ್ಮ ಮುಂತಾದ ರೋಗಗಳನ್ನು ಹೋಗಲಾಡಿಸುತ್ತದೆ.

# ಅಂಜನ

## ೬೩. ನಾರಿಕೇಳಾಂಜನ (ಯೋ.ರ.)

ಮರದರಿಸಿನ ತೊಗಟೆ, ಅಳಲೆಕಾಯಿ, ತಾರೆಕಾಯಿ, ನೆಲ್ಲೀಕಾಯಿ ಮತ್ತು ಅತಿಮಧುರ ಇವನ್ನು ಸಾಮಾನ್ಯ ಸ್ಥೂಲಚೂರ್ಣ ಮಾಡಿ ೫ ತೊಲ ಚೂರ್ಣಕ್ಕೆ ಅಳತೆ ಎರಡೂವರೆ ಸೇರು ಎಳ್ನೀರನ್ನು ಹಾಕಿ ಮೃದ್ವಗ್ನಿಯಿಂದ ಅಷ್ಟಾವಶೇಷವಾಗಿ ಕಾಯಿಸಿ ಶೋಧಿಸಬೇಕು. ಈ ಕ್ವಾಥವನ್ನು ಪುನಃ ಗಟ್ಟಿಯಾಗುವವರೆಗೂ ಮೃದ್ವಗ್ನಿಯಿಂದಲೇ ಕಾಯಿಸಿ ಇಳಿಸಿ ಆರಿದನಂತರ ಪಚ್ಚಕರ್ಪೂರ, ಸೈಂಧವಲವಣಗಳನ್ನು ಸೂಕ್ಷ್ಮ ಚೂರ್ಣಮಾಡಿ ಎರಡು ತೊಲೆಯಷ್ಟನ್ನೂ ಚಿಟ್ಟೆ ಜೇನುತುಪ್ಪವನ್ನೂ ಸೇರಿಸಿ ಅರೆದು ಶೀಸೆಯಲ್ಲಿಡಬೇಕು.

ಉಪಯೋಗ—ನೇತ್ರಾಭಿಷ್ಯಂದ, ಕಣ್ಣುನವೆ, ಶಿರಃಶೂಲೆಗಳಲ್ಲಿ ಕಣ್ಣಿಗೆ ಅಂಜನ ಹಾಕಲು ಉಪಯೋಗವಾಗಿದೆ.

# ತೈಲಗಳು

## ೬೪. ಆಮವಾತತೈಲ (ಸ ಯೋ.)

ಚಂಗಲ್ಕೋಷ್ಟ, ಶುಂಠಿ, ಬಜೆ, ನುಗ್ಗೆಚೆಕ್ಕೆ, ಬೆಳ್ಳುಳ್ಳಿ, ತುರುಬೆ ಬೇರು, ದೇವದಾರು, ಸಾಸಿವೆ, ಬಿಳಿಗುಗ್ಗುಳು ಇವು ಪ್ರತ್ಯೇಕ ೧ ಪಲ, ಅಚ್ಚಎಳ್ಳೆಣ್ಣೆ ೧೬ ಪಲ, ಹುಣಿಸೇ ಎಲೆ ಸ್ವರಸ ೧೬ ಪಲ, ಮಸ್ತು ೧೬ ಪಲ. ಮತ್ತು ಮೊದಲಿನ ಒಂಬತ್ತು ದ್ರವ್ಯಗಳನ್ನು ನೀರಿನಲ್ಲಿ ಕಲ್ಕಮಾಡಿ ದ್ರವದ್ರವ್ಯಗಳಿಗೆ ಸೇರಿಸಿ ತೈಲಾವಶೇಷ ಖರಪಾಕದಲ್ಲಿ ಕಾಯಿಸಿ ಶೋಧಿಸಬೇಕು. ವಾತಶ್ಲೇಷ್ಮ ಗಳಿಂದಾದ ತೋದ, ಕಂಡೂ, ಸಂಧಿಶೋಥ ಮತ್ತು ಶೂಲೆಗಳನ್ನು ಹೋಗ ಲಾಡಿಸುತ್ತದೆ.

## ೬೫ ಭೃಂಗಾಮಲಕತೈಲ (ಸ. ಯೋ.)

ಗರುಗದ ರಸ, ನೆಲ್ಲೀಕಾಯಿಸ್ವರಸ, ಎಳ್ಳೆಣ್ಣೆ ಇವು ಪ್ರತ್ಯೇಕ ೧ ಪ್ರಸ್ಥ, ಹಸುವಿನ ಹಾಲು ೪ ಪ್ರಸ್ಥ, ಅತಿಮಧುರಕಲ್ಕ ೧ ಪಲ ಎಲ್ಲವನ್ನೂ ಬೆರಸಿ ಮಧ್ಯಪಾಕದಲ್ಲಿ ತೈಲ ಸಿದ್ಧವಾಗುವಂತೆ ಕಾಯಿಸಿ ಶೋಧಿಸಬೇಕು.

ಉಪಯೋಗ—ಅಪಸ್ಮಾರ ಮತ್ತು ಅರೆತಲೆನೋವಿಗೆ ೧೫ ರಿಂದ ೩೦ ತೊಟ್ಟು ತೈಲವನ್ನು ನಸ್ಯಮಾಡಿಸಬೇಕು. ಕಣ್ಣುರೋಗಗಳಲ್ಲಿ ಈ ತೈಲವನ್ನು ಅಂಗಾಲುಗಳಿಗೆ ತಿಕ್ಕಬೇಕು. ಅಭ್ಯಂಗ ಮಾಡುವುದರಿಂದ ನಿದ್ದೆ ಚೆನ್ನಾಗಿ ಬರುತ್ತದೆ.

## ೬೬. ಕನಕತೈಲ

ಉನ್ಮತ್ತಿಸೊಪ್ಪಿನ ರಸ ಅಳತೆ ೮ ಸೇರು, ಅಚ್ಚಎಳ್ಳೆಣ್ಣೆ ಅಳತೆ ೨ ಸೇರು, ದಾಲ್ಚಿನ್ನಿ ೨॥ ತೊಲ, ಅರತಿಕರ್ಪೂರ ೨॥ ತೊಲ, ಜಾಯಿಕಾಯಿ ೩ ತೊಲ. ದಾಲ್ಚಿನ್ನಿ ಜಾಯಿಕಾಯಿಗಳನ್ನು ಕಲ್ಕಮಾಡಿ ದ್ರವ್ಯಗಳಿಗೆ ಸೇರಿಸಿ ಖರಪಾಕ ದಲ್ಲಿ ಇಳಿಸಿ ಕರ್ಪೂರವನ್ನು ಸೇರಿಸಬೇಕು. ಬಾಹ್ಯೋಪಯೋಗಕ್ಕೆ ಮಾತ್ರ. ವಾಯುನೋವು, ಅಭಿಘಾತ, ಶೋಧಗಳ ಮೇಲೆ ತಿಕ್ಕಿ ಬಿಸಿನೀರಿನ ಶಾಖವನ್ನು ಕೊಡಬೇಕು.

## ೬೭. ಕರ್ಪೂರಾದಿತ್ಯೆಲ

ಅಜಮೋದಕ್ವಾಥ ೧ ಪ್ರಸ್ಥ, ಕೊಬ್ಬರಿ ಎಣ್ಣೆ ೬ ಔನ್ಸ್ ಎರಡನ್ನೂ ಕಾಯಿಸಿ ತೈಲ ಮಾತ್ರ ಉಳಿದಮೇಲೆ ಶೋಧಿಸಿ ಕರ್ಪೂರವನ್ನು ಬೆರಸಬೇಕು.

ಸಂಧಿವಾತಗಳಲ್ಲಿ ತಿಕ್ಕಿ ಬಿಸಿನೀರು ಶಾಖ ಕೊಡುವುದರಿಂದ ನೋವು ಮತ್ತು ಊತಗಳು ಹೋಗುತ್ತವೆ ನ್ಯೂಮೋನಿಯಾದಲ್ಲಿ ಎದೆ ಬೆನ್ನುಗಳಿಗೆ ತಿಕ್ಕಿ ಶಾಖ ಕೊಡಬೇಕು.

## ೬೮. ಪಿಪ್ಪಲ್ಯಾದ್ಯನುವಾಸನತೈಲ

ಹಿಪ್ಪಲಿ, ಮಗ್ಗಾರೆಬೀಜ, ಬಿಲ್ವದ ತಿರುಳು, ಸಬ್ಬಸಿಗೆಬೀಜ, ಅತಿ ಮಧುರ, ಬಜೆ, ಚಂಗಲ್ಕೋಷ್ಠ, ಕಚೋರ, ಪುಷ್ಕರಮೂಲ, ಚಿತ್ರಮೂಲ, ದೇವದಾರು ಇಷ್ಟನ್ನೂ ಸಮಭಾಗ ನೀರಿನಿಂದ ಕಲ್ಕಮಾಡಿ ಇದಕ್ಕೆ ನಾಲ್ಕರಷ್ಟು ಅಚ್ಚಳ್ಳೆಣ್ಣೆ, ಎಣ್ಣೆಗೆ ಎರಡರಷ್ಟು ಹಾಲನ್ನೂ ಹಾಕಿ ಕ್ಷೀರಾವಶೇಷ ಮಧ್ಯ ಪಾಕದಲ್ಲಿ ಕಾಯಿಸಿ ಶೋಧಿಸಬೇಕು.

ಉಪಯೋಗ—ಅರ್ಶ, ಮೂಢವಾತ, ಗುದನಿಃಸರಣ, ಗುದಶೂಲ, ಮೂತ್ರಕೃಚ್ಛ್ರ, ಪ್ರವಾಹಿಕಾ ಪಿಚ್ಛಾಸ್ರಾವ ಮುಂತಾದುವನ್ನು ಹೋಗ ಲಾಡಿಸುತ್ತದೆ.

## ೬೯. ಮಧುಯಷ್ಟಿತೈಲ (ಅ.ಹೃ. ವಾತರಕ್ತ)

ಅತಿಮಧುರ ೧೬ ಸೇರು, ಅಚ್ಚಳ್ಳೆಣ್ಣೆ ಅಳತೆ ೮ ಸೇರು, ಹಾಲು ೮ ಸೇರು; ಅತಿಮಧುರ ಕಷಾಯಕ್ಕೆ ಎಣ್ಣೆ, ಹಾಲುಗಳನ್ನು ಸೇರಿಸಿ ಶ್ರೀಗಂಧ, ದಾಲ್ಚಿನ್ನಿ, ನಖ, ಮುಡಿವಾಳ, ಮಂಜಿಷ್ಠೆ, ಮಾಗಳಿ, ನೆಲಮಾಗಳಿ, ಅಗಿಲು, ಜಟಾ ಮಾಂಸಿ, ಸಬ್ಬಸಿಗೆಬೀಜ ಮತ್ತು ಲವಂಗಪತ್ರೆ ಇವನ್ನು ಐದೈದು ತೊಲದಂತೆ ತೆಗೆದುಕೊಂಡು ಕಲ್ಕಮಾಡಿ ಹಾಕಿ ಮಧ್ಯಪಾಕದಲ್ಲಿ ಇಳಿಸಬೇಕು. ನಸ್ಯ, ಉದ್ವರ್ತನ, ವಸ್ತಿ ಮುಂತಾದುವುಗಳಲ್ಲಿ ಉಪಯೋಗ.

## ೭೦. ಸುದರ್ಶನತೈಲ

ಜೇನುಮಯಣ ೨॥ ಸೇರು, ಕವಡೆಸಾಂಬ್ರಾಣಿ ೨॥ ಸೇರು, ಗುಗ್ಗುಳು, ರುಮ್ಮಿಮಸ್ತಕಿ, ಲವಂಗ, ಆರತಿಕರ್ಪೂರ, ದೇವದಾರು ಚೆಕ್ಕೆ ಪ್ರತಿಯೊಂದೂ

೨೦ ತೊಲ. ಇವನ್ನೆಲ್ಲಾ ಸಣ್ಣಗೆ ತುಂಡುಮಾಡಿ ಡಮರು ಯಂತ್ರದಲ್ಲಿ ಹಾಕಿ ಕಾಯಿಸಿ ತೈಲವನ್ನು ತೆಗೆಯಬೇಕು. ದಂತಶೂಲ, ಶಿರಃಶೂಲ, ಸಂಧಿ ಶೂಲಗಳಿಗೆ ಹಚ್ಚಲು ಅವು ಜಾಗ್ರತೆ ಗುಣವಾಗುವುವು.

**೭೧. ಜಾತ್ಯಾದಿತೈಲ** (ಅ.ಹೃ ಉ. ೨೫)

ಜಾಜೀಸೊಪ್ಪು, ಬೇವಿನಸೊಪ್ಪು, ಕಹಿ ಪಡವಲ, ಕಟುಕರೋಹಿಣಿ, ಮರದರಸಿನ, ಸೊಗದೆಬೇರು, ಮಂಜಿಷ್ಠೆ, ಅಳಲೆಕಾಯಿ, ಅತಿಮಧುರ, ಹೊಂಗೆಬೀಜ; ಮೊದಲು ಮೂರು ಪದಾರ್ಥಗಳ ಕ್ವಾಥಕ್ಕೆ ನಾಲ್ಕನೆಯ ಒಂದು ಭಾಗ ಕೊಬ್ಬರಿ ಎಣ್ಣೆ, ಎಣ್ಣೆಯ ಕಾಲು ಭಾಗ ಉಳಿದ ಪದಾರ್ಥಗಳ ಕಲ್ಕ ಎಲ್ಲವನ್ನೂ ಸೇರಿಸಿ ತೈಲ ಮಾಡಿ ಶೋಧಿಸಿ ಬಿಸಿಯಾಗಿರುವಾಗಲೇ ಕಲ್ಕದ ಎಂಟನೆಯ ಒಂದು ಭಾಗ ಜೇನುಮಯಣವನ್ನು ಹಾಕಬೇಕು. ಎಣ್ಣೆಯ ಬದಲು ತುಪ್ಪವನ್ನು ಹಾಕಿ ಘೃತವನ್ನು ಮಾಡಬಹುದು. ಮಯಣ ವನ್ನು ಹೆಚ್ಚಾಗಿ ಹಾಕಿ ಮುಲಾಮನ್ನು ಮಾಡಬಹುದು.

ಉಪಯೋಗ—ನಾಡೀವ್ರಣ, ಮರ್ಮವ್ರಣ, ಕ್ಲೇದವಿರುವ ವ್ರಣ, ಗಂಭೀರವ್ರಣ ಮುಂತಾದುವು ಚೆನ್ನಾಗಿ ಗುಣಹೊಂದುವುವು.

**೭೨. ಕ್ಷಾರತೈಲ** (ಅ.ಹೃ.ಉ. ೧೮)

ಒಣಗಿದ ಮುಲ್ಲಂಗಿಕ್ಷಾರ, ಶುಂಠಿಕ್ಷಾರ, ಹಿಂಗು, ಬೆಳ್ಳುಳ್ಳಿ, ಸಬ್ಬಸಿಗೆ ಬೀಜ, ಬಜೆ, ಚಂಗಲ್ಕೋಷ್ಠ, ಮರದರಿಸಿನ, ನುಗ್ಗೆಚಿಕ್ಕೆ, ರಸಾಂಜನ (ದಾರ್ವಿ), ಸೌವರ್ಚಲಲವಣ, ಯವಕ್ಷಾರ, ಸರ್ಜಕ್ಷಾರ, ಔದ್ಭಿದಲವಣ, ಸೈಂಧವಲವಣ, ಭೂರ್ಜಪತ್ರೆ, ಗ್ರಂಥಿಕತಗರ, ಬಿಡಲವಣ, ಕೊನ್ನಾರಿಗೆಡ್ಡೆ ಇವನ್ನು ಪ್ರತ್ಯೇಕ ೧ ತೊಲ ಹಾಕಿ ಕಲ್ಕಮಾಡಿ ೬೪ ತೊಲ ಅಚ್ಚೆಳ್ಳೆಣ್ಣೆ ಸೇರಿಸಿ ಇದಕ್ಕೆ ಮಧುಶುಕ್ತ, ಮಾದಳರಸ ಮತ್ತು ಬಾಳೆಗೆಡ್ಡೆರಸ ಪ್ರತ್ಯೇಕ ೨೫೬ ತೊಲಗಳಂತೆ ಹಾಕಿ ಮಧ್ಯಪಾಕದಲ್ಲಿಳಿಸಬೇಕು.

ಉಪಯೋಗ—ಕರ್ಣಸ್ರಾವ, ಕರ್ಣನಾದ, ಬಾಧಿರ್ಯಗಳಲ್ಲಿ ಪೂರ ಣಕ್ಕೂ ಪೀನಸದಲ್ಲಿ ನಾವನಕ್ಕೂ ಶ್ರೇಷ್ಠವಾದುದು.

**೭೩. ಪಿಂಡತೈಲ** (ಚ.ಚಿ. ವಾತರಕ್ತ)

ಮಂಜಿಷ್ಠೆ, ಸೊಗದೇಬೇರು ಇವನ್ನು ಪ್ರತ್ಯೇಕ ೪೦ ತೊಲ ಹಾಕಿ ಕ್ವಾಥಮಾಡಿ ಶೋಧಿಸಿ ಕಲ್ಕಕ್ಕೆ ಇವನ್ನೇ ಪ್ರತ್ಯೇಕ ೨೦ ತೊಲ ಹಾಕಿ

ಹರಳೆಣ್ಣೆ ೩·|· ವೀಸೆ ಹಾಕಿ ತೈಲಾವಶೇಷ ಕಾಯಿಸಿ ಶೋಧಿಸಬೇಕು. ಈ ತೈಲವನ್ನು ಅಗಲವಾದ ಪಾತ್ರೆಯಲ್ಲಿ ಪುನಃ ಕಾಯಿಸುತ್ತಿರುವಾಗ ೨೫ ತೊಲ ಸರ್ಜರಸ ಚೂರ್ಣ ಸ್ವಲ್ಪಸ್ವಲ್ಪವಾಗಿ ಸೇರಿಸಿ ಎಣ್ಣೆ ಉಕ್ಕದಂತೆ ಸೌಟಿನಿಂದ ಕಲಸುತ್ತಿರಬೇಕು. ಸರ್ಜರಸವು ಕರಗಿ ಮಿಶ್ರವಾದನಂತರ ೨೫ ತೊಲ ಜೇನು ಮಯಣವನ್ನು ಸೇರಿಸಿ ಅದು ಮಿಲನವಾದನಂತರ ಬಿಸಿಯಲ್ಲೇ ಒಟ್ಟೆಯಿಂದ ಶೋಧಿಸಬೇಕು. ಹರಳೆಣ್ಣೆಗೆ ಬದಲಾಗಿ ಅಚ್ಚಳ್ಳೆಣ್ಣೆಯನ್ನು ಹಾಕಿ ಅಭ್ಯಂಗಕ್ಕೆ ಉಪಯೋಗಿಸಬಹುದು. ಹರಳೆಣ್ಣೆಯನ್ನು ಅರ್ಧ ಪ್ರಮಾಣ ಹಾಕಿದರೆ ಮುಲಾಮಿನಂತೆ ಗಟ್ಟಿಯಾಗುವುದು.

ಉಪಯೋಗ— ವಾತರಕ್ತ, ಪಾದದಾರಿ, ದಗ್ಧವ್ರಣ, ಅಂಡವೃದ್ಧಿ ಮತ್ತು ಪುರಾಣವ್ರಣಗಳಲ್ಲಿ ಲೇಪನಗಳಿಗಾಗಿ ಬಹಳ ಉಪಯೋಗವಾಗಿದೆ.

## ಘೃತಗಳು

### ೭೪. ಚಾಂಗೇರ್ಯಾದಿಘೃತ

ಪುಲ್ಲಂಪುರಚಿರಸ ಅಳತೆ ನಾಲ್ಕು ಸೇರು, ಹಸುವಿನ ತುಪ್ಪ ಅಳತೆ ಒಂದು ಸೇರು ; ಕಲ್ಕದ್ರವ್ಯಗಳು—ಶುಂಠಿ, ಮೋಡಿ, ಚಿತ್ರಮೂಲ, ಗಜಹಿಪ್ಪಲಿ, ನೆಗ್ಗಿಲು, ಸಣ್ಣಹಿಪ್ಪಲಿ, ಧನಿಯ, ಬಿಲ್ವದ ತಿರುಳು, ಅಗಳುಶುಂಠಿ ಮತ್ತು ಓಮ ಇವು ಪ್ರತ್ಯೇಕ ಮೂರು ತೊಲ. ಹಸುವಿನ ಮೊಸರು ಅಳತೆ ನಾಲ್ಕು ಸೇರು ; ಎಲ್ಲವನ್ನೂ ಹಾಕಿ ಘೃತಾವಶೇಷ ಕಾಯಿಸಿ ಮಧ್ಯಪಾಕದಲ್ಲಿ ತೆಗೆಯಬೇಕು.

ಪ್ರಮಾಣ—೧ ರಿಂದ ೨ ಟೀ ಚಮಚ. ದಿನಕ್ಕೆ ಎರಡು ಅಥವಾ ಮೂರು ಸಲ.

ಉಪಯೋಗ—ಕಫ ವಾತ ದೋಷಗಳಿಂದ ಕೂಡಿದ ಅರ್ಶಸ್ಸು, ಗ್ರಹಣೀ ದೋಷ, ಮೂತ್ರಕೃಚ್ಛ್ರ, ಪ್ರವಾಹಿಕಾ, ಗುದಭ್ರಂಶ ಮತ್ತು ಗುದಶೂಲೆಗಳನ್ನು ಪರಿಹರಿಸುತ್ತದೆ.

### ೭೫. ಕಲ್ಯಾಣಘೃತ (ಚ.ಚಿ. ೯)

ದಾಸವಾಳಕ್ಕೆಸಮೂಲ, ತ್ರಿಫಲಾಪ್ರತ್ಯೇಕ, ರೇಣುಕೆಬೀಜ, ದೇವದಾರು, ಏಲಾವಾಲುಕ, ಒಂದೆಲೆಹೊನ್ನೆ, ಮೂರೆಲೆಹೊನ್ನೆ, ಗ್ರಂಥಿಕತಗರ, ಅರಿಸಿನ,

ಮರದರಿಸಿನ, ಸೊಗದೇಬೇರು, ನೆಲವಾಗಳಿ, ಪ್ರಿಯಂಗು, ನೈದಿಲೆಗೆಡ್ಡೆ, ಏಲಕ್ಕಿ, ಮಂಜಿಷ್ಠೆ, ದಂತೀಬೇರು, ದಾಳಿಂಬೆಹಣ್ಣು, ನಾಗಕೇಸರಿ, ತಾಳೀಸ ಪತ್ರೆ, ನೆಲಗುಳ್ಳ, ಜಾಜಿ ಹೂ, ವಾಯುವಿಳಂಗ, ಚಂಗಲ್ಕೋಷ್ಠ, ರಕ್ತ ಚಂದನ ಮತ್ತು ಪದ್ಮಕ ಇವನ್ನು ಪ್ರತ್ಯೇಕ ಕರ್ಷ ಹಾಕಿ ಕಲ್ಕಮಾಡಿ ಒಂದು ಪ್ರಸ್ಥ ಹಸುವಿನ ತುಪ್ಪ ಮತ್ತು ನಾಲ್ಕು ಪ್ರಸ್ಥ ನೀರು ಎಲ್ಲವನ್ನೂ ಕೂಡಿಸಿ ಮಧ್ಯಪಾಕದಲ್ಲಿ ಘೃತವನ್ನು ತಯಾರಿಸಬೇಕು.

ಪ್ರಮಾಣ—೧ ರಿಂದ ೨ ಟೀ ಚಮಚ. ದಿನಕ್ಕೆರಡಾವರ್ತಿ.

ಉಪಯೋಗ—ಅಪಸ್ಮಾರ, ಮೂರ್ಛೆ, ಉನ್ಮಾದ, ಕ್ಷೀಣತೆ ಮುಂತಾದುವುಗಳಲ್ಲಿ ಉತ್ತಮವಾದುದು. ಮೇಧ್ಯ, ರಸಾಯನ ಮತ್ತು ವಾತಹರ ವಾದುದು.

**೭೬. ಷಟ್ಪಲಘೃತ** (ಅ ಹೃ.ಚಿ. ೫)

ಪಂಚಕೋಲ ಪ್ರತ್ಯೇಕ ಒಂದು ಪಲ, ಯವಕ್ಷಾರ ಒಂದು ಪಲ ಇವನ್ನು ನೀರಿನಲ್ಲಿ ಕಲ್ಕಮಾಡಿ ಒಂದು ಪ್ರಸ್ಥ ಹಸುವಿನ ತುಪ್ಪ, ಒಂದು ಪ್ರಸ್ಥ ಹಸುವಿನ ಹಾಲು, ನಾಲ್ಕು ಪ್ರಸ್ಥ ಪಂಚಕೋಲ ಮತ್ತು ಯವಕ್ಷಾರ ಕ್ವಾಥ ಇವುಗಳಿಗೆ ಸೇರಿ ಘೃತಾವಶೇಷ ಮಧ್ಯಪಾಕದಲ್ಲಿ ಇಳಿಸಬೇಕು.

ಪ್ರಮಾಣ—೧ರಿಂದ ೨ ಟೀ ಚಮಚ ದಿನಕ್ಕೆ ಎರಡು ಅಥವಾ ಮೂರು ವೇಳೆ.

ಉಪಯೋಗ—ದೀಪನ, ಸ್ರೋತಶ್ಶೋಧನ ಮತ್ತು ವಾತಹರವಾದುದು. ಗುಲ್ಮ, ಜ್ವರ, ಪ್ಲೀಹ, ಗ್ರಹಣೀ, ಪಾಂಡು, ರಾಜಯಕ್ಷ್ಮ ಮುಂತಾದುವುಗಳಲ್ಲಿ ಶ್ರೇಷ್ಠವಾದುದು.

**೭೭. ಸುಕುಮಾರಘೃತ** (ಅ.ಹೃ.ಚಿ. ೧೩)

ಬಿಳಿಕೊಮ್ಮೆಬೇರು ೧೦೦ ಪಲ, ದಶಮೂಲ ಪ್ರತ್ಯೇಕ ೧ ಪಲ; ನೆಲ ಗುಂಬಳ, ಅಶ್ವಗಂಧ, ಹರಳುಬೇರು, ಶತಾವರೀ, ತೃಣಪಂಚಮೂಲ ಪ್ರತ್ಯೇಕ ೧೦ ಪಲ; ಇವನ್ನು ಜಜ್ಜಿ ನಾಲ್ಕು ದ್ರೋಣ ನೀರಿನಲ್ಲಿ ಹಾಕಿ ಅಷ್ಟಾವಶೇಷ ಕ್ವಾಥಮಾಡಿ ಶೋಧಿಸಬೇಕು. ಇದಕ್ಕೆ ಬೆಲ್ಲ ೩೦ ಪಲ, ಏರಂಡತೈಲ ೧ ಪ್ರಸ್ಥ, ಹಸುವಿನ ತುಪ್ಪ ೩ ಪ್ರಸ್ಥ, ಹಾಲು ೩ ಪ್ರಸ್ಥ ಸೇರಿಸಬೇಕು.

ಕಲ್ಕದ್ರವ್ಯಗಳು—ಹಿಪ್ಪಲಿ, ಮೋಡಿ, ಸೈಂಧವಲವಣ, ಅತಿಮಧುರ, ದ್ರಾಕ್ಷೆ, ಅಜವೋದ ಮತ್ತು ಶುಂಠಿ ಇವು ಪ್ರತ್ಯೇಕ ೩ ಪಲ. ಮಧ್ಯಪಾಕದಲ್ಲಿ ಇಳಿಸಬೇಕು.

ಪ್ರಮಾಣ—೧ ರಿಂದ ೪ ಟೀ ಚಮಚ, ದಿನಕ್ಕೆರಡು ಸಲ ಹಸುವಿನ ಹಾಲಿನೊಡನೆ.

ಉಪಯೋಗ—ಹೊಟ್ಟೆನೋವು, ಮಲಬಂಧ, ಅರ್ಶ, ಗುಲ್ಮ, ಶೋಥ ಮುಂತಾದುವನ್ನು ಹೋಗಲಾಡಿಸುತ್ತದೆ.

## ೭೮. ಫಲಘೃತ (ಅ.ಹೃ.ಉ. ೩-೪)

ಮಂಜಿಷ್ಠೆ, ಚಂಗಲ್ಕೋಷ್ಠ, ಗ್ರಂಥಿಕತಗರ, ತ್ರಿಫಲಾ, ಸಕ್ಕರೆ, ಬಜೆ, ಅರಿಸಿನ, ಮರದರಿಸಿನ, ಅತಿಮಧುರ, ಮೇದಾ, ವೋಮ, ಕಟುಕರೋಹಿಣೀ, ನೆಲಗುಂಬಳ, ಹಿಂಗು, ಕಾಕೋಲೀ, ಅಶ್ವಗಂಧಿ ಇವು ಪ್ರತ್ಯೇಕ ೧ ತೊಲ. ಇವನ್ನು ಕ್ವಾಥ ಮಾಡಿ ಶೋಧಿಸಿ ಇದೇ ದ್ರವ್ಯಗಳ ಕಲ್ಕ ೧೦ ತೊಲ, ಹಾಲು ಅಳತೆ ೩ ಪಾವು, ಹಸುವಿನ ತುಪ್ಪ ಅಳತೆ ೩ ಪಾವು, ಆಷಾಢಿ ಬೇರಿನ ರಸ ಅಳತೆ ೩ ಪಾವು ಹಾಕಿ ಮಧ್ಯಪಾಕದಲ್ಲಿ ಇಳಿಸಬೇಕು.

ಪ್ರಮಾಣ—.||. ದಿಂದ ೧ ತೊಲ, ಹಾಲಿನೊಡನೆ ದಿನಕ್ಕೆರಡು ಸಲ ಸೇವಿಸಬೇಕು.

ಉಪಯೋಗ—ಯೋನಿದೋಷ, ರಜೋದೋಷ, ಗರ್ಭಸ್ರಾವ ಮುಂತಾದ ಗುಹ್ಯರೋಗಗಳನ್ನು ಹೋಗಲಾಡಿಸುವುದು. ಗರ್ಭಪೋಷಣೆಯಾಗುವುದು. ಗಂಡಸರಿಗೂ, ಮಕ್ಕಳಿಗೂ ಬೆಳವಣಿಗೆಗಾಗಿ ಉಪಯೋಗಿಸಬಹುದು.

## ೭೯. ಮಿಶ್ರಕಸ್ನೇಹ (ಅ.ಹೃ.ಚಿ. ೧೪)

ಹಿಪ್ಪಲಿ, ನೆಲ್ಲೀಚೆಟ್ಟು, ದ್ರಾಕ್ಷೆ, ಶ್ಯಾಮಾದಿಗಣ ಪ್ರತ್ಯೇಕ ದ್ರವ್ಯಗಳು ಒಂದೊಂದು ಪಲ; ಕಲ್ಕ ಮಾಡಿ ಹರಳೆಣ್ಣೆ ೧ ಪ್ರಸ್ಥ, ತುಪ್ಪ ೧ ಪ್ರಸ್ಥ, ಹಾಲು ೧೨ ಪ್ರಸ್ಥ ಎಲ್ಲವನ್ನೂ ಸೇರಿಸಿ ಮಧ್ಯಪಾಕದಲ್ಲಿ ಇಳಿಸಿ ಶೋಧಿಸಬೇಕು.

ಪ್ರಮಾಣ—·|· ರಿಂದ ·||· ತೊಲ ಬಿಸಿ ಹಾಲಿನೊಡನೆ ಸೇವಿಸಬೇಕು.

ಉಪಯೋಗ—ವಿರೇಚನವಾಗುವುದು. ಗುಲ್ಮ, ವೃದ್ಧಿ, ವಿದ್ರಧಿ, ಶೂಲ ಮತ್ತು ವಾತವ್ಯಾಧಿಗಳಲ್ಲಿ ಹಿತವಾದುದು.

## ಲೇಹ್ಯಗಳು

### ೮೦. ಅಗಸ್ತ್ಯಹರೀತಕೀ (ಚ ಚಿ. ೧೮)

ದಶಮೂಲಗಳು, ನಸುಗುನ್ನಿಬೇರು, ಗಿರಿಕರ್ಣಿಕೆ ಬೇರು, ಕಚೋರ, ಕಳ್ಳಂಗಡಲೆ ಬೇರು, ಗಜಹಿಪ್ಪಲಿ, ಉತ್ತರಣೆ, ಮೋಡಿ, ಚಿತ್ರಮೂಲ, ಗಂಟು ಪರಂಗಿ, ಪುಷ್ಕರಮೂಲ ಇವು ಪ್ರತ್ಯೇಕ ಎರಡು ಪಲಗಳನ್ನು ಕುಟ್ಟಿ ಐದು ಆಢಕ ನೀರಿನಲ್ಲಿ ಕಾಯಿಸಬೇಕು. ಆ ಪಾತ್ರೆಯಲ್ಲಿ ಒಂದು ಆಢಕ ಯವೆಯನ್ನು ಬಟ್ಟೆಯಲ್ಲಿ ಸಡಿಲವಾಗಿ ಕಟ್ಟಿಹಾಕಬೇಕು; ಒಂದು ನೂರು ಚೆನ್ನಾಗಿ ಬೆಳೆದ ಅಳಲೆಕಾಯಿಗಳನ್ನೂ ಹಾಕಬೇಕು ಯವೆ ಧಾನ್ಯವು ಬೆಂದನಂತರ ಗಂಟನ್ನು ಹಿಂಡಿ ತೆಗೆದುಹಾಕಿ ಕ್ವಾಥವನ್ನು ಶೋಧಿಸಿ ಅದಕ್ಕೆ ೧೦೦ ಪಲ ಬೆಲ್ಲವನ್ನು ಹಾಕಿ ಪಾಕಮಾಡಬೇಕು. ಅಳಲೆಕಾಯಿಗಳನ್ನು ಆರಿಸಿ ಒಣಗಿಸಿ ಮೇಲಿನ ಸಿಪ್ಪೆಯನ್ನು ತೆಗೆದು ಜೊತೆಗೆ ಒಂದು ಕುಡವ ಹಿಪ್ಪಲಿಯನ್ನು ಸೇರಿಸಿ ಸೂಕ್ಷ್ಮಚೂರ್ಣ ಮಾಡಿ ಪಾಕಕ್ಕೆ ಹಾಕಬೇಕು ಅಚ್ಚೆಳ್ಳೆಣ್ಣೆ ೧ ಕುಡವ, ತುಪ್ಪ ೧ ಕುಡವ ಹಾಕಿ ಚೆನ್ನಾಗಿ ಕಲಸಿ ತೆಗೆದಿರಿಸಬೇಕು. ಆರಿದನಂತರ ೧ ಕುಡವ ಜೇನುತುಪ್ಪವನ್ನು ಸೇರಿಸಬೇಕು.

ಪ್ರಮಾಣ—·||· ದಿಂದ ೧ ತೊಲ.

ಉಪಯೋಗ—ರಸಾಯನವಾದುದು. ಎಲ್ಲಾ ಬಗೆಯ ಕಾಸ, ಶ್ವಾಸ, ಹಿಕ್ಕಾಗಳಲ್ಲೂ ಶ್ರೇಷ್ಠವಾದುದು. ಅರ್ಶ, ಗ್ರಹಣೀ, ಹೃದ್ರೋಗ, ಅರುಚಿ ಮುಂತಾದುವನ್ನು ಹೋಗಲಾಡಿಸುತ್ತದೆ. ಬಲವರ್ಣಗಳು ಹೆಚ್ಚುತ್ತವೆ.

### ೮೧. ಕೂಷ್ಮಾಂಡಲೇಹ್ಯ (ಅ.ಹೃ.ಚಿ. ೩)

ಸಿಪ್ಪೆ ಮತ್ತು ತಿರುಳುಗಳನ್ನು ತೆಗೆದುಹಾಕಿ ಉಳಿದ ಬೂದಿಗುಂಬಳ ಕಾಯಿ ೧೨·||· ಸೇ., ಕಲ್ಲುಸಕ್ಕರೆ ೧೨ ||· ಸೇ., ತುಪ್ಪ ೨ ಸೇ., ಜೇನು ತುಪ್ಪ ೧ ಸೇ. ಚೂರ್ಣದ್ರವ್ಯಗಳು—ಹಿಪ್ಪಲಿ ೬ ತೊಲ, ಶುಂಠಿ ೬ ತೊಲ,

ಜೀರಿಗೆ ೬ ತೊಲ, ದಾಲ್ಚಿನ್ನಿ, ಲವಂಗಪತ್ರೆ, ಏಲಕ್ಕಿ, ಧನಿಯ ಮತ್ತು ಮೆಣಸು ಇವು ಪ್ರತ್ಯೇಕ ೧·||· ತೊಲ. ಕುಂಬಳಕಾಯನ್ನು ತುರಿದು ಹಿಂಡಿದ ರಸಕ್ಕೆ ಸಕ್ಕರೆ ಹಾಕಿ ಪಾಕಮಾಡಬೇಕು. ತುರಿಯನ್ನು ಬಿಸಿಲಲ್ಲಿ ಸ್ವಲ್ಪ ಒಣಗಿಸಿ ತುಪ್ಪದಲ್ಲಿ ಕೆಂಪಗೆ ಹುರಿದು ರುಬ್ಬಿ ಪಾಕಕ್ಕೆ ಹಾಕಬೇಕು. ಅನಂತರ ಚೂರ್ಣವನ್ನು ಬೆರಸಿ ಆರಿದಮೇಲೆ ಜೇನುತುಪ್ಪವನ್ನು ಸೇರಿಸಬೇಕು. ಧಾನ್ಯ ರಾಶಿಯಲ್ಲಿ ೧೫ ದಿನಗಳವರೆಗೂ ಇಟ್ಟಿದ್ದು ಅನಂತರ ಹೊತ್ತಿಗೆ ಅರ್ಧದಿಂದ ಒಂದು ತೊಲೆಯುಷ್ಟನ್ನು ಸೇವಿಸುವುದರಿಂದ ಕಾಸ, ಉರಃಕ್ಷತ, ರಕ್ತಪಿತ್ತಗಳು ನಿಲ್ಲುವುವು. ಪುಷ್ಟಿಕರವಾದುದು.

### ೮೨. ವಾಸಾವಲೇಹ್ಯ (ಭೈ.ರ)

ಆಡುಸೋಗೆಸೊಪ್ಪು ೧೧ ಸೇರು, ಬೆಲ್ಲ ೧೦ ಸೇರು.

ಚೂರ್ಣದ್ರವ್ಯಗಳು—ಶುಂಠಿ, ದೇವದಾರು, ಜೀರಿಗೆ, ಧನಿಯ, ಏಲಕ್ಕಿ ದಾಲ್ಚಿನ್ನಿ. ಲವಂಗಪತ್ರೆ, ಮೆಣಸು, ಹಿಪ್ಪಲಿ, ಚವ್ಯ, ಜಾಪತ್ರೆ, ಚಂಗಲ್ಕೋಷ್ಠ ಇವು ಪ್ರತ್ಯೇಕ ೧ ಪಾವು, ಜೇನುತುಪ್ಪ ೧·||· ಸೇರು, ತುಪ್ಪ ೩ ಸೇರು.

ಆಡುಸೋಗೆಸೊಪ್ಪಿನಿಂದ ರಸ ತೆಗೆದು ಬೆಲ್ಲ ಹಾಕಿ ಪಾಕ ಮಾಡಿ ಚೂರ್ಣವನ್ನು ಹಾಕಿ ಕಲಸುತ್ತಾ ತುಪ್ಪವನ್ನು ಸೇರಿಸಿ ಆರಿದನಂತರ ಜೇನುತುಪ್ಪವನ್ನು ಬೆರಸಬೇಕು.

ಉಪಯೋಗ—·||· ರಿಂದ ೧ ತೊಲೆಯುಷ್ಟನ್ನು ಸೇವಿಸುವುದರಿಂದ ಕಾಸ, ಶ್ವಾಸ, ರಕ್ತಪಿತ್ತಗಳು ನಾಶವಾಗುವುವು.

### ೮೩. ಚ್ಯವನಪ್ರಾಶಲೇಹ್ಯ (ಅ.ಹೃ.ಉ. ೩೯)

ದಶಮೂಲಗಳು ಪ್ರತ್ಯೇಕ, ಕಳ್ಳಂಗಡಲೆ ಬೇರು, ಕೊನ್ನಾರಿಗೆಡ್ಡೆ, ಜೀವಕ, ಋಷಭಕ, ನೈದಿಲೆಗೆಡ್ಡೆ, ಕಾಡುದ್ದು, ಕಾಡುಹೆಸರು, ಹಿಪ್ಪಲಿ, ಕರ್ಕಾಟಕಶೃಂಗೀ, ಮೇದ, ನೆಲನೆಲ್ಲೀ, ಏಲಕ್ಕಿ, ಜೀವಂತಿ, ದ್ರಾಕ್ಷೆ, ಪುಷ್ಕರಮೂಲ, ಶ್ರೀಗಂಧ, ಕಚೋರ, ಅಗಿಲು, ಬಿಳಿಕೊಮ್ಮೆ ಬೇರು, ಕಾಕೋಲೀ, ಕ್ಷೀರಕಾಕೋಲೀ, ಕಾಗೆತೊಂಡೆ, ಅಮೃತಬಳ್ಳಿ, ನೆಲಗುಂಬಳ, ಆಡುಸೋಗೆ ಇವು ಪ್ರತ್ಯೇಕ ೧ ಪಲ ಇವನ್ನೆಲ್ಲಾ ಜಜ್ಜಿ ಒಂದು ದ್ರೋಣ ನೀರಿನಲ್ಲಿ ಹಾಕಿ

ಕಾಯಿಸಬೇಕು ಬಲಿತ ನೆಲ್ಲೀಕಾಯಿ ೫೦೦ನ್ನು ಬಟ್ಟೆಯಲ್ಲಿ ಸಡಿಲವಾಗಿ ಕಟ್ಟಿ ಕಷಾಯದ ಪಾತ್ರೆಯಲ್ಲಿ ಹಾಕಬೇಕು. ಪಾದಾವಶೇಷ ಕ್ವಾಥವಾದ ಮೇಲೆ ಅದನ್ನು ಶೋಧಿಸಿ ಅದಕ್ಕೆ ೫೦ ಪಲ ಕಲ್ಲುಸಕ್ಕರೆಯನ್ನು ಹಾಕಿ ಪಾಕ ಮಾಡಬೇಕು. ಬಾಯಗಲವಿರುವ ಕಲಾಯಿಪಾತ್ರೆಗೆ ಒಂದು ಗೋಣಿತಾಟನ್ನು ಕಟ್ಟಿ ನೆಲ್ಲೀಕಾಯಿಗಳ ಬೀಜ ಬಿಡಿಸಿ ಸಿಪ್ಪೆಯನ್ನು ತಾಟಿನ ಮೇಲೆ ಉಜ್ಜ ಬೇಕು. ತಿರುಳು ಭಾಗವು ಪಾತ್ರೆಯೊಳಕ್ಕೆ ಇಳಿಯುವುದು. ಇದನ್ನು ಅಚ್ಚಎಳ್ಳೆಣ್ಣೆ ೧೨ ಪಲ ಮತ್ತು ತುಪ್ಪ ೧೨ ಪಲಗಳಿಂದ ದ್ರವಾಂಶ ಹೋಗುವಂತೆ ಹುರಿದು ಪಾಕಕ್ಕೆ ಹಾಕಬೇಕು. ಪ್ರತಿವಾಪಕ್ಕೆ ಬಿದಿರುಪ್ಪು ೪ ಪಲ, ಹಿಪ್ಪಲಿ ೨ ಪಲ, ಚಾತುರ್ಜಾತಕಗಳು ಪ್ರತ್ಯೇಕ ೧ ಪಲ, ಚೂರ್ಣಿಸಿ ಹಾಕಿ ಆರಿದ ಮೇಲೆ ೧೨ ಪಲ ಜೇನುತುಪ್ಪವನ್ನು ಸೇರಿಸಬೇಕು.

ಪ್ರಮಾಣ—·||· ರಿಂದ ೧ ತೊಲ ಬಿಸಿ ಹಾಲಿನೊಂದಿಗೆ ದಿನಕ್ಕೆರಡು ಸಲ ಸೇವಿಸಬೇಕು.

ಉಪಯೋಗ—ಧಾತುವರ್ಧಕ, ರಕ್ತಪಿತ್ತಹರ, ಕಾಸ, ಶ್ವಾಸ, ಕ್ಷಯ, ಹೃದ್ರೋಗ, ಮೂತ್ರ ಮತ್ತು ಶುಕ್ರಾಶ್ರಯವಾದ ರೋಗಗಳನ್ನು ಹೋಗಲಾಡಿ ಸುತ್ತದೆ. ಶ್ರೇಷ್ಠವಾದ ರಸಾಯನ.

## ೮೪. ದ್ರಾಕ್ಷಾದಿರಸಾಯನ

ದ್ರಾಕ್ಷೆ ೧೫ ಸೇ., ಕಲ್ಲುಸಕ್ಕರೆ ೧೨·||· ಸೇ , ತುಪ್ಪ ೨·||· ಸೇ.

ಚೂರ್ಣದ್ರವ್ಯಗಳು—ಚಾತುರ್ಜಾತಕಗಳು ಪ್ರತ್ಯೇಕ ೬ ತೊಲ, ತ್ರಿಕಟು ಪ್ರತ್ಯೇಕ ೬ ತೊಲ, ಜಾಕಾಯಿ, ಜಾಪತ್ರೆ, ಧನಿಯಾ, ಶ್ರೀಗಂಧ ಪ್ರತಿ ಯೊಂದೂ ೬ ತೊಲ. ದ್ರಾಕ್ಷೆಯನ್ನು ಬಿಡಿಸಿ ನುಣ್ಣಗೆ ರುಬ್ಬಿ ಸಕ್ಕರೆ ಪಾಕಕ್ಕೆ ಹಾಕಿ ಚೂರ್ಣವನ್ನೂ ತುಪ್ಪವನ್ನೂ ಕಲಸಿಡಬೇಕು. ಕೇಸರಿ ಅರ್ಧ ತೊಲ ಅರೆದು ಮಿಶ್ರಮಾಡಬೇಕು.

ಪ್ರಮಾಣ—·||· ರಿಂದ ೧ ತೊಲ ಬಿಸಿ ಹಾಲಿನೊಂದಿಗೆ ದಿನಕ್ಕೆರಡು ವೇಳೆ.

ಉಪಯೋಗ—ಪಿತ್ತವಿಕಾರಗಳು, ಪಾಂಡು, ಕಾಮಿಲಾಗಳು ಹೋಗು ವುವು. ಬಲ್ಯ ಮತ್ತು ರಸಾಯನವಾದುದು.

## ಕ್ಷಾರ

### ೮೫. ಕಲ್ಯಾಣಕ್ಷಾರ (ಅ ಹೃ.)

ತ್ರಿಕಟು, ತ್ರಿಪಟು, ತ್ರಿಫಲಾ, ಶುದ್ಧ ಜಾಪಾಳಬೀಜ, ಶುದ್ಧ ಭಲ್ಲಾತಕ ಚಿತ್ರಮೂಲ ಇವಿಷ್ಟನ್ನೂ ಸಮಭಾಗ ಹಾಕಿ ಸ್ಥೂಲವಾಗಿ ಚೂರ್ಣಿಸಿ ಅದು ನೆನೆಯುವಷ್ಟು ಮಾತ್ರ ಗೋಮೂತ್ರ ಮತ್ತು ಘೃತಗಳನ್ನು ಸೇರಿಸಿ ಒಂದು ಗಡಿಗೆಯಲ್ಲಿ ಹಾಕಿ ಮುಚ್ಚಳ ಮುಚ್ಚಿ ಸಂಧಿಬಂಧಮಾಡಿ ಬೆಂಕಿಯ ಮೇಲೆ ಗಾಢಾಗ್ನಿಯಿಂದ ಕಾಯಿಸಿ ಸ್ವಾಂಗಶೀತಲವಾದನಂತರ ಒಳಗಿರುವ ಕ್ಷಾರವನ್ನು ತೆಗೆದು ಗಾಜಿನ ಮುಚ್ಚಳದ ಶೀಸೆಯಲ್ಲಿಡಬೇಕು.

ಪ್ರಮಾಣ—೫ ರಿಂದ ೧೦ ಗ್ರೈ. ಮಕ್ಕಳಿಗೆ ವಯಸ್ಸಿಗೆ ತಕ್ಕಂತೆ; ತುಪ್ಪದಲ್ಲಿ ಕೊಡಬೇಕು.

ಉಪಯೋಗ—ಉದಾವರ್ತ, ಮಲಬಂಧ, ಗುಲ್ಮ, ಅರ್ಶ, ಉದರ, ಕೃಮಿ; ಮೂತ್ರಕೃಚ್ಛ್ರಗಳು ನಾಶವಾಗುವುವು. ಸ್ನಿಗ್ಧಾನ್ನಭೋಜನ ಪಥ್ಯ.

## ಅನುಬಂಧ

### ೮೬. ಪಂಚತಿಕ್ತಗುಗ್ಗುಳುಘೃತ (ಅ ಹೃ.ಚಿ. ೨೧)

ಬೇವಿನ ಚೆಕ್ಕೆ, ಅಮೃತಬಳ್ಳಿ, ಆಡುಸೋಗೆಸೊಪ್ಪು, ಕಹಿಪಡವಲ ಮತ್ತು ನೆಲಗುಳ್ಳ ಇವನ್ನು ಪ್ರತ್ಯೇಕ ೧೦ ಪಲ ಸೇರಿಸಿ ಕುಟ್ಟಿ ೧ ದ್ರೋಣ ನೀರಿನಲ್ಲಿ ಹಾಕಿ ಅಷ್ಟಮಾಂಶಕ್ವಾಥಮಾಡಿ ಶೋಧಿಸಿ ಅದಕ್ಕೆ ಹಸುವಿನ ತುಪ್ಪ ೧೬ ಪಲ, ಶುದ್ಧ ಗುಗ್ಗುಳು ೫ ಪಲಗಳನ್ನು ಹಾಕಬೇಕು.

ಕಲ್ಕದ್ರವ್ಯಗಳು—ಅಗಳುಶುಂಠಿ, ವಾಯುವಿಳಂಗ, ದೇವದಾರು, ಗಜಹಿಪ್ಪಲಿ, ಯವಕ್ಷಾರ, ಸರ್ಜಕ್ಷಾರ, ಶುಂಠಿ, ಅರಿಸಿನ, ಸಬ್ಬಸಿಗೆಬೀಜ, ಚವ್ಯ, ಚಂಗಲ್ಕೋಷ್ಠ, ಗಂಗುಂಗೆಬೀಜ, ಮೆಣಸು. ಕೊಡಸಿಗೆ ಬೀಜ, ವೋಮ, ಚಿತ್ರಮೂಲ, ಕಟುಕರೋಹಿಣೀ, ಶುದ್ಧಭಲ್ಲಾತಕಬೀಜ, ಬಜೆ, ಮೋಡಿ, ಮಂಜಿಷ್ಠ, ಅತಿಬಜೆ (ಬಿಳಿ ಮತ್ತು ಕಪ್ಪು) ಮತ್ತು ಅಜಮೋದ ಇವು ಪ್ರತ್ಯೇಕ ಒಂದು ಕರ್ಷ ಎಲ್ಲವನ್ನೂ ಕಲ್ಕಮಾಡಿ ಸೇರಿಸಿ ಮಧ್ಯಪಾಕ ದಲ್ಲಿಳಿಸಿ ಶೋಧಿಸಬೇಕು.

ಪ್ರಮಾಣ—ಅರ್ಧದಿಂದ ಒಂದು ಟೀ ಚಮಚದಷ್ಟು ಅಗ್ನಿಬಲಕ್ಕೆ ತಕ್ಕಂತೆ ದಿನಕ್ಕೆ ಎರಡು ಅಥವಾ ಮೂರು ಸಲ.

ಉಪಯೋಗ—ಕುಷ್ಠ, ನಾಡೀವ್ರಣ, ಗಂಡಮಾಲಾ, ವಾತರೋಗ, ವಾತರಕ್ತ ಮುಂತಾದ ವ್ಯಾಧಿಗಳಲ್ಲಿ ಬಹಳ ಉಪಯೋಗವಾದುದು.

**೮೭. ಪಾಠಾದಿಘೃತ** (ವೈದ್ಯಸಾರ ಸಂಗ್ರಹ)

ಅಗಳುಶುಂಠಿ, ಸ್ವರ್ಣಗೈರಿಕೆ, ಎಲವದಹಗಿನು, ದಾಳಿಂಬೆ ಹಣ್ಣಿನ ಸಿಪ್ಪೆ, ಹೆಮ್ಮರ ಚೆಕ್ಕೆ, ಪ್ರಿಯಂಗು, ಕೊನ್ನಾರಿಗೆಡ್ಡೆ, ದ್ರಾಕ್ಷೆ, ಅತ್ತಿಚೆಕ್ಕೆ, ಶ್ರೀಗಂಧ, ದಾರ್ವೀರಸಾಂಜನ, ಬಜೆ, ಲೋಧ್ರ, ಮಾವಿನ ಬೀಜ, ನೇರಿಳೆ ಬೀಜ, ನೆಲತಾಳಿಗಡ್ಡೆ, ತಾವರೆಗೆಡ್ಡೆ, ಬಾಳೆಗೆಡ್ಡೆ ಇವುಗಳನ್ನು ಸಮಭಾಗ ಹಾಕಿ ಕಲ್ಕಮಾಡಿ ಅದಕ್ಕೆ ಎಂಟು ಭಾಗ ಹಸುವಿನ ತುಪ್ಪ, ತುಪ್ಪಕ್ಕೆ ನಾಲ್ಕ ರಷ್ಟು ಬಿಳಿ ದಾಸವಾಳದ ಹೂವಿನ ರಸ ಮತ್ತು ಹಾಲು ಇವುಗಳನ್ನು ಸೇರಿಸಿ ಮಧ್ಯಪಾಕದಲ್ಲಿ ಘೃತವನ್ನು ತಯಾರಿಸಬೇಕು.

ಪ್ರಮಾಣ—ಅರ್ಧದಿಂದ ಒಂದು ಚಮಚದಷ್ಟನ್ನು ದಿನಕ್ಕೆರಡು ಸಲ ಸಕ್ಕರೆ ಅಥವಾ ಹಾಲಿನೊಂದಿಗೆ.

ಉಪಯೋಗ—ವಿವಿಧ ಪ್ರದರಗಳು, ಯೋನಿಶೂಲೆ ಮತ್ತು ರಕ್ತಸ್ರಾವ ಗಳು ನಿಲ್ಲುವುವು.

**೮೮. ಗೋಕ್ಷುರಾದಿಗುಗ್ಗುಳು** (ಶಾ.ಸಂ.)

ನೆಗ್ಗಿಲುಸಮೂಲ ೨೮ ಪಲ, ನೀರು ೧೬೮ ಪಲ; ಅರ್ಧಾವಶೇಷಕ್ವಾಥ ಮಾಡಿ ಶೋಧಿಸಿ ಪುನಃ ಕಾಯಿಸಬೇಕು. ಇದರಲ್ಲಿ ಶುದ್ಧ ಗುಗ್ಗುಳು ೭ ಪಲ ಹಾಕಿ ಅದು ಬೆಲ್ಲದ ಪಾಕದಂತೆ ಗಟ್ಟಿಯಾಗುತ್ತಿರುವಾಗ ತ್ರಿಕಟು, ತ್ರಿಫಲಾ ಮತ್ತು ಕೊನ್ನಾರಿಗೆಡ್ಡೆ ಇವನ್ನು ಪ್ರತ್ಯೇಕ ಒಂದು ಪಲ ಹಾಕಿ ಒಟ್ಟು ಏಳು ಪಲ ಚೂರ್ಣವನ್ನು ಸೇರಿಸಿ ಎರಡೆರಡು ಗ್ರೈನ್ ವಟಗಳನ್ನು ಮಾಡಬೇಕು.

ಪ್ರಮಾಣ—೧ ರಿಂದ ೩ ವಟಿಗಳನ್ನು ದಿನಕ್ಕೆ ಎರಡು ಅಥವಾ ಮೂರು ವೇಳೆ ತಕ್ಕ ಅನುಪಾನದೊಡನೆ ಉಪಯೋಗಿಸಬೇಕು.

ಉಪಯೋಗ—ಮೂತ್ರಕೃಚ್ಛ್ರ, ಪ್ರಮೇಹ, ಶುಕ್ರದೋಷ, ವಾತರಕ್ತ ಮುಂತಾದುವನ್ನು ಹೋಗಲಾಡಿಸುತ್ತದೆ.

# ಪೇಯುಗಳು

ಅಕ್ಕಿನುಚ್ಚು, ರವೆ ಮುಂತಾದುವನ್ನು ೧೪ರಷ್ಟು ನೀರು ಅಥವಾ ಕ್ವಾಥ ದಿಂದ ಕುಡಿಯುವಷ್ಟು ಗಟ್ಟಿಯಾಗಿ ಮಾಡುವ ಗಂಜಿಗೆ **ಪೇಯ** ಎಂದು ಹೆಸರು.

**ಮಂದಾಗ್ನಿಗೆ** ಪಂಚಕೋಲ ಕ್ವಾಥದಿಂದ ಮಾಡಿದ ಪೇಯವು ಅಗ್ನಿ ವೃದ್ಧಿಯನ್ನು ಮಾಡುವುದು. **ಆಮಾತೀಸಾರಿಗೆ** ಪೋಟಿಹುಳಿ ಮತ್ತು ಅತಿ ಬಜೆಗಳ ಪೇಯವೂ, **ರಕ್ತಾತೀಸಾರಿಗೆ** ಬಿಳಿ ತಾವರೆಗೆಡ್ಡೆ, ಶುಂಠಿ, ಲಾವಂಚ ಮತ್ತು ಆಡಿನ ಹಾಲು ಇವುಗಳಿಂದ ಸಿದ್ಧವಾದ ಪೇಯವೂ, **ಪಕ್ವಾತೀ ಸಾರಿಗೆ** ದಾಳಿಂಬೆಹಣ್ಣಿನ ಸಿಪ್ಪೆಯಿಂದ ಮಾಡಿದ ಪೇಯವೂ ಹಿತವಾದುದು. **ಮೂತ್ರಕೃಚ್ಛ್ರ**ದಲ್ಲಿ ನೆಲಗುಳ್ಳ ಮತ್ತು ನೆಗ್ಗಿಲುಗಳಿಂದಾದ ಪೇಯವೂ **ಕ್ರಿಮಿ** ರೋಗದಲ್ಲಿ ನುಗ್ಗೆ, ಮೆಣಸು, ಹಿಪ್ಪಲಿ ಮತ್ತು ಮೋಡಿಗಳಿಂದಾದ ಪೇಯವೂ ಒಳ್ಳೆಯದು. **ಬಾಯಾರಿಕೆ**ಗೆ ಸೊಗದೆ ಬೇರು, ಶುಂಠಿ, ಭತ್ತ ವರಳು ಮತ್ತು ದ್ರಾಕ್ಷೆಗಳಿಂದ ಮಾಡಿದ ಗಂಜಿಗೆ ಸ್ವಲ್ಪ ಜೇನುತುಪ್ಪವನ್ನು ಹಾಕಿ ಕುಡಿಸಬೇಕು. **ಶ್ವಾಸ, ಹಿಕ್ಕಾ ಮತ್ತು ಕಾಸ**ಗಳಲ್ಲಿ ದಶಮೂಲ ಸಿದ್ಧ ಪೇಯವನ್ನು ಕುಡಿಸುವುದರಿಂದ ಅವು ಶಮನವಾಗುವುವು. **ಪಕ್ವಾಶಯ** ರೋಗಗಳಲ್ಲೆಲ್ಲಾ ತುಪ್ಪ ಮತ್ತು ಎಣ್ಣೆಗಳನ್ನು ಸೇರಿಸಿ ಅಕ್ಕಿ ಅಥವಾ ರವೆಯನ್ನು ಹುರಿದು ಪೇಯವನ್ನು ಮಾಡಿ ಅದಕ್ಕೆ ಸ್ವಲ್ಪವೇ ಮದ್ಯವನ್ನು ಬೆರಸಿ ಕುಡಿಸಬೇಕು. **ಮಲಬಂಧ**ದಲ್ಲಿ ಕಾಯಿಪಲ್ಯ, ಮಾಂಸ, ಎಳ್ಳು, ಉದ್ದುಗಳಿಂದ ಮಾಡಿದ ಪೇಯವು ಹಿತವಾದುದು. **ಗ್ರಹಣೀ** ರೋಗಿಗೆ ಬಿಲ್ವದ ತಿರುಳು, ಬೇಲದ ತಿರುಳು, ನೇರಿಳೆ ಮತ್ತು ಮಾವಿನ ಬೀಜಗಳು ಸೇರಿ ರುವ ಪೇಯವು ಉತ್ತಮವಾದುದು. **ಮೂಢವಾತ**ದಲ್ಲಿ ಅಳಲೆಕಾಯಿ, ಮೋಡಿ ಮತ್ತು ಶುಂಠಿಗಳಿಂದಾದ ಪೇಯವು ಅನುಲೋಮನ ಮಾಡುತ್ತದೆ. **ಘೃತದ ಅತಿಯೋಗ**ದಿಂದಾದ ಅಜೀರ್ಣಕ್ಕೆ ತಕ್ರಪೇಯವೂ, **ತೈಲಾ ಜೀರ್ಣ**ಕ್ಕೆ ತಕ್ರ ಮತ್ತು ಕಿಣ್ವದ ಪೇಯವೂ ಒಳ್ಳೆಯದು. **ಮದ್ಯವಿಕಾರ** ದಲ್ಲಿ ಬಸಳೆಸೊಪ್ಪಿನ ಪೇಯವು ಉತ್ತಮವಾದುದು. **ರೇತೋಮಾರ್ಗ** ವಿಕಾರಗಳಲ್ಲಿ ಕೋಳಿಮಾಂಸದಿಂದ ಸಿದ್ಧಮಾಡಿದ ಪೇಯವು ಶಮನಕಾರಿಯಾದುದು.

---

# ಅಶುದ್ಧ ಮತ್ತು ಶುದ್ಧಪತ್ರಿಕೆ

| ಪುಟ | ಪಙ್ತ್ತಿ | ಅಶುದ್ಧ | ಶುದ್ಧ |
|---|---|---|---|
| ೪ | ೨೪ | ಕಾಷಾಯಾಂ | ಕಷಾಯಾಂ |
| ೧೦ | ೧೭ | ತೃತೀಯಕ | ಅನ್ಯೇದ್ಯುಷ್ಕ |
| ,, | ೨೧ | ಚತುರ್ಪಂಚ | ಚತುಷ್ಪಂಚ |
| ೧೫ | ೧೪ | ಕಂಡೂಕೋರ | ಕಂಡೂರುಕ್ಕೋರ |
| ೧೬ | ೫ | ವರ್ಜ್ಯನಂ | ವರ್ಜನಂ |
| ೨೧ | ೨೦ | ಇವುಗಳು . ಒಟ್ಟು ಸಮಭಾಗ | ಇವುಗಳ ಪೈಕಿ ಪ್ರತಿಯೊಂದಕ್ಕೂ ಸಮ ಭಾಗ ಶ್ರೀಗಂಧದ |
| ೨೨ | ೩ | ಕಷಾಯವನ್ನು. . | ಶೀತಕಷಾಯದಲ್ಲಿ ಕಾದ ಇಟ್ಟಿಗೆಯನ್ನು ಅದ್ದಿದ |
| ೪೨ | ೫ | ಗಭಿಣ್ಯಾಶ್ಚಾಪಿ | ಗರ್ಭಿಣ್ಯಾಶ್ಚಾಪಿ |
| ೪೭ | ೧೮ | ಲೇಹಾದಿರ್ಭಃ | ಲೇಹಾದಿಭಿಃ |
| ೪೯ | ೧೭ | ಓೀಪ್ತಾಗ್ನಿ | ದೀಪ್ತಾಗ್ನಿ |
| ೬೪ | ೧೫ | ಇದೇರೀರಿ | ಇದೇ ರೀತಿ |
| ೬೭ | ೧ | ತ್ವಸ್ಫೋಟನಂ | ತ್ವಕ್ ಸ್ಫೋಟನಂ |
| ೮೪ | ೪ | ರ್ಷಣಮ್ ಶತಧೌಲೇಪಃ | ಹರ್ಷಣಮ್ ಶತಧೌತಲೇಪಃ |
| ೯೨ | ೧೨ | ವಾತಶ್ಲೇಷ್ಮಾವತೇ | ವಾತಶ್ಲೇಷ್ಮಾವೃತೇ |
| ,, | ೧೯ | ತ್ರೂಷಣ | ತ್ರ್ಯೂಷಣ |
| ೧೦೭ | ೨೨ | ಹ್ಯತಭುಕ್ | ಹುತಭುಕ್ |
| ೧೦೯ | ೨೩ | ಗುಣಗಳ | ಗಣಗಳ |
| ೧೧೨ | ೩ | ಶಸ್ತ್ರದಿಂದ | ಯಂತ್ರದಿಂದ |
| ೧೨೬ | ೨೧ | ವರಕ್ತೋ | ವಿರಿಕ್ತೋ |
| ೧೩೧ | ೩ | ಮೂತ್ರ | ಮಾತ್ರ |
| ೧೩೭ | ೧ | ಉಪಪ್ರವಗಳು | ಉಪದ್ರವಗಳು |
| ೧೪೨ | ೫ | ನವಾಯಸಯಂವಾ | ನವಾಯಸಂವಾ |
| ೧೭೨ | ೨೪ | ಆಧಾನ | ಆಧ್ಮಾನ |
| ೧೮೨ | ೧೬ | ಸ್ಥಾಯು | ಸ್ನಾಯು |
| ೧೯೬ | ೨೨ | ಅಭೇಷ | ಅಭೇಷಜ |
| ೧೯೮ | ೨ | ಭವತ್ಯಚೋರ್ಣೇ | ಭವತ್ಯಚೂರ್ಣೇ |
| ,, | ೧೩ | ವಾತಾಪಿಕ | ವಾತಾತಪಿಕ |
| ೨೯೫ | ೧೭ | ಸಹಸ | ಸಹಸ್ರ |
| ೨೨೯ | ೭ | ೧೯ರಿಂದ | ೧೦ರಿಂದ |
| ೨೩೯ | ೫ | ಮಸ್ತು ೧೬ ಪಲ. ಮತ್ತು | ಮತ್ತು ಮಸ್ತು ೧೬ ಪಲ. |
| ೨೪೧ | ೬ | ಅಳಲೆಕಾಯಿ, ಅತಿಮಧುರ | ಅಳಲೆಕಾಯಿ, ನೈಲುತುತ್ಥ, ಅತಿಮಧುರ |
| ೨೪೩ | ೧೫ | ಸೇರಿ | ಸೇರಿಸಿ |